ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೨೯

ಶ್ರೀವೇದವ್ಯಾಸರಿಂದ ರಚಿತವಾದ

# ನಾರದೀಯ ಮಹಾಪುರಾಣ

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

## ಭಾಗ—೭

(೯೨—೧೨೫ ಅಧ್ಯಾಯಗಳು)




ಪಂಡಿತ ಶಿರೋಮಣಿ, ಮಹಾವಿದ್ವಾನ್, ವಿದ್ವನ್ಮಣಿ,

**ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ.**

ಅನುವಾದಕ.





ಮೈಸೂರು

ಶ್ರೀಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೮

# ಪುರಾಣವೃತ್ತಾಂತ

ಪುರಾಣಗಳಲ್ಲಿ ಜಗದೊಡೆಯನಾದ ಪರಮಪುರುಷನ ದಿವ್ಯವೈಭವ, ವಿವಿಧ ವಿದ್ಯೆಗಳ ತತ್ತ್ವ, ಭಗವದ್ಭಕ್ತರ ಪುಣ್ಯಚರಿತ್ರೆ, ಕರ್ತವ್ಯ ವ್ರತಗಳು, ಪುಣ್ಯತಮ ಕ್ಷೇತ್ರ, ತೀರ್ಥ, ಪರ್ವತ, ನದೀ ವನ ಮುಂತಾದುವುಗಳ ಇತಿಹಾಸ, ದೇವ, ಮುನಿ, ಗಂಧರ್ವಾದಿಗಳ ವಿಚಿತ್ರಕಥೆಗಳು, ವರ್ಣಾಶ್ರಮಧರ್ಮ, ರಾಜ ನೀತಿ, ಭಕ್ತಿಮಾರ್ಗ, ಮೋಕ್ಷಧರ್ಮ ಮುಂತಾದುವನ್ನು ಮನ ನಾಟುವಂತೆ ಸರಳೋದಾಹರಣೆಗಳಿಂದ ವಿವರಿಸಿದೆ. ಅವುಗಳ ಮನನಮಾಡುವವನಿಗೆ ಅಂತಃಕರಣಪರಿಶುದ್ಧಿಯಾಗಿ ತತ್ತ್ವಜ್ಞಾನವಾಗುವುದು. ಬಳಿಕ ಅವನು ಧ್ಯಾನಯೋಗನಿರತನಾಗಿ ಪರಮ ಶ್ರೇಯೋಭಾಗಿಯಾಗುವನೆಂಬುದೇ ಮಾನವ ತೆಯ ಪರಾಕಾಷ್ಠೆಯು.

ಹೀಗೆ ಉತ್ತಮ ಶ್ರೇಯಸ್ಸಿಗೆ ಸಾಧಕವಾದ ಪುರಾಣಗಳಲ್ಲಿನ ವಿಷಯ ಗಳಾವುವು? ಅವು ಯಾವ ಯಾವ ಪುರಾಣಗಳಲ್ಲಿ ಎಷ್ಟರಮಟ್ಟಿಗೆ ವಿವರಿ ಸಲ್ಪಟ್ಟಿವೆ? ಪುರಾಣಗಳು ಎಷ್ಟು? ಒಂದೊಂದು ಪುರಾಣದಲ್ಲಿ ಎಷ್ಟೆಷ್ಟು ಗ್ರಂಥಗಳು ಅಡಗಿವೆ? ಮುಂತಾದುವನ್ನು ವಿಚಾರಮಾಡಿ ನಿರ್ಣಯಿಸಿಕೊಳ್ಳು ವುದು ಅತ್ಯವಶ್ಯಕವು.

ಪುರಾಣಗಳು ಒಂದು ಕೋಟಿ ಗ್ರಂಥ ಪರಿಮಿತಿಯುಳ್ಳುದಾಗಿ ಅಪಾರ ವಾಗಿದ್ದಿತು. ದ್ವಾಪರಯುಗದ ಅಂತ್ಯಭಾಗದಲ್ಲಿ ಶ್ರೀವೇದವ್ಯಾಸರು ಮುಂದಿನ ಕಲಿಯುಗದಲ್ಲಿ ಜನರು ಅಲ್ಪಮೇಧಾವಿಗಳಾಗುವರೆಂಬುದನ್ನರಿತು ಅವರ ಜ್ಞಾನ ಶಕ್ತಿಗೂ ನಿಲುಕುವಂತೆ ಬಹುವಿಸ್ತಾರವಾದ ಪುರಾಣಗಳ ಸಾರವನ್ನು ಸಂಗ್ರಹಿಸಿ ನಾಲ್ಕುಲಕ್ಷ ಗ್ರಂಥಗಳಲ್ಲಿ ಅಡಗಿಸಿ ಅದನ್ನು ವಿಷಯಾದಿಗಳಿಗನುಗುಣವಾಗಿ ಹದಿನೆಂಟು ಮಹಾಪುರಾಣಗಳಾಗಿ ವಿಂಗಡಿಸಿ ತತ್ತ್ವಜ್ಞಾನವನ್ನು ಹರಡಿದರು.

ಘೋರವಾದ ಈ ದುಷ್ಕಾಲದಲ್ಲಿ ಸಾಮಾನ್ಯವಾಗಿ ಮನುಷ್ಯರಿಗೆ ಚಿತ್ತ ವ್ಯಾಕುಲತೆಯ ಪ್ರಸಂಗವೇ ಹೆಚ್ಚಾಗಿರುವುದರಿಂದ ಏಕಾಗ್ರಮನಸ್ಸಿನಿಂದ ಹದಿನೆಂಟು ಮಹಾಪುರಾಣಗಳನ್ನು ವ್ಯಾಸಂಗಮಾಡಿ ತತ್ತ್ವಜ್ಞಾನವನ್ನು ಸಂಪಾದಿ ಸುವುದೂ ಸಹ ಅಸಾಧ್ಯವಾಗಿಯೇ ಕಂಡುಬರುತ್ತದೆ. ಇಂತಹ ಸಂದರ್ಭ ಗಳಲ್ಲಿಯೂ ಸಹ ಪುರಾಣಗಳ ಸಾಮಾನ್ಯ ಪರಿಚಯದಿಂದಲಾದರೂ ಜನತೆಯ

ಉದ್ಧಾರವಾಗಲೆಂದು ಭಾವಿಸಿ ಶ್ರೀವೇದವ್ಯಾಸರು ಈ ನಾರದೀಯ ಪುರಾಣ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ಹದಿನೆಂಟು ಪುರಾಣಗಳಲ್ಲಿ ಹೇಳಿರುವ ವಿಷಯಗಳನ್ನು ಕ್ರಮವಾಗಿ ಹದಿನೆಂಟು ಅಧ್ಯಾಯ (೯೨-೧೦೯) ಗಳಿಂದ ಸಂಗ್ರಹಿಸಿ ಆಯಾಯಾ ಪುರಾಣಗಳ ಗ್ರಂಥಪರಿಮಿತಿ, ಅವಾಂತರವಿಭಾಗ ಮುಂತಾದುವನ್ನೂ ಸಹ ನಿರ್ಣಯಿಸಿರುವರು. ಅದು ಬಹು ಮುಖ್ಯವಾದ ವಿಷಯ. ಇದನ್ನು ಗಮನಿಸಿದರೆ ಪುರಾಣಗಳ ವಿಷಯದಲ್ಲಿ ಸುಧಾರಕರು ಮಾಡುವ ಆಕ್ಷೇಪಗಳಿಗೆ ಬಹುಮಟ್ಟಿಗೆ ಪರಿಹಾರವು ದೊರೆಯುವುದು. ಹೀಗೆ ಪುರಾಣ ಸರ್ವಸ್ವವನ್ನೊಳಗೊಂಡಿರುವ ಈ ನಾರದೀಯ ಮಹಾಪುರಾಣವು ಅತ್ಯಂತೋಪ ಕಾರಕವು. ಇದನ್ನು ಅಧ್ಯಯನಮಾಡುವುದರಿಂದ ಎಲ್ಲಾ ಪುರಾಣಗಳನ್ನೂ ಶ್ರವಣಮಾಡಿದಂತಾಗಿ ಉತ್ತಮ ಶ್ರೇಯಸ್ಸು ಲಭಿಸುವುದು. ಅನಂತರಾಧ್ಯಾಯ (೧೧೦-೧೨೫) ಗಳಲ್ಲಿ ವರ್ಷದಲ್ಲಿನ ಮುನ್ನೂರರವತ್ತು ತಿಥಿಗಳ ಇತಿಹಾಸ, ಅವು ಗಳಲ್ಲಿ ಕರ್ತವ್ಯ ವ್ರತ, ಪೂಜೆ ಮುಂತಾದುವನ್ನು ವಿಸ್ತಾರವಾಗಿ ಹೇಳಿದೆ ಅದು ಈಗ ನಡೆವಳಿಕೆಯಲ್ಲಿರುವ ವ್ರತಾದಿಗಳಿಗೆ ಮೂಲವನ್ನು ಕಂಡುಹಿಡಿದು ಅದರ ತಿರಳನ್ನರಿತು ಮನಃಪೂರ್ವಕವಾಗಿ ಅನುಷ್ಠಾನಮಾಡಲು ಸಾಧಕವಾಗಿದೆ

ಈರೀತಿಯಾಗಿ ೩೪ ಅಧ್ಯಾಯ (೯೨-೧೨೫) ಗಳನ್ನೊಳಗೊಂಡಿರುವ ಪೂರ್ವಭಾಗದ ನಾಲ್ಕನೆಯ ಪಾದವು ಈ ಸಂಪುಟದಲ್ಲಿ ಅಡಕವಾಗಿದೆ.

ಇಂತಹ ಅಮೂಲ್ಯವಾದ ತತ್ವಾರ್ಥಗಳನ್ನೊಳಗೊಂಡಿರುವ ಈ ಪುರಾಣವು ಸಂಸ್ಕೃತಭಾಷೆಯಲ್ಲಿರುವುದರಿಂದ ಅದನ್ನರಿಯದ ಸಾಮಾನ್ಯ ಜನರಿಗೆ ಪುರಾಣ ತತ್ವಜ್ಞಾನಕ್ಕವಕಾಶವಿಲ್ಲದಿರುವುದನ್ನು ಘನಚಿತ್ತಕ್ಕೆ ತಂದು ಇದನ್ನು ಕನ್ನಡ ಭಾಷೆಗೆ ಪರಿವರ್ತಿಸುವಂತೆ ನನಗೆ ಅವಕಾಶವನ್ನು ದಯೆಪಾಲಿಸಿ, ಕನ್ನಡನಾಡಿನ ಪ್ರಜೆಗಳಿಗೆ ಜ್ಞಾನಜ್ಯೋತಿಯನ್ನು ಬೆಳಗಿಸಿ ಮಹೋಪಕಾರ ಮಾಡುತ್ತಿರುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ. ಎಸ್.ಐ.,** ಮಹಾಪ್ರಭುಗಳ ಸನ್ನಿಧಾನದಲ್ಲಿ ಕೃತಜ್ಞತೆಯನ್ನರ್ಪಿಸಿ ಮಹಾ ಸ್ವಾಮಿಯವರಿಗೆ ಭಗವಂತನು ಆಯುರಾರೋಗ್ಯ ಸತ್ಸಂತಾನಾದಿ ಸಂಪತ್ತು ಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು,
ಸರ್ವಜಿನ್ನಾಮ ಸಂ॥ ಫಾಲ್ಗುಣ ಶುಕ್ಲ. ೧೨

22—3—1948

ಅನುವಾದಕ
ಪಂಡಿತಶಿರೋಮಣಿ, ವಿದ್ವನ್ಮಣಿ,
ಮಹಾವಿದ್ವಾನ್
**ಡಿ. ವಾಸುದೇವಾಚಾರ್ಯ**

# ವಿಷಯಾನುಕ್ರಮಣಿಕೆ

ಪುಟಸಂಖ್ಯೆ

|| ಶ್ರೀಃ ||

# ನಾರದೀಯ ಮಹಾಪುರಾಣಂ

## ಚತುರ್ಥಃ ಪಾದಃ

## ದ್ವಿನವತಿತಮೋಽಧ್ಯಾಯಃ



ಸೂತ ಉವಾಚ

ಏತಚ್ಛ್ರುತ್ವಾ ನಾರದಸ್ತು ಕುಮಾರಸ್ಯ ವಚೋ ಮುದಾ ।
ಪುನರಪ್ಯಾಹ ಸುಪ್ರೀತೋ ಜಿಜ್ಞಾಸುಃ ಶ್ರೇಯ ಉತ್ತಮಂ || ೧ ||

ನಾರದ ಉವಾಚ

ಸಾಧು ಸಾಧು ಮಹಾಭಾಗ ಸರ್ವಲೋಕೋಪಕಾರಕಂ ।
ಮಹಾತಂತ್ರಂ ತ್ವಯಾ ಪ್ರೋಕ್ತಂ ಸರ್ವತಂತ್ರೋತ್ತಮೋತ್ತಮಂ || ೨ ||

---

## ನಾಲ್ಕನೆಯ ಪಾದ

## ತೊಂಬತ್ತೆರಡನೆಯ ಅಧ್ಯಾಯವು

೧. ಸೂತನು ಹೇಳಿದನು:—ಸನತ್ಕುಮಾರನ ಉಪದೇಶವನ್ನು ಕೇಳಿ ನಾರದನು ಅತ್ಯಂತ ಸಂತೋಷಪಟ್ಟು ಉತ್ತಮ ಶ್ರೇಯಸ್ಸನ್ನು ತಿಳಿಯಬೇಕೆಂದು ಬಯಸಿ ಪುನಃ ಪ್ರಶ್ನೆ ಮಾಡಿದನು.

೨. ನಾರದನು ಹೇಳಿದನು:—ಧನ್ಯನಾದ ಸನತ್ಕುಮಾರನೇ ! ಒಳ್ಳೆಯದು, ಒಳ್ಳೆಯದು ! ಸಕಲಲೋಕಕ್ಕೂ ಹಿತಕರವೂ, ಸಕಲತಂತ್ರೋತ್ತಮವೂ ಆಗಿರುವ ಮಹಾತಂತ್ರಶಾಸ್ತ್ರವನ್ನು ಹೇಳಿರುವೆ.

ಅಧುನಾ ಶ್ರೋತುಮಿಚ್ಛಾಮಿ ಪುರಾಣಾಖ್ಯಾನಮುತ್ತಮಂ ।
ಯಸ್ಮಿನ್ಯಸ್ಮಿನ್ಪುರಾಣೇ ತು ಯದ್ಯದಾಖ್ಯಾನಕಂ ಮುನೇ ॥ ೩ ॥

ತತ್ಸರ್ವಂ ಮೇ ಸಮಾಚಕ್ಷ್ವ ಸರ್ವಜ್ಞಸ್ತ್ವಂ ಯತೋ ಮತಃ ॥

ಸೂತ ಉವಾಚ

ತಚ್ಛ್ರುತ್ವಾ ವಚನಂ ವಿಪ್ರಾ ನಾರದಸ್ಯ ಶುಭಾವಹಂ ।
ಪುರಾಣಾಖ್ಯಾನಸಂಪ್ರಶ್ನಂ ಕುಮಾರಃ ಪ್ರತ್ಯುವಾಚ ಹ ॥ ೪ ॥

ಸನತ್ಕುಮಾರ ಉವಾಚ

ಪುರಾಣಾಖ್ಯಾನಕಂ ವಿಪ್ರ ನಾನಾಕಲ್ಪಸಮುದ್ಭವಂ ।
ನಾನಾಕಥಾಸಮಾಯುಕ್ತಮದ್ಭುತಂ ಬಹುವಿಸ್ತರಂ ॥ ೫ ॥

ಋಷಿಃ ಸನಾತನಶ್ಚಾಯಂ ಯಥಾ ವೇದ ತಥಾ ಪರಃ ।
ನ ವೇದ ತಸ್ಮಾತ್ಪೃಚ್ಛ ತ್ವಂ ಬಹುಕಲ್ಪವಿದಾಂ ವರಂ ॥ ೬ ॥

---

೩. ಮುನಿಯೇ! ಈಗ ಪುರಾಣಗಳಲ್ಲಿನ ವಿಷಯಗಳನ್ನು ಕೇಳ ಬಯಸುವೆನು. ಯಾವ ಯಾವ ಪುರಾಣದಲ್ಲಿ ಯಾವ ಯಾವ ಕಥೆಗಳು ಹೇಳಲ್ಪಟ್ಟಿವೆಯೋ ಅವೆಲ್ಲವನ್ನೂ ಸರ್ವಜ್ಞನಾದ ನೀನು ನನಗೆ ಹೇಳು.

೪. ಸೂತನು ಹೇಳಿದನು:—ಬ್ರಾಹ್ಮಣರೇ! ಪುರಾಣಕಥಾವಿಷಯಕ ವಾದ, ನಾರದನ ಶ್ರೇಯಸ್ಕರವಚನವನ್ನು ಕೇಳಿ ಸನತ್ಕುಮಾರನು ಉತ್ತರ ಹೇಳಿದನು.

೫-೬. ಸನತ್ಕುಮಾರನು ಹೇಳಿದನು:—ಬ್ರಾಹ್ಮಣನಾದ ನಾರದನೇ! ಬಹುಕಲ್ಪಗಳಲ್ಲಿ ನಡೆದ ಬಹು ಕಥೆಗಳಿಂದ ಕೂಡಿದ, ಆಶ್ಚರ್ಯಕರವೂ, ಬಹು ವಿಸ್ತಾರವೂ ಆಗಿರುವ ಪುರಾಣೋಕ್ತವಿಷಯಗಳನ್ನು ಈ ಸನಾತನ ಋಷಿಯು ತಿಳಿದಿರುವಂತೆ ಇನ್ನಾರೂ ತಿಳಿದಿಲ್ಲ. ಆದಕಾರಣ ಬಹುಕಲ್ಪಜ್ಞಾನಿಗಳಲ್ಲಿ ಶ್ರೇಷ್ಠನಾದ ಈ ಸನಾತನಮುನಿಯನ್ನು ಕೇಳು.

ಶ್ರುತ್ವೇತ್ಥಂ ನಾರದೋ ವಾಕ್ಯಂ ಕುಮಾರಸ್ಯ ಮಹಾತ್ಮನಃ |
ಪ್ರಣಮ್ಯ ವಿನಯೋಪೇತಃ ಸನಾತನಮಥಾಬ್ರವೀತ್ || ೭ ||

ನಾರದ ಉವಾಚ

ಬ್ರಹ್ಮನ್ಪುರಾಣವಿಚ್ಛ್ರೇಷ್ಠ ಜ್ಞಾನವಿಜ್ಞಾನತತ್ಪರಂ |
ಪುರಾಣಾನಾಂ ವಿಭಾಗಂ ಮೇ ಸಾಕಲ್ಯೇನಾನುಕೀರ್ತಯ || ೮ ||

ಯಸ್ಮಿನ್ ಶ್ರುತೇ ಶ್ರುತಂ ಸರ್ವಂ ಜ್ಞಾತೇ ಜ್ಞಾತಂ ಕೃತೇ ಕೃತಂ || ೯ ||

ವರ್ಣಾಶ್ರಮಾಚಾರಧರ್ಮಂ ಸಾಕ್ಷಾತ್ಕಾರಮುಪೇಕ್ಷ್ಯತಿ |
ಕಿಯಂತಿ ಚ ಪುರಾಣಾನಿ ಕಿಯತ್ಸಂಖ್ಯಾನಿ ಸೂತ ನಃ || ೧೦ ||

ಕಿಂಕಿಮಾಖ್ಯಾನಯುಕ್ತಾನಿ ತದ್ವದಸ್ವ ಮಮ ಪ್ರಭೋ |
ಚಾತುರ್ವರ್ಣ್ಯಾಶ್ರಯಾ ನಾನಾವ್ರತಾದೀನಾಂ ಕಥಾಸ್ತಥಾ || ೧೧ ||

---

೭. ಮಹಾತ್ಮನಾದ ಸನತ್ಕುಮಾರನ ಈ ವಾಕ್ಯವನ್ನು ನಾರದನು ಕೇಳಿ ನಮಸ್ಕರಿಸಿ ವಿನಯಯುಕ್ತನಾಗಿ ಸನಾತನನನ್ನು ಕುರಿತು ಮಾತನಾಡಿದನು.

೮. ನಾರದನು ನುಡಿದನು:—ಪುರಾಣ ಜ್ಞಾನಿವರೇಣ್ಯನಾದ ಬ್ರಹ್ಮಜ್ಞಾನಿಯೇ! ಜ್ಞಾನ ವಿಜ್ಞಾನಗಳನ್ನು ತಿಳಿಸುವ ಪುರಾಣ ವಿಷಯಾನುಕ್ರಮವನ್ನು ಸಂಪೂರ್ಣವಾಗಿ ನನಗೆ ಹೇಳು.

೯-೧೮. ಯಾವುದನ್ನು ಶ್ರವಣಮಾಡಿದರೆ ಸಕಲವನ್ನೂ ಕೇಳಿದಂತಾಗುವುದೋ, ಯಾವುದನ್ನು ತಿಳಿದರೆ ಅಥವಾ ಮಾಡಿದರೆ ಎಲ್ಲವನ್ನೂ ತಿಳಿದಂತೆ ಅಥವಾ ಮಾಡಿದಂತೆ ಆಗುವುದೋ, ಯಾವುದು ವರ್ಣ ಆಶ್ರಮ ಇವುಗಳ ಆಚಾರಧರ್ಮಗಳನ್ನು ಪ್ರತ್ಯಕ್ಷವಾಗುವಂತೆ ನಿರೂಪಿಸುವುದೋ ಅಂತಹ ಪುರಾಣಗಳು ಎಷ್ಟು?

**ಸೃಷ್ಟಿಕ್ರಮೇಣ ವಂಶಾನಾಂ ಕಥಾಃ ಸಮ್ಯಕ್ಪ್ರಕಾಶಯ |**
**ತ್ವತ್ತೋಽಧಿಕೋ ನ ಚಾನ್ಯೋಽಸ್ತಿ ಪುರಾಣಾಖ್ಯಾನ ವಿತ್ಪ್ರಭೋ || ೧೨ ||**

**ತಸ್ಮಾದಾಖ್ಯಾಹಿ ಮಹ್ಯಂ ತ್ವಂ ಸರ್ವಸಂದೇಹಭಂಜನಂ |**

**ಸೂತ ಉವಾಚ**

**ತತಃ ಸನಾತನೋ ವಿಪ್ರಾಃ ಶ್ರುತ್ವಾ ನಾರದಭಾಷಿತಂ || ೧೩ ||**

**ನಾರಾಯಣಂ ಕ್ಷಣಂ ಧ್ಯಾತ್ವಾ ಪ್ರೋವಾಚಾಥ ವಿದಾಂ ವರಃ |**

**ಸನಾತನ ಉವಾಚ**

**ಸಾಧು ಸಾಧು ಮುನಿಶ್ರೇಷ್ಠ ಸರ್ವಲೋಕೋಪಕಾರಿಕಾ || ೧೪ ||**

**ಪುರಾಣಾಖ್ಯಾನವಿಜ್ಞಾನೇ ಯಾಜ್ಞಾತಾ ನೈಷ್ಠಿಕೀ ಮತಿಃ |**
**ತುಭ್ಯಂ ಸಮಭಿಧಾಸ್ಯಾಮಿ ಯತ್ಪ್ರೋಕ್ತಂ ಬ್ರಹ್ಮಣಾ ಪುರಾ || ೧೫ ||**

---

ಒಂದೊಂದು ಪುರಾಣದಲ್ಲಿಯೂ ಎಷ್ಟು ಗ್ರಂಥಗಳಿವೆ? ಯಾವ ಯಾವ ಉಪಾಖ್ಯಾನಗಳನ್ನೊಳಗೊಂಡಿದೆ? ಸ್ವಾಮಿಯೇ! ಅದೆಲ್ಲವನ್ನೂ ನನಗೆ ಹೇಳು.

ಚತುರ್ವರ್ಣದವರು ಆಚರಿಸಬೇಕಾದ ನಾನಾವ್ರತಾದಿಗಳ ಕಥೆಗಳು ಮತ್ತು ಸೃಷ್ಟಿ ಕ್ರಮದಿಂದ ವಂಶಪರಂಪರೆಯು ಕಥೆಗಳು ಇವುಗಳೆಲ್ಲವನ್ನೂ ಚೆನ್ನಾಗಿ ಪ್ರಕಾಶಪಡಿಸು.

ಸ್ವಾಮಿಯೇ! ನಿನಗಿಂತಲೂ ಹೆಚ್ಚಾಗಿ ಪುರಾಣಾಖ್ಯಾನಗಳನ್ನು ತಿಳಿದವನು ಇನ್ನೊಬ್ಬನಿಲ್ಲ. ಆದಕಾರಣ ನೀನು ಸರ್ವಸಂದೇಹಗಳನ್ನು ನಾಶಪಡಿಸುವಂತಹ ಈ ಪುರಾಣಾಖ್ಯಾನವನ್ನು ನನಗೆ ವಿವರಿಸಿ ಹೇಳು.

ಸೂತನು ಹೇಳಿದನು:—ಬ್ರಾಹ್ಮಣರೇ! ನಾರದನ ಮಾತುಗಳನ್ನು ಕೇಳಿದಮೇಲೆ ಜ್ಞಾನಿಶ್ರೇಷ್ಠನಾದ ಸನಾತನನು ಒಂದು ಕ್ಷಣಕಾಲ ನಾರಾಯಣನನ್ನು ಧ್ಯಾನಿಸಿ ಅನಂತರ ಹೇಳತೊಡಗಿದನು.

ಮರೀಚ್ಯಾದಿಋಷಿಭ್ಯಸ್ತು ಪುತ್ರಸ್ನೇಹಾವೃತಾತ್ಮನಾ ।
ಏಕದಾ ಬ್ರಹ್ಮಣಃ ಪುತ್ರೋ ಮರೀಚಿರ್ನಾಮ ವಿಶ್ರುತಃ　　॥ ೧೬ ॥

ಸ್ವಾಧ್ಯಾಯಶ್ರುತಸಂಪನ್ನೋ ವೇದವೇದಾಂಗಪಾರಗಃ ।
ಉಪಸೃತ್ಯ ಸ್ವಪಿತರಂ ಬ್ರಹ್ಮಾಣಂ ಲೋಕಭಾವನಂ　　॥ ೧೭ ॥

ಪ್ರಣಮ್ಯ ಭಕ್ತ್ಯಾ ಪಪ್ರಚ್ಛ ಇದಮೇವ ಮುನೀಶ್ವರ ।
ಪುರಾಣಾಖ್ಯಾನಮಮಲಂ ಯತ್ತ್ವಂ ಪೃಚ್ಛಸಿ ಮಾನದ　　॥ ೧೮ ॥

ಮರೀಚಿರುವಾಚ

ಭಗವನ್ದೇವದೇವೇಶ ಲೋಕಾನಾಂ ಪ್ರಭವಾಪ್ಯಯ ।
ಸರ್ವಜ್ಞ ಸರ್ವಕಲ್ಯಾಣ ಸರ್ವಾಧ್ಯಕ್ಷ ನಮೋಽಸ್ತು ತೇ　　॥ ೧೯ ॥

---

ಸನಾತನನು ಹೇಳಿದನು:—ಒಳ್ಳೆಯದು! ಒಳ್ಳೆಯದು! ಮುನಿ ಶ್ರೇಷ್ಠನೇ! * ಪುರಾಣಾಖ್ಯಾನವನ್ನು ತಿಳಿಯಬೇಕೆಂದು ನಿನಗುಂಟಾಗಿರುವ ಶ್ರದ್ಧಾಪೂರ್ವಕವಾದ ಜ್ಞಾನವು ಲೋಕೋಪಕಾರಕವು. ಪೂರ್ವದಲ್ಲಿ ಪುತ್ರಸ್ನೇಹ ಯುಕ್ತನಾದ ಚತುರ್ಮುಖನಿಂದ ಮರೀಚ್ಯಾದಿಮುನಿಗಳಿಗೆ ಹೇಳಲ್ಪಟ್ಟಿರುವ ಪುರಾಣಾಖ್ಯಾನವನ್ನು ನಾನು ನಿನಗೆ ಹೇಳುವೆನು.

ಒಂದು ದಿನ ವೇದಾಧ್ಯಯನಸಂಪನ್ನನು, ವೇದವೇದಾಂಗಪಾರಂಗತನೂ ಆದ ಮರೀಚಿಯೆಂಬ ಬ್ರಹ್ಮಕುಮಾರನು ಲೋಕವನ್ನೇ ಸೃಷ್ಟಿಸಿದ ತನ್ನ ತಂದೆಯಾದ ಬ್ರಹ್ಮನ ಹತ್ತಿರ ಬಂದು, ಭಕ್ತಿಯಿಂದ ನಮಸ್ಕರಿಸಿ, ನಾರದನಾದ ನೀನು ಈಗ ಕೇಳುತ್ತಿರುವ ಪರಿಶುದ್ಧವಾದ ಈ ಪುರಾಣಾಖ್ಯಾನವನ್ನೇ ಪ್ರಶ್ನಿಸಿದನು.

೧೯. ಮರೀಚಿಯು ಹೇಳಿದನು:—ಲೋಕಗಳ ಸೃಷ್ಟಿ ಸಂಹಾರಗಳನ್ನು ಮಾಡುವವನು, ಸರ್ವಜ್ಞನು, ಸರ್ವಕ್ಷೇಮಕಾರಿಯು, ಸಕಲವನ್ನೂ ಸಾಕ್ಷಾತ್ತಾಗಿ ನೋಡುತ್ತಿರುವವನೂ ಆಗಿರುವ ಪೂಜ್ಯನಾದ ದೇವದೇವೇಶನೇ! ನಿನಗೆ ನಮಸ್ಕಾರ!

ಪುರಾಣಬೀಜಮಾಖ್ಯಾಹಿ ಮಹ್ಯಂ ಶುಶ್ರೂಷವೇ ಪಿತಃ |
ಲಕ್ಷಣಂ ಚ ಪ್ರಮಾಣಂ ಚ ವಕ್ತಾರಂ ಪೃಚ್ಛಕಂ ತಥಾ || ೨೦ ||

ಬ್ರಹ್ಮೋವಾಚ

ಶೃಣು ವತ್ಸ ಪ್ರವಕ್ಷ್ಯಾಮಿ ಪುರಾಣಾನಾಂ ಸಮುಚ್ಚಯಂ |
ಯಸ್ಮಿನ್ ಜ್ಞಾತೇ ಭವೇತ್ ಜ್ಞಾತಂ ವಾಙ್ಮಯಂ ಸಚರಾಚರಂ || ೨೧ ||

ಪುರಾಣಮೇಕಮೇವಾಸೀತ್ಸರ್ವಕಲ್ಪೇಷು ಮಾನದ |
ಚತುರ್ವರ್ಗಸ್ಯ ಬೀಜಂ ಚ ಶತಕೋಟಿಪ್ರವಿಸ್ತರಂ || ೨೨ ||

ಪ್ರವೃತ್ತಿಃ ಸರ್ವಶಾಸ್ತ್ರಾಣಾಂ ಪುರಾಣಾದಭವತ್ತತಃ |
ಕಾಲೇನಾಗ್ರಹಣಂ ದೃಷ್ಟ್ವಾ ಪುರಾಣಸ್ಯ ಮಹಾಮತಿಃ || ೨೩ ||

ಹರಿರ್ವ್ಯಾಸಸ್ವರೂಪೇಣ ಜಾಯತೇ ಚ ಯುಗೇ ಯುಗೇ |
ಚತುರ್ಲಕ್ಷಪ್ರಮಾಣೇನ ದ್ವಾಪರೇ ದ್ವಾಪರೇ ಸದಾ || ೨೪ ||

---

೨೦. ತಂದೆಯೇ! ಕೇಳಬಯಸುತ್ತಿರುವ ನನಗೆ ಪುರಾಣಗಳ ನಿರ್ಮಾಣಕ್ಕೆ ಕಾರಣ, ಅದರ ಲಕ್ಷಣ, ಅವು ಎಷ್ಟೆಂಬುದು, ಅದನ್ನು ಹೇಳಿದವರು, ಕೇಳಿದವರಾರೆಂಬುದು ಇವೆಲ್ಲವನ್ನೂ ಹೇಳು.

೨೧. ಬ್ರಹ್ಮನು ಹೇಳಿದನು:—ವತ್ಸ! ಚರಾಚರ ವಿಷಯಕವಾದ ವಾಙ್ಮಯವೆಲ್ಲವನ್ನೂ ತಿಳಿಯಲು ಸಾಧಕವಾದ ಪುರಾಣಸಮುಚ್ಚಯವನ್ನು ಹೇಳುವೆನು; ಕೇಳು.

೨೨. ನೂರುಕೋಟಿಗ್ರಂಥಗಳಿಂದ ಕೂಡಿ ವಿಸ್ತಾರವಾದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಚತುಷ್ಟಯಕ್ಕೆ ಸಾಧಕವಾದ ಪುರಾಣವು ಎಲ್ಲಾ ಕಲ್ಪಗಳಲ್ಲಿಯೂ ಒಂದೇ ಇದ್ದಿತು.

೨೩-೨೪. ಅದರಿಂದಲೇ ಶಾಸ್ತ್ರತತ್ವಗಳೆಲ್ಲವೂ ತಿಳಿಯುತ್ತಿದ್ದಿತು. ಅನಂತರ ಕಾಲಕ್ರಮವಾಗಿ ಜನರಿಗೆ ಪುರಾಣತತ್ವಜ್ಞಾನವುಂಟಾಗದಿರುವು

**ತದಷ್ಟಾದಶಧಾ ಕೃತ್ವಾ ಭೂಲೋಕೇ ನಿರ್ದಿಶತ್ಯಪಿ |**
**ಅದ್ಯಾಪಿ ದೇವಲೋಕೇ ತು ಶತಕೋಟಿಪ್ರವಿಸ್ತರಂ || ೨೫ ||**

**ಅಸ್ತ್ಯೇವ ತಸ್ಯ ಸಾರಸ್ತು ಚತುರ್ಲಕ್ಷೇಣ ವರ್ಣ್ಯತೇ |**
**ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ವಾಯವೀಯಂ ತಥೈವ ಚ || ೨೬ ||**

**ಭಾಗವತಂ ನಾರದೀಯಂ ಮಾರ್ಕಂಡೇಯಂ ಚ ಕೀರ್ತಿತಂ |**
**ಆಗ್ನೇಯಂ ಚ ಭವಿಷ್ಯಂ ಚ ಬ್ರಹ್ಮವೈವರ್ತಲಿಂಗಕೇ || ೨೭ ||**

**ವಾರಾಹಂ ಚ ತಥಾ ಸ್ಕಾಂದಂ ವಾಮನಂ ಕೂರ್ಮಸಂಜ್ಞಿಕಂ |**
**ಮಾತ್ಸ್ಯಂ ಚ ಗಾರುಡಂ ತದ್ವದ್ಬ್ರಹ್ಮಾಂಡಾಖ್ಯಮಿತಿ ತ್ರಿಷಟ್ || ೨೮ ||**

**ಏಕಂ ಕಥಾನಕಂ ಸೂತ್ರಂ ವಕ್ತುಃ ಶ್ರೋತುಃ ಸಮಾಹ್ವಯಂ |**
**ಪ್ರವಕ್ಷ್ಯಾಮಿ ಸಮಾಸೇನ ನಿಶಾಮಯ ಸಮಾಹಿತಃ || ೨೯ ||**

---

ದನ್ನು ತಿಳಿದು, ಮಹಾಜ್ಞಾನಿಯಾದ ಶ್ರೀಹರಿಯು ಪ್ರತಿಯೊಂದು ಯುಗ ಪರ್ಯಾಯದಲ್ಲಿಯೂ ವ್ಯಾಸರೂಪದಿಂದ ಆವಿರ್ಭವಿಸಿದನು.

ಕೂಡಲೇ ಅವನು ದ್ವಾಪರಯುಗಗಳಲ್ಲಿ ಪುರಾಣತತ್ವಗಳನ್ನು ನಾಲ್ಕು ಲಕ್ಷಗ್ರಂಥಗಳಿಂದ ಸಂಗ್ರಹಿಸಿ ಅದನ್ನು ಹದಿನೆಂಟು ಭಾಗಗಳಾಗಿ ವಿಂಗಡಿಸಿ ಹದಿನೆಂಟು ಹೆಸರುಗಳಿಂದ ಭೂಲೋಕದಲ್ಲಿ ಪ್ರಕಟಿಸಿರುವನು. ದೇವಲೋಕ ದಲ್ಲಿ ಈಗಲೂ ಸಹ ಪುರಾಣವು ನೂರುಕೋಟಿ ಗ್ರಂಥಪರಿಮಿತಿಯುಳ್ಳುದೇ ಆಗಿದೆ. ಅದರ ಸಾರವೇ ನಾಲ್ಕುಲಕ್ಷ ಗ್ರಂಥಗಳಿಂದ ವರ್ಣಿಸಲ್ಪಟ್ಟಿದೆ.

ಬ್ರಹ್ಮಪುರಾಣ, ಪದ್ಮಪುರಾಣ, ವಿಷ್ಣುಪುರಾಣ, ವಾಯುಪುರಾಣ, ಭಾಗ ವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯ, ಬ್ರಹ್ಮವೈವರ್ತ, ಲಿಂಗಪುರಾಣ, ವರಾಹಪುರಾಣ, ಸ್ಕಾಂದ, ವಾಮನ, ಕೂರ್ಮ, ಮಾತ್ಸ್ಯ, ಗರುಡಪುರಾಣ ಮತ್ತು ಬ್ರಹ್ಮಾಂಡಪುರಾಣವೆಂಬುದಾಗಿ ಹದಿನೆಂಟು ಮಹಾ ಪುರಾಣಗಳು ವಿರಚಿತವಾಗಿವೆ

೨೯. ಕಥಾಪ್ರಸಂಗಕ್ಕೆ ಸೂತ್ರಧಾರಿಗಳಂತಿರುವ ವಕ್ತೃಶ್ರೋತೃಗಳ ನಾಮಧೇಯಗಳನ್ನು ಸಂಕ್ಷೇಪವಾಗಿ ಹೇಳುವೆನು. ಸಮಾಧಾನದಿಂದ ಕೇಳು.

ಬ್ರಾಹ್ಮಂ ಪುರಾಣಂ ತತ್ರಾದೌ ಸರ್ವಲೋಕಹಿತಾಯ ವೈ ।
ವ್ಯಾಸೇನ ವೇದವಿದುಷಾ ಸಮಾಖ್ಯಾತಂ ಮಹಾತ್ಮನಾ ॥ ೩೦ ॥

ತದ್ವೈ ಸರ್ವಪುರಾಣಾಗ್ರ್ಯಂ ಧರ್ಮಕಾಮಾರ್ಥಮೋಕ್ಷದಂ ।
ನಾನಾಖ್ಯಾನೇತಿಹಾಸಾಢ್ಯಂ ದಶಸಾಹಸ್ರಮುಚ್ಯತೇ ॥ ೩೧ ॥

ದೇವಾನಾಂ ಚ ಸುರಾಣಾಂ ಚ ಯತ್ರೋತ್ಪತ್ತಿಃ ಪ್ರಕೀರ್ತಿತಾ ।
ಪ್ರಜಾಪತೀನಾಂ ಚ ತಥಾ ದಕ್ಷಾದಿನಾಂ ಮುನೀಶ್ವರ ॥ ೩೨ ॥

ತತೋ ಲೋಕೇಶ್ವರಸ್ಯಾತ್ರ ಸೂರ್ಯಸ್ಯ ಪರಮಾತ್ಮನಃ ।
ವಂಶಾನುಕೀರ್ತನಂ ಪುಣ್ಯಂ ಮಹಾಪಾತಕನಾಶನಂ ॥ ೩೩ ॥

ಯತ್ರಾವತಾರಃ ಕಥಿತಃ ಪರಮಾನಂದರೂಪಿಣಃ ।
ಶ್ರೀಮತೋ ರಾಮಚಂದ್ರಸ್ಯ ಚತುರ್ವ್ಯೂಹಾವತಾರಿಣಃ ॥ ೩೪ ॥

---

೩೦-೩೧. ವೇದಜ್ಞಾನಿಗಳೂ, ಮಹಾತ್ಮರೂ ಆದ ವ್ಯಾಸರಿಂದ ಸಕಲ ಲೋಕಹಿತಕ್ಕಾಗಿ ಆದಿಯಲ್ಲಿ ಬ್ರಹ್ಮಪುರಾಣವು ಹೇಳಲ್ಪಟ್ಟಿತು.

### ಬ್ರಹ್ಮಪುರಾಣ

ಇದು ಸಕಲಪುರಾಣೋತ್ತಮವು. ಧರ್ಮಾರ್ಥಕಾಮಮೋಕ್ಷದಾಯಕವು ಮತ್ತು ನಾನಾಉಪಾಖ್ಯಾನ, ಇತಿಹಾಸಗಳಿಂದ ಯುಕ್ತವೂ ಆಗಿ ಹತ್ತುಸಾವಿರ ಗ್ರಂಥಗಳನ್ನೊಳಗೊಂಡಿದೆ.

### ಪೂರ್ವಭಾಗ

೩೨-೩೪. ದೇವತೆಗಳು, ಅಸುರರು ಮತ್ತು ದಕ್ಷಾದಿ ಪ್ರಜೇಶ್ವರರ ಉತ್ಪತ್ತಿ ತರುವಾಯ ಶ್ರವಣದಿಂದ ಮಹಾಪಾಪಗಳನ್ನು ಪರಿಹರಿಸುವುದು ಮತ್ತು ಪುಣ್ಯಕರವೂ ಆದ ಸೂರ್ಯದೇವನ ವಂಶಾನುಕೀರ್ತನೆ.

ಆ ವಂಶದಲ್ಲಿ ನಿರತಿಶಯಾನಂದರೂಪಿಯೂ, ಚತುರ್ವ್ಯೂಹಾವತಾರಿಯೂ ಆದ ಶ್ರೀರಾಮಚಂದ್ರನ ಅವತಾರವರ್ಣನೆ.

ತತಶ್ಚ ಸೋಮವಂಶಸ್ಯ ಕೀರ್ತನಂ ಯತ್ರ ವರ್ಣಿತಂ ।
ಕೃಷ್ಣಸ್ಯ ಜಗದೀಶಸ್ಯ ಚರಿತಂ ಕಲ್ಮಷಾಪಹಂ ॥ ೩೫ ॥

ದ್ವೀಪಾನಾಂ ಚೈವ ಸರ್ವೇಷಾಂ ವರ್ಷಾಣಾಂ ಚಾಪ್ಯಶೇಷತಃ ।
ವರ್ಣನಂ ಯತ್ರ ಪಾತಾಲಸ್ವರ್ಗಾಣಾಂ ಚ ಪ್ರದೃಶ್ಯತೇ ॥ ೩೬ ॥

ನರಕಾಣಾಂ ಸಮಾಖ್ಯಾನಂ ಸೂರ್ಯಸ್ತುತಿಕಥಾನಕಂ ।
ಪಾರ್ವತ್ಯಾಶ್ಚ ತಥಾ ಜನ್ಮ ವಿವಾಹಶ್ಚ ನಿಗದ್ಯತೇ ॥ ೩೭ ॥

ದಕ್ಷಾಖ್ಯಾನಂ ತತಃ ಪ್ರೋಕ್ತಮೇಕಾಮ್ರಕ್ಷೇತ್ರವರ್ಣನಂ ।
ಪೂರ್ವಭಾಗೋಽಯಮುದಿತಃ ಪುರಾಣಸ್ಯಾಸ್ಯ ನಾರದ ॥ ೩೮ ॥

ಅಸ್ಯೋತ್ತರೇ ವಿಭಾಗೇ ತು ಪುರುಷೋತ್ತಮವರ್ಣನಂ ।
ವಿಸ್ತರೇಣ ಸಮಾಖ್ಯಾತಂ ತೀರ್ಥಯಾತ್ರಾವಿಧಾನತಃ ॥ ೩೯ ॥

---

ಅನಂತರ ಚಂದ್ರವಂಶಕಥನ, ಅಲ್ಲಿ ಜಗದೀಶ್ವರನಾದ ಕೃಷ್ಣನ ಅವತಾರ, ದೋಷಪರಿಹಾರಕವಾದ ಅವನ ಚರಿತ್ರೆ ಇವುಗಳ ವಿವರಣೆ.

ದ್ವೀಪ, ಸಮುದ್ರ, ಖಂಡ, ಪಾತಾಲ, ಸ್ವರ್ಗ, ನರಕ ಇವುಗಳ ವರ್ಣನೆ.

ಸೂರ್ಯಸ್ತುತಿ, ಪಾರ್ವತ್ಯವತಾರ, ವಿವಾಹ, ದಕ್ಷಪ್ರಜೇಶ್ವರಕಥೆ, ಏಕಾಮ್ರಕ್ಷೇತ್ರವರ್ಣನೆ ಇವುಗಳು ಈ ಪುರಾಣದ ಪೂರ್ವಭಾಗದಲ್ಲಿ ಹೇಳಿರುವ ವಿಷಯಗಳು.

ಉತ್ತರಭಾಗ—

೩೯-೪೨. ತೀರ್ಥಯಾತ್ರಾವಿಧಾನವನ್ನು ಹೇಳಲಾರಂಭಿಸಿ ಅದರಲ್ಲಿ ವಿಸ್ತಾರವಾಗಿ ಪುರುಷೋತ್ತಮವರ್ಣನೆ, ವಿಸ್ತಾರಕೃಷ್ಣಚರಿತ್ರೆ, ಯಮಲೋಕ

**ಅತ್ರೈವ ಕೃಷ್ಣಚರಿತಂ ವಿಸ್ತರಾತ್ಸಮುದೀರಿತಂ ।**
**ವರ್ಣನಂ ಯಮಲೋಕಸ್ಯ ಪಿತೃಶ್ರಾದ್ಧವಿಧಿಸ್ತಥಾ ॥ ೪೦ ॥**

**ವರ್ಣಾಶ್ರಮಾಣಾಂ ಧರ್ಮಾಶ್ಚ ಕೀರ್ತಿತಾ ಯತ್ರ ವಿಸ್ತರಾತ್ ।**
**ವಿಷ್ಣುಧರ್ಮಯುಗಾಖ್ಯಾನಂ ಪ್ರಲಯಸ್ಯ ಚ ವರ್ಣನಂ ॥ ೪೧ ॥**

**ಯೋಗಾನಾಂ ಚ ಸಮಾಖ್ಯಾನಂ ಸಾಂಖ್ಯಾನಾಂ ಚಾಪಿವರ್ಣನಂ ।**
**ಬ್ರಹ್ಮವಾದಸಮುದ್ದೇಶಃ ಪುರಾಣಸ್ಯ ಪ್ರಶಂಸನಂ ॥ ೪೨ ॥**

**ಏತದ್ಬ್ರಹ್ಮಪುರಾಣಂ ತು ಭಾಗದ್ವಯಸಮನ್ವಿತಂ ।**
**ವರ್ಣಿತಂ ಸರ್ವಪಾಪಘ್ನಂ ಸರ್ವಸೌಖ್ಯಪ್ರದಾಯಕಂ ॥ ೪೩ ॥**

**ಸೂತಶೌನಕಸಂವಾದಂ ಭುಕ್ತಿಮುಕ್ತಿಪ್ರದಾಯಕಂ ।**
**ಲಿಖಿತ್ವೈತತ್ಪುರಾಣಂ ಯೋ ವೈಶಾಖ್ಯಾಂ ಹೇಮಸಂಯುತಂ ॥ ೪೪ ॥**

**ಜಲಧೇನುಯುತಂ ಚಾಪಿ ಭಕ್ತ್ಯಾ ದದ್ಯಾದ್ದ್ವಿಜಾತಯೇ ।**
**ಪೌರಾಣಿಕಾಯ ಸಂಪೂಜ್ಯ ವಸ್ತ್ರಭೋಜ್ಯವಿಭೂಷಣೈಃ ॥ ೪೫ ॥**

---

ವರ್ಣನೆ, ಪಿತೃಶ್ರಾದ್ಧವಿಧಾನ, ವರ್ಣಾಶ್ರಮಧರ್ಮ, ನಿವೃತ್ತಧರ್ಮ, ಯುಗ ವರ್ಣನೆ, ಪ್ರಲಯವರ್ಣನೆ, ಸಾಂಖ್ಯಯೋಗನಿರೂಪಣೆ, ಬ್ರಹ್ಮವಿಚಾರ, ಪುರಾಣಪ್ರಶಂಸೆ ಇವು ಹೇಳಲ್ಪಟ್ಟಿವೆ

೪೩ ಈ ವಿಷಯುಗಳನ್ನೊಳಗೊಂಡಿರುವ ಭಾಗದ್ವಯಯುಕ್ತವಾದ ಬ್ರಹ್ಮಪುರಾಣವು ಶ್ರೋತೃಗಳಿಗೆ ಸಕಲಪಾಪಗಳನ್ನೂ ಪರಿಹರಿಸಿ ಸಕಲಸೌಖ್ಯ ದಾಯಕವಾಗುವುದೆಂದು ಉಕ್ತವಾಗಿದೆ.

೪೪–೪೫. ಸೂತಶೌನಕಸಂವಾದರೂಪವಾದ, ಐಹಿಕದಲ್ಲಿ ಭೋಗ, ಪರದಲ್ಲಿ ಮೋಕ್ಷ ಇವುಗಳನ್ನು ಕೊಡುವಂತಹ ಈ ಪುರಾಣವನ್ನು ಬರೆದು ಅದನ್ನು ವೈಶಾಖಮಾಸದಲ್ಲಿ ಸುವರ್ಣ, ಉದಕ ಗೋವುಗಳ ಸಹಿತವಾಗಿ ಪೌರಾಣಿಕ ಬ್ರಾಹ್ಮಣನಿಗೆ ದಾನಮಾಡಿ ಭೋಜನ ವಸ್ತ್ರಾಭರಣಗಳನ್ನೂ ಕೊಟ್ಟು ಅವನನ್ನು ಪೂಜಿಸಬೇಕು.

ಸ ವಸೇದ್ಬ್ರಹ್ಮಣೋ ಲೋಕೇ ಯಾವಚ್ಚಂದ್ರಾರ್ಕತಾರಕಂ ।
ಯಃ ಪಠೇಚ್ಛೃಣುಯಾದ್ವಾಪಿ ಬ್ರಾಹ್ಮಾನುಕ್ರಮಣೀಂ ದ್ವಿಜಃ ॥ ೪೬ ॥

ಸೋಽಪಿ ಸರ್ವಪುರಾಣಸ್ಯ ಶ್ರೋತುರ್ವಕ್ತುಃ ಫಲಂ ಲಭೇತ್ ।
ಶೃಣೋತಿ ಯಃ ಪುರಾಣಂ ತು ಬ್ರಾಹ್ಮಂ ಸರ್ವಂ ಜಿತೇಂದ್ರಿಯಃ ॥ ೪೭ ॥

ಹವಿಷ್ಯಾಶೀ ಚ ನಿಯಮಾತ್ಸ ಲಭೇದ್ಬ್ರಹ್ಮಣಃ ಪದಂ ।
ಕಿಮತ್ರ ಬಹುನೋಕ್ತೇನ ಯದ್ಯದಿಚ್ಛತಿ ಮಾನವಃ ॥
ತತ್ಸರ್ವಂ ಲಭತೇ ವತ್ಸ ಪುರಾಣಸ್ಯಾಸ್ಯ ಕೀರ್ತನಾತ್ ॥ ೪೮ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಚತುರ್ಥಪಾದೇ ಬ್ರಾಹ್ಮಪುರಾಣೇತಿಹಾಸಕಥನಂ ನಾಮ
ದ್ವಿನವತಿತಮೋಽಧ್ಯಾಯಃ

---

೪೬-೪೮. ಹಾಗೆ ಪುರಾಣದಾನಾದಿಗಳಿಂದ ಬ್ರಾಹ್ಮಣನನ್ನು ಸತ್ಕರಿಸುವವನು, ಚಂದ್ರಸೂರ್ಯನಕ್ಷತ್ರಗಳಿರುವವರೆಗೂ ಬ್ರಹ್ಮಲೋಕದಲ್ಲಿ ಸುಖವಾಗಿ ವಾಸಿಸುವನು.

ಬ್ರಹ್ಮಪುರಾಣದ ಈ ವಿಷಯಾನುಕ್ರಮಣಿಕೆಯನ್ನು ಶ್ರವಣ ಪಠನ ಮಾಡುವ ದ್ವಿಜನೂ ಸಹ ಸಂಪೂರ್ಣ ಪುರಾಣಶ್ರವಣಪಠನೆಗಳ ಫಲವನ್ನು ಪಡೆಯುವನು.

ಜಿತೇಂದ್ರಿಯನೂ, ಹವಿಸ್ಯಭೋಕ್ತೃವೂ ಆಗಿ ನಿಯಮದಿಂದ ಬ್ರಾಹ್ಮಪುರಾಣವನ್ನು ಸಮಗ್ರವಾಗಿ ಶ್ರವಣಮಾಡುವವನು ಬ್ರಹ್ಮಲೋಕವನ್ನು ಹೊಂದುವನು.

ಈ ವಿಷಯದಲ್ಲಿ ಹೆಚ್ಚು ಹೇಳದುದರಿಂದೇನು? ವತ್ಸ! ಮನುಷ್ಯನು ಅಪೇಕ್ಷಿಸಿದುದೆಲ್ಲವೂ ಈ ಪುರಾಣಕೀರ್ತನೆಯಿಂದ ಲಭಿಸುವುದು

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ನಾಲ್ಕನೆಯ ಪಾದದಲ್ಲಿ ಬ್ರಹ್ಮಪುರಾಣೇತಿಹಾಸಕಥನವೆಂಬ
ತೊಂಬತ್ತೆರಡನೆಯ ಅಧ್ಯಾಯವು ಮುಗಿದುದು.

## ತ್ರಿನವತಿತಮೋಽಧ್ಯಾಯಃ

### ಬ್ರಹ್ಮೋವಾಚ

ಶೃಣು ಪುತ್ರ ಪ್ರವಕ್ಷ್ಯಾಮಿ ಪುರಾಣಂ ಪದ್ಮಸಂಜ್ಞಕಂ ।
ಮಹತ್ಪುಣ್ಯಪ್ರದಂ ನೃಣಾಂ ಶೃಣ್ವತಾಂ ಪಠತಾಂ ಮುದಾ ॥ ೧ ॥

ಯಥಾ ಪಂಚೇಂದ್ರಿಯಃ ಸರ್ವಃ ಶರೀರೀತಿ ನಿಗದ್ಯತೇ ।
ತಥೇದಂ ಪಂಚಭಿಃ ಖಂಡೈರುದಿತಂ ಪಾಪನಾಶನಂ ॥ ೨ ॥

ಪುಲಸ್ತ್ಯೇನ ತು ಭೀಷ್ಮಾಯ ಸೃಷ್ಟ್ಯಾದಿಕ್ರಮತೋ ದ್ವಿಜ ।
ನಾನಾಖ್ಯಾನೇತಿಹಾಸಾದ್ಯೈರ್ಯತ್ರೋಕ್ತೋ ಧರ್ಮವಿಸ್ತರಃ ॥ ೩ ॥

---

### ತೊಂಬತ್ತುಮೂರನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ವತ್ಸ! ಶ್ರವಣಪಠನೆಮಾಡುವವರಿಗೆ ಮಹಾಪುಣ್ಯಪ್ರದವಾದ ಪದ್ಮಪುರಾಣ ವಿಷಯವನ್ನು ಹೇಳುವೆನು:—ಸಂತೋಷ ದಿಂದ ಕೇಳು.

೨-೩. ದ್ವಿಜನೇ! ಪಂಚೇಂದ್ರಿಯಗಳಿಂದ ಕೂಡಿರುವವನು ಶರೀರಿ ಎನಿಸುವಂತೆ ಈ ಪದ್ಮಪುರಾಣವೂ ಸಹ ಐದುಖಂಡಗಳಿಂದ ಯುಕ್ತವಾಗಿದೆ.

ಇದು ಶ್ರವಣಾದಿಗಳಿಂದ ಪಾಪವನ್ನು ಪರಿಹರಿಸುತ್ತದೆ ಮತ್ತು ಇದರಲ್ಲಿ ಸೃಷ್ಟ್ಯಾದಿಕ್ರಮದಿಂದ ನಾನಾವಿಧವಾದ ಉಪಾಖ್ಯಾನಗಳು ಇತಿಹಾಸರೂಪವಾಗಿ ಪುಲಸ್ತ್ಯನಿಂದ ಭೀಷ್ಮರಿಗೆ ಉಪದೇಶಿಸಲ್ಪಟ್ಟಿವೆ.

ಪುಷ್ಕರಸ್ಯ ಚ ಮಾಹಾತ್ಮ್ಯಂ ವಿಸ್ತರೇಣ ಪ್ರಕೀರ್ತಿತಂ ।
ಬ್ರಹ್ಮಯಜ್ಞವಿಧಾನಂ ಚ ವೇದಪಾಠಾದಿಲಕ್ಷಣಂ ॥ ೪ ॥

ದಾನಾನಾಂ ಕೀರ್ತನಂ ಯತ್ರ ವ್ರತಾನಾಂ ಚ ಪೃಥಕ್ಪೃಥಕ್ ।
ವಿವಾಹಃ ಶೈಲಜಾಯಾಶ್ಚ ತಾರಕಾಖ್ಯಾನಕಂ ಮಹತ್ ॥ ೫ ॥

ಮಾಹಾತ್ಮ್ಯಂ ಚ ಗವಾದೀನಾಂ ಕೀರ್ತಿತಂ ಸರ್ವಪುಣ್ಯದಂ ।
ಕಾಲಕೇಯಾದಿದೈತ್ಯಾನಾಂ ವಧೋ ಯತ್ರ ಪೃಥಕ್ಪೃಥಕ್ ॥ ೬ ॥

ಗ್ರಹಾಣಾಮರ್ಚನಂ ದಾನಂ ಯತ್ರ ಪ್ರೋಕ್ತಂ ದ್ವಿಜೋತ್ತಮ ।
ತತ್ಸೃಷ್ಟಿಖಂಡಮುದ್ದಿಷ್ಟಂ ವ್ಯಾಸೇನ ಸುಮಹಾತ್ಮನಾ ॥ ೭ ॥

ಪಿತೃಮಾತ್ರಾದಿಪೂಜ್ಯತ್ವೇ ಶಿವಶರ್ಮಕಥಾ ಪುರಾ ।
ಸುವ್ರತಸ್ಯ ಕಥಾ ಪಶ್ಚಾದ್ವೃತ್ರಸ್ಯ ಚ ವಧಸ್ತಥಾ ॥ ೮ ॥

ಪೃಥೋರ್ವೇನಸ್ಯ ಚಾಖ್ಯಾನಂ ಸುನೀತಾಯಾಃ ಕಥಾ ತಥಾ ।
ಸುಕಲಾಖ್ಯಾನಕಂ ಚೈವ ಧರ್ಮಾಖ್ಯಾನಂ ತತಃ ಪರಂ ॥ ೯ ॥

---

## ಪದ್ಮಪುರಾಣ

### ಸೃಷ್ಟಿಖಂಡ ೧.

೪-೧೩. ಧರ್ಮ, ಪುಷ್ಕರಕ್ಷೇತ್ರದ ಮಹಿಮೆ, ಬ್ರಹ್ಮಯಜ್ಞವಿಧಾನ, ವೇದಪಾಠಾದಿಲಕ್ಷಣ, ದಾನಗಳು, ಭಿನ್ನಭಿನ್ನವ್ರತಗಳು, ಗಿರಿಜಾಕಲ್ಯಾಣ, ತಾರಕೋಪಾಖ್ಯಾನ, ಗೋಮಾಹಾತ್ಮ್ಯ, ಕಾಲಕೇಯಮುಂತಾದ ದೈತ್ಯರ ಸಂಹಾರ, ನವಗ್ರಹಗಳ ಪೂಜಾವಿಧಾನ, ದಾನ ಮುಂತಾದ ವಿಷಯಗಳನ್ನು ಮಹಾತ್ಮರಾದ ವ್ಯಾಸರು ಈ ಸೃಷ್ಟಿಖಂಡದಲ್ಲಿ ನಿರೂಪಿಸಿರುವರು.

### ಭೂಖಂಡ ೨.

ಮಾತಾಪಿತೃಗಳು ಪೂಜ್ಯರೆಂಬ ವಿಷಯದಲ್ಲಿ ಶಿವಶರ್ಮಕಥೆ, ಸುವ್ರತ ಕಥೆ, ವೃತ್ರಾಸುರಸಂಹಾರ, ಪೃಥುವೇನ ಚಕ್ರವರ್ತಿಗಳ ಚರಿತ್ರೆ, ಸುನೀತೆಯ

ಪಿತೃಶುಶ್ರೂಷಣಾಖ್ಯಾನಂ ನಹುಷಸ್ಯ ಕಥಾ ತತಃ ।
ಯಯಾತಿಚರಿತಂ ಚೈವ ಗುರುತೀರ್ಥನಿರೂಪಣಂ ॥ ೧೦ ॥

ರಾಜಜೈಮಿನಿಸಂವಾದೋ ಬಹ್ವಾಶ್ಚರ್ಯಕಥಾಯುತಃ ।
ಕಥಾ ಹ್ಯಶೋಕಸುಂದರ್ಯಾ ಹುಂಡದೈತ್ಯವಧಾನ್ವಿತಾ ॥ ೧೧ ॥

ಕಾಮೋದಾಖ್ಯಾನಕಂ ತತ್ರ ವಿಹುಂಡವಧಸಂಯುತಂ ।
ಕುಂಜಲಸ್ಯ ಚ ಸಂವಾದಶ್ಚ್ಯವನೇನ ಮಹಾತ್ಮನಾ ॥ ೧೨ ॥

ಸಿದ್ಧಾಖ್ಯಾನಂ ತತಃ ಪ್ರೋಕ್ತಂ ಖಂಡಸ್ಯಾಸ್ಯ ಫಲೋಹನಂ ।
ಸೂತಶೌನಕಸಂವಾದಂ ಭೂಮಿಖಂಡಮಿದಂ ಸ್ಮೃತಂ ॥ ೧೩ ॥

ಬ್ರಹ್ಮಾಂಡೋತ್ಪತ್ತಿರುದಿತಾ ಋಷಿಭಿರ್ಯತ್ರ ಸೌತಿನಾ ।
ಸಭೂಮಿಲೋಕಸಂಸ್ಥಾನಂ ತೀರ್ಥಾಖ್ಯಾನಂ ತತಃ ಪರಂ ॥ ೧೪ ॥

ನರ್ಮದೋತ್ಪತ್ತಿಕಥನಂ ತತ್ತೀರ್ಥಾನಾಂ ಕಥಾಃ ಪೃಥಕ್ ।
ಕುರುಕ್ಷೇತ್ರಾದಿತೀರ್ಥಾನಾಂ ಕಥಾ ಪುಣ್ಯಾ ಪ್ರಕೀರ್ತಿತಾ ॥ ೧೫ ॥

---

ಕಥೆ, ಸುಕಲೋಪಾಖ್ಯಾನ, ಧರ್ಮಾಖ್ಯಾನ, ಪಿತೃಸೇವೋಪಾಖ್ಯಾನ, ನಹುಷ ಯಯಾತಿಗಳ ಚರಿತ್ರೆ, ಗುರುತೀರ್ಥನಿರೂಪಣೆ, ಅತ್ಯಂತಆಶ್ಚರ್ಯಕರ ಕಥೆಗಳಿಂದ ಕೂಡಿದ ರಾಜಜೈಮಿನಿಸಂವಾದ, ಹುಂಡನೆಂಬ ದೈತ್ಯಸಂಹಾರಯುಕ್ತವಾದ ಅಶೋಕಸುಂದರಿಯ ಕಥೆ, ಕಾಮೋದಕಿಯ ಚರಿತ್ರೆ, ವಿಹುಂಡವಧೆ, ಕುಂಜಲಚ್ಯವನಸಂವಾದ ಮತ್ತು ಸಿದ್ಧಾಖ್ಯಾನ ಇವು ಈಖಂಡದಲ್ಲಿ ಉಕ್ತವಾಗಿವೆ. ಇದು ಸೂತಶೌನಕಸಂವಾದರೂಪವಾಗಿದೆ. ಇದಕ್ಕೆ ಭೂಖಂಡವೆಂದು ಹೆಸರು.

## ಸ್ವರ್ಗಖಂಡ ೩.

೧೪-೧೮. ಬ್ರಹ್ಮಾಂಡೋತ್ಪತ್ತಿ, ಭೂಲೋಕಸ್ಥಿತಿ, ತೀರ್ಥೋಪಾಖ್ಯಾನ, ನರ್ಮದೋತ್ಪತ್ತಿ, ಆಯಾ ತೀರ್ಥಗಳ ಪ್ರತ್ಯೇಕ ಕಥೆಗಳು, ಕುರುಕ್ಷೇತ್ರಾದಿ ಪುಣ್ಯತೀರ್ಥಗಳ ಕಥೆ, ಯಮುನಾನದಿಯ ಪುಣ್ಯಕಥೆ, ಕಾಶೀ, ಗಯಾ

**ಕಾಲಿಂದೀಪುಣ್ಯಕಥನಂ ಕಾಶೀಮಾಹಾತ್ಮ್ಯವರ್ಣನಂ ।**
**ಗಯಾಯಾಶ್ಚೈವ ಮಾಹಾತ್ಮ್ಯಂ ಪ್ರಯಾಗಸ್ಯ ಚ ಪುಣ್ಯಕಂ　　॥ ೧೬ ॥**

**ವರ್ಣಾಶ್ರಮಾನುರೋಧೇನ ಕರ್ಮಯೋಗನಿರೂಪಣಂ ।**
**ವ್ಯಾಸಜೈಮಿನಿಸಂವಾದಃ ಪುಣ್ಯಕರ್ಮಕಥಾನ್ವಿತಃ　　॥ ೧೭ ॥**

**ಸಮುದ್ರಮಥನಾಖ್ಯಾನಂ ವ್ರತಾಖ್ಯಾನಂ ತತಃ ಪರಂ ।**
**ಊರ್ಜಪಂಚಾಹಮಾಹಾತ್ಮ್ಯಂ ಸ್ತೋತ್ರಂ ಸರ್ವಾಪರಾಧನಂ　　॥ ೧೮ ॥**

**ಏತತ್ಸ್ವರ್ಗಾಭಿಧಂ ವಿಪ್ರ ಸರ್ವಪಾತಕನಾಶನಂ ।**
**ರಾಮಾಶ್ವಮೇಧಂ ಪ್ರಥಮಂ ರಾಮರಾಜ್ಯಾಭಿಷೇಚನಂ　　॥ ೧೯ ॥**

**ಆಗಸ್ತ್ಯಾದ್ಯಾಗಮಶ್ಚೈವ ಪೌಲಸ್ತ್ಯಾನ್ವಯಕೀರ್ತನಂ ।**
**ಅಶ್ವಮೇಧೋಪದೇಶಶ್ಚ ಹಯಚರ್ಯಾ ತತಃ ಪರಂ　　॥ ೨೦ ॥**

---

ಪ್ರಯಾಗಕ್ಷೇತ್ರಗಳ ಮಾಹಾತ್ಮ್ಯ, ವರ್ಣಾಶ್ರಮವಿಹಿತಕರ್ಮಯೋಗನಿರೂಪಣೆ, ಪುಣ್ಯಕರ್ಮಕಥಾಸಹಿತವಾದ ವ್ಯಾಸಜೈಮಿನಿಸಂವಾದ, ಸಮುದ್ರಮಥನಚರಿತ್ರೆ, ವ್ರತೋಪಾಖ್ಯಾನ, ಊರ್ಜಪಂಚಾಹಮಾಹಾತ್ಮ್ಯ, ಸರ್ವಾಪರಾಧಹರಸ್ತೋತ್ರ ಇವು ಈ ಖಂಡದಲ್ಲಿ ಉಕ್ತವಾಗಿವೆ. ಇದರ ಶ್ರವಣಾದಿಗಳಿಂದ ಸಕಲಪಾಪ ಪರಿಹಾರವಾಗುವುದು. ಇದಕ್ಕೆ ಸ್ವರ್ಗಖಂಡವೆಂದು ಹೆಸರು.

**ಪಾತಾಳಖಂಡ ೪.**

೧೯-೨೫. ರಾಮಾಶ್ವಮೇಧ, ಶ್ರೀರಾಮರಾಜ್ಯಾಭಿಷೇಕ, ಅಗಸ್ತ್ಯಾದಿಗಳ ಆಗಮನ, ಪೌಲಸ್ತ್ಯವಂಶಕೀರ್ತನೆ, ಅಶ್ವಮೇಧೋಪದೇಶ, ಅಶ್ವಸಂಚಾರ, ನಾನಾರಾಜಕಥೆ, ಜಗನ್ನಾಥಕ್ಷೇತ್ರವರ್ಣನೆ, ವೃಂದಾವನಮಾಹಾತ್ಮ್ಯ, ಶ್ರೀಕೃಷ್ಣನ ನಿತ್ಯಲೀಲೆಯ ವರ್ಣನೆ, ವೈಶಾಖಸ್ನಾನಮಹಿಮೆ, ಸ್ನಾನದಾನ

ನಾನಾರಾಜಕಥಾಃ ಪುಣ್ಯಾ ಜಗನ್ನಾಥಾನುವರ್ಣನಂ ।
ವೃಂದಾವನಸ್ಯ ಮಾಹಾತ್ಮ್ಯಂ ಸರ್ವಪಾಪಪ್ರಣಾಶನಂ ॥ ೨೧ ॥

ನಿತ್ಯಲೀಲಾನುಕಥನಂ ಯತ್ರ ಕೃಷ್ಣಾವತಾರಿಣಃ ।
ಮಾಧವಸ್ನಾನಮಾಹಾತ್ಮ್ಯಂ ಸ್ನಾನದಾನಾರ್ಚನೇ ಫಲಂ ॥ ೨೨ ॥

ಧರಾವರಾಹಸಂವಾದೋ ಯಮಬ್ರಾಹ್ಮಣಯೋಃ ಕಥಾ ।
ಸಂವಾದೋ ರಾಜದೂತಾನಾಂ ಕೃಷ್ಣಸ್ತೋತ್ರನಿರೂಪಣಂ ॥ ೨೩ ॥

ಶಿವಶಂಭುಸಮಾಯೋಗೋ ದಧೀಚಾಖ್ಯಾನಕಂ ತತಃ ।
ಭಸ್ಮಮಾಹಾತ್ಮ್ಯಮತುಲಂ ಶಿವಮಾಹಾತ್ಮ್ಯಮುತ್ತಮಂ ॥ ೨೪ ॥

ದೇವರಾತಸುತಾಖ್ಯಾನಂ ಪುರಾಣಜ್ಞಪ್ರಶಂಸನಂ ।
ಗೌತಮಾಖ್ಯಾನಕಂ ಚೈವ ಶಿವಗೀತಾ ತತಃ ಸ್ಮೃತಾ ॥ ೨೫ ॥

ಕಲ್ಪಾಂತರೇ ರಾಮಕಥಾ ಭಾರದ್ವಾಜಾಶ್ರಮಸ್ಥಿತಾ ।
ಪಾತಾಲಖಂಡಮೇತದ್ಧಿ ಶೃಣ್ವತಾಂ ಪಠತಾಂ ಸದಾ ॥ ೨೬ ॥

ಸರ್ವಪಾಪಪ್ರಶಮನಂ ಸರ್ವಾಭೀಷ್ಟಫಲಪ್ರದಂ ।
ಪರ್ವತಾಖ್ಯಾನಕಂ ಪೂರ್ವಂ ಗೌರ್ಯೈ ಪ್ರೋಕ್ತಂ ಶಿವೇನ ವೈ ॥ ೨೭ ॥

---

ಪೂಜೆಗಳಫಲ, ವರಾಹ ಧರಾದೇವಿಯ ಸಂವಾದ, ಯಮಬ್ರಾಹ್ಮಣಕಥೆ. ರಾಜದೂತರ ಕೃಷ್ಣಸ್ತುತಿ, ಶಂಭುಸಮಾಯೋಗ, ದಧೀಚ್ಯಾಖ್ಯಾನ, ಭಸ್ಮ ಮಹಾತ್ಮ್ಯ, ಉತ್ಕೃಷ್ಟ ಶಿವ ಮಾಹಾತ್ಮ್ಯ, ದೇವರಾತ ಸುತೋಪಾಖ್ಯಾನ, ಪುರಾಣಜ್ಞಾನಿಪ್ರಶಂಸೆ, ಗೌತಮೋಪಾಖ್ಯಾನ, ಶಿವಗೀತೆಯು

೨೬-೨೭. ಭಾರದ್ವಾಜಾಶ್ರಮದಲ್ಲಿ ನಡೆದ ಕಲ್ಪಾಂತರ ರಾಮಕಥೆ ಇವು ಈ ಖಂಡದಲ್ಲಿ ಉಕ್ತವಾಗಿವೆ ಇದಕ್ಕೆ ಪಾತಾಳಖಂಡವೆಂದು ಹೆಸರು.

ಇದನ್ನು ಸದಾ ಶ್ರವಣಪಠನೆಮಾಡುವವರಿಗೆ ಸಮಸ್ತ ಪಾಪಗಳೂ ಹೋಗಿ ಸಕಲೇಷ್ಟಾರ್ಥಗಳೂ ಲಭಿಸುವುವು.

ಜಾಲಂಧರಕಥಾ ಪಶ್ಚಾಚ್ಛ್ರೀಶೈಲಾದ್ಯನುಕೀರ್ತನಂ ।
ಸಗರಸ್ಯ ಕಥಾ ಪುಣ್ಯಾ ತತಃ ಪರಮುದೀರಿತಂ　　|| ೨೮ ||

ಗಂಗಾಪ್ರಯಾಗಕಾಶೀನಾಂ ಗಯಾಯಾಶ್ಚಾಧಿಪುಣ್ಯಕಂ ।
ಅನ್ನಾದಿದಾನಮಾಹಾತ್ಮ್ಯಂ ತನ್ಮಹಾದ್ವಾದಶೀವ್ರತಂ　　|| ೨೯ ||

ಚತುರ್ವಿಂಶೈಕಾದಶೀನಾಂ ಮಾಹಾತ್ಮ್ಯಂ ಪೃಥಗೀರಿತಂ ।
ವಿಷ್ಣುಧರ್ಮಸಮಾಖ್ಯಾನಂ ವಿಷ್ಣುನಾಮಸಹಸ್ರಕಂ　　|| ೩೦ ||

ಕಾರ್ತಿಕವ್ರತಮಾಹಾತ್ಮ್ಯಂ ಮಾಘಸ್ನಾನಫಲಂ ತತಃ ।
ಜಂಬೂದ್ವೀಪಸ್ಯ ತೀರ್ಥಾನಾಂ ಮಾಹಾತ್ಮ್ಯಂ ಪಾಪನಾಶನಂ　　|| ೩೧ ||

ಸಾಭ್ರಮತ್ಯಾಶ್ಚ ಮಾಹಾತ್ಮ್ಯಂ ನೃಸಿಂಹೋತ್ಪತ್ತಿವರ್ಣನಂ ।
ದೇವಶರ್ಮಾದಿಕಾಖ್ಯಾನಂ ಗೀತಾಮಾಹಾತ್ಮ್ಯವರ್ಣನಂ　　|| ೩೨ ||

ಭಕ್ತ್ಯಾಖ್ಯಾನಂ ಚ ಮಾಹಾತ್ಮ್ಯಂ ಶ್ರೀಮದ್ಭಾಗವತಸ್ಯ ಹ ।
ಇಂದ್ರಪ್ರಸ್ಥಸ್ಯ ಮಾಹಾತ್ಮ್ಯಂ ಬಹುತೀರ್ಥಕಥಾನ್ವಿತಂ　　|| ೩೩ ||

---

## ಉತ್ತರಖಂಡ ೫.

೨೮-೩೩. ಪಾರ್ವತೀದೇವಿಗೆ ಮಹೇಶ್ವರನು ಉಪದೇಶಮಾಡಿದ ಪರ್ವತೋಪಾಖ್ಯಾನ, ಜಲಂಧರ ಕಥೆ, ಶ್ರೀಶೈಲಾದ್ಯನು ವರ್ಣನೆ, ಸಗರಚರಿತ್ರೆ, ಗಂಗಾ ಪ್ರಯಾಗ ಕಾಶೀ ಮತ್ತು ಗಯೆಗಳ ಪುಣ್ಯಮಹಿಮೆ, ಅನ್ನಾದಿಗಳ ದಾನ ಮಾಹಾತ್ಮ್ಯ, ಮಹಾದ್ವಾದಶೀವ್ರತ, ಪ್ರತ್ಯೇಕವಾಗಿ ಇಪ್ಪತ್ತುನಾಲ್ಕು ಏಕಾದಶಿಗಳ ಮಾಹಾತ್ಮ್ಯ, ವಿಷ್ಣುಧರ್ಮ, ವಿಷ್ಣುಸಹಸ್ರನಾಮ, ಕಾರ್ತಿಕವ್ರತ ಮಾಹಾತ್ಮ್ಯ, ಮಾಘಸ್ನಾನಫಲ, ಜಂಬೂದ್ವೀಪದ ಪಾಪನಾಶಕ ತೀರ್ಥಗಳ ಮಾಹಾತ್ಮ್ಯ, ಸಾಭ್ರಮತಿಯ ಮಾಹಾತ್ಮ್ಯ, ನರಸಿಂಹಾವತಾರ, ದೇವಶರ್ಮ

ಮಂತ್ರರತ್ನಾಭಿಧಾನಂ ಚ ತ್ರಿಪಾದ್ಭೂತ್ಯನುವರ್ಣನಂ |
ಅವತಾರಕಥಾಃ ಪುಣ್ಯಾಃ ಮತ್ಸ್ಯಾದೀನಾಮತಃ ಪರಂ || ೩೪ ||

ರಾಮನಾಮಶತಂ ದಿವ್ಯಂ ತನ್ಮಾಹಾತ್ಮ್ಯಂ ಚ ವಾಡವ |
ಪರೀಕ್ಷಣಂ ಚ ಭೃಗುಣಾ ಶ್ರೀವಿಷ್ಣೋರ್ವೈಭವಸ್ಯ ಚ || ೩೫ ||

ಇತ್ಯೇತದುತ್ತರಂ ಖಂಡಂ ಪಂಚಮಂ ಸರ್ವಪುಣ್ಯದಂ |
ಪಂಚಖಂಡಯುತಂ ಪಾದ್ಮಂ ಯಃ ಶೃಣೋತಿ ನರೋತ್ತಮಃ || ೩೬ ||

ಸ ಲಭೇದ್ವೈಷ್ಣವಂ ಧಾಮ ಭುಕ್ತ್ವಾ ಭೋಗಾನಿಹೇಪ್ಸಿತಾನ್ |
ಏತದ್ವೈ ಪಂಚಪಂಚಾಶತ್ಸಹಸ್ರಂ ಪದ್ಮಸಂಜ್ಞಕಂ || ೩೭ ||

ಪುರಾಣಂ ಲೇಖಯಿತ್ವಾ ವೈ ಜ್ಯೇಷ್ಠ್ಯಾಂ ಸ್ವರ್ಣಾಬ್ಜಸಂಯುತಂ |
ಯಃ ಪ್ರದದ್ಯಾತ್ಸುಸತ್ಕೃತ್ಯ ಪುರಾಣಜ್ಞಾಯ ಮಾನದ || ೩೮ ||

---

ದಿಗಳ ಉಪಾಖ್ಯಾನ, ಗೀತಾಮಹಿಮೆ, ಭಕ್ತ್ಯುಪಾಖ್ಯಾನ, ಶ್ರೀಮದ್ಭಾಗವತ ಮಾಹಾತ್ಮ್ಯ, ಬಹುತೀರ್ಥಗಳ ಚರಿತ್ರೆಸಹಿತವಾದ ಇಂದ್ರಪ್ರಸ್ಥ ಮಾಹಾತ್ಮ್ಯ, ಶ್ರೇಷ್ಠಮಂತ್ರಗಳು, ತ್ರಿಪಾದ್ಭೂತ್ಯನುವರ್ಣನೆ, ಮತ್ಸ್ಯಾದ್ಯವತಾರಕಥೆ, ರಾಮ ನಾಮಶತ, ಅದರ ಮಾಹಾತ್ಮ್ಯ, ಶ್ರೀವಿಷ್ಣುವೈಭವವನ್ನು ಭೃಗುಮುನಿಯು ಪರೀಕ್ಷಿಸಿದುದು.

೩೬-೪೦. ಇವು ಈ ಖಂಡದಲ್ಲಿ ಉಕ್ತವಾಗಿವೆ. ಇದಕ್ಕೆ ಉತ್ತರಖಂಡ ವೆಂದು ಹೆಸರು. ಇದೇ ಐದನೆಯದು. ಇದು ಸರ್ವಪುಣ್ಯಪ್ರದವು.

ಈ ರೀತಿ ಐದು ಖಂಡಗಳಾಗಿರುವ ಪದ್ಮಪುರಾಣವನ್ನು ಸಂಪೂರ್ಣವಾಗಿ ಶ್ರವಣಮಾಡುವ ಮನುಷ್ಯೋತ್ತಮನು, ಈ ಲೋಕದಲ್ಲಿ ಬಯಸಿದ ಭೋಗ ಗಳನ್ನೆಲ್ಲಾ ಅನುಭವಿಸಿ ಅನಂತರ ವೈಕುಂಠಲೋಕವನ್ನು ಹೊಂದುವನು.

ಐವತ್ತೈದುಸಹಸ್ರಗ್ರಂಥಗಳನ್ನೊಳಗೊಂಡಿರುವ ಈ ಪದ್ಮಪುರಾಣವನ್ನು ಬರೆಯಿಸಿ ಅದನ್ನು ಸುವರ್ಣಕಮಲಸಹಿತವಾಗಿ ಜ್ಯೇಷ್ಠ ಶುಕ್ಲ ಪೂರ್ಣಿಮೆಯ

**ಸ ಯಾತಿ ವೈಷ್ಣವಂ ಧಾಮ ಸರ್ವದೇವನಮಸ್ಕೃತಃ ।**
**ಪದ್ಮಾನುಕ್ರಮಣೀಮೇತಾಂ ಯಃ ಪಠೇಚ್ಛೃಣುಯಾತ್ತಥಾ ॥ ೬೯ ॥**

**ಸೋಽಪಿ ಪದ್ಮಪುರಾಣಸ್ಯ ಲಭೇಚ್ಛ್ರವಣಜಂ ಫಲಂ ॥ ೭೦ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ಪದ್ಮಪುರಾಣಾನುಕ್ರಮವರ್ಣನಂ ನಾಮ ತ್ರಿನವತಿತಮೋಽಧ್ಯಾಯಃ**



---

ದಿನ, ಪುರಾಣಜ್ಞನಾದ ಬ್ರಾಹ್ಮಣನಿಗೆ ಸತ್ಕಾರಪೂರ್ವಕ ದಾನಮಾಡುವವನು ಸರ್ವದೇವತೆಗಳಿಂದಲೂ ಸ್ತುತ್ಯನಾಗಿ ವೈಷ್ಣವಸ್ಥಾನ ಎಂದರೆ ವೈಕುಂಠಲೋಕವನ್ನು ಹೊಂದುವನು.

ಈ ಪದ್ಮಪುರಾಣದ ವಿಷಯಾನುಕ್ರಮಣಿಕೆಯನ್ನು ಶ್ರವಣಪಠನಮಾಡುವವನೂ ಸಹ ಸಮಗ್ರಪದ್ಮಪುರಾಣ ಶ್ರವಣದಿಂದಾಗುವ ಫಲವನ್ನು ಹೊಂದುವನು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ನಾಲ್ಕನೆಯ ಪಾದದಲ್ಲಿ ಪದ್ಮಪುರಾಣ ವಿಷಯಾನುಕ್ರಮಣಿಕೆಯ ವರ್ಣನೆಯೆಂಬ ತೊಂಬತ್ಮೂರನೆಯ ಅಧ್ಯಾಯವು ಮುಗಿದುದು.



# ಚತುರ್ನವತಿತಮೋಽಧ್ಯಾಯಃ

## ಶ್ರೀಬ್ರಹ್ಮೋವಾಚ

ಶೃಣು ವತ್ಸ ಪ್ರವಕ್ಷ್ಯಾಮಿ ಪುರಾಣಂ ವೈಷ್ಣವಂ ಮಹತ್ |
ತ್ರಯೋವಿಂಶತಿಸಾಹಸ್ರಂ ಸರ್ವಪಾತಕನಾಶನಂ || ೧ ||

ಯತ್ರಾದಿಭಾಗೇ ನಿರ್ದಿಷ್ಟಾಃ ಷಡಂಶಾಃ ಶಕ್ತ್ರಿಜೇನ ಹ |
ಮೈತ್ರೇಯಾಯಾದಿಮೋ ತತ್ರ ಪುರಾಣಸ್ಯಾವತಾರಿಕಾಂ || ೨ ||

ಆದಿಕಾರಣಸರ್ಗಶ್ಚ ದೇವಾದೀನಾಂ ಚ ಸಂಭವಃ |
ಸಮುದ್ರಮಥನಾಖ್ಯಾನಂ ದಕ್ಷಾದೀನಾಂ ತತೋಽನ್ವಯಃ || ೩ ||

ಧ್ರುವಸ್ಯ ಚರಿತಂ ಚೈವ ಪೃಥೋಶ್ಚರಿತಮೇವ ಚ |
ಪ್ರಾಚೇತಸಂ ತಥಾಖ್ಯಾನಂ ಪ್ರಹ್ಲಾದಸ್ಯ ಕಥಾನಕಂ || ೪ ||

---

## ತೊಂಬತ್ತುನಾಲ್ಕನೆಯ ಅಧ್ಯಾಯವು

೧. ಶ್ರೀ ಬ್ರಹ್ಮನು ಹೇಳಿದನು—ಮಗುವೇ ! ಇಪ್ಪತ್ತುಮೂರುಸಾವಿರ ಗ್ರಂಥಗಳನ್ನೊಳಗೊಂಡ, ಶ್ರವಣಾದಿಗಳಿಂದ ಸಕಲಪಾಪಗಳನ್ನೂ ಪರಿಹರಿಸುವಂತಹ ವಿಷ್ಣುಮಹಾಪುರಾಣದ ವಿಷಯವನ್ನು ಹೇಳುವೆನು ಕೇಳು

### ವಿಷ್ಣುಪುರಾಣ.

೨-೫. ವಿಷ್ಣುಪುರಾಣದಲ್ಲಿ ಎರಡು ಭಾಗಗಳು, ಮೊದಲನೆಯ ಭಾಗದಲ್ಲಿ ಆರು ಅಂಶಗಳೂ ಒಳಪಟ್ಟಿವೆ. ಇದು ಪರಾಶರಮೈತ್ರೇಯಸಂವಾದರೂಪವಾಗಿದೆ.

### ಪೂರ್ವಭಾಗದ ಒಂದನೆಯ ಅಂಶ.

ಪುರಾಣದ ಅವತಾರಿಕೆ, ಆದಿಕಾರಣಸೃಷ್ಟಿ, ದೇವತೆ ಮುಂತಾದವರ ಜನ್ಮ, ಸಮುದ್ರಮಥನೋಪಾಖ್ಯಾನ, ದಕ್ಷಾದಿಗಳವಂಶ, ಧ್ರುವಚರಿತ್ರೆ,

ಪೃಥಗ್ರಾಜ್ಯಾಧಿಕಾರಾಖ್ಯಾ ಪ್ರಥಮೋಂಶ ಈರಿತಃ ।
ಪ್ರಿಯವ್ರತಾನ್ವಯಾಖ್ಯಾನಂ ದ್ವೀಪವರ್ಷನಿರೂಪಣಂ　　|| ೫ ||

ಪಾತಾಲನರಕಾಖ್ಯಾನಂ ಸಪ್ತಸ್ವರ್ಗನಿರೂಪಣಂ ।
ಸೂರ್ಯಾದಿಚಾರಕಥನಂ ಪೃಥಗ್ಲಕ್ಷಣಸಂಯುತಂ　　|| ೬ ||

ಚರಿತಂ ಭರತಸ್ಯಾಥ ಮುಕ್ತಿಮಾರ್ಗನಿದರ್ಶನಂ ।
ನಿದಾಘಋಭುಸಂವಾದೋ ದ್ವಿತೀಯೋಂಶ ಉದಾಹೃತಃ　　|| ೭ ||

ಮನ್ವಂತರಸಮಾಖ್ಯಾನಂ ವೇದವ್ಯಾಸಾವತಾರಕಂ ।
ನರಕೋದ್ಧಾರಕಂ ಕರ್ಮ ಗದಿತಂ ಚ ತತಃ ಪರಂ　　|| ೮ ||

ಸಗರಸ್ಯೌರ್ವಸಂವಾದೇ ಸರ್ವಧರ್ಮನಿರೂಪಣಂ ।
ಶ್ರಾದ್ಧಕಲ್ಪಂ ತತೋದ್ದಿಷ್ಟಂ ವರ್ಣಾಶ್ರಮನಿಬಂಧನಂ　　|| ೯ ||

ಪೃಥುಚರಿತ್ರೆ, ಪ್ರಾಚೇತಸೋಪಾಖ್ಯಾನ, ಪ್ರಹ್ಲಾದಚರಿತ್ರೆ, ರಾಜ್ಯಾಧಿಕಾರ ವಿಚಾರ ಇವು ಒಂದನೆಯ ಅಂಶದ ವಿಷಯಗಳು.

### ಎರಡನೆಯ ಅಂಶ.

೬-೭. ಪ್ರಿಯವ್ರತವಂಶಚರಿತ್ರೆ, ದ್ವೀಪಖಂಡನಿರೂಪಣೆ, ಪಾತಾಲ ನರಕಾಖ್ಯಾನ, ಸಪ್ತಸ್ವರ್ಗನಿರೂಪಣೆ, ಸೂರ್ಯಾದಿಚಾರ ವಿಚಾರ, ಮೋಕ್ಷ ಮಾರ್ಗಪ್ರದರ್ಶಕವಾದ ಭರತಚರಿತ್ರೆ, ನಿದಾಘ ಋಭುಸಂವಾದ ಇವು ದ್ವಿತೀಯಾಂಶದ ವಿಷಯಗಳು.

### ಮೂರನೆಯ ಅಂಶ.

೮-೧೦. ಮನ್ವಂತರಕಥೆ, ವೇದವ್ಯಾಸಾವತಾರ, ನರಕದಿಂದ ಉದ್ಧರಿಸು ವಂತಹ ಕರ್ಮ, ಸಗರ ಮತ್ತು ಔರ್ವರ ಸಂವಾದರೂಪವಾದ ಸರ್ವಧರ್ಮ ನಿರೂಪಣೆ, ಶ್ರಾದ್ಧಕಲ್ಪ, ವರ್ಣಾಶ್ರಮ ನಿಬಂಧನೆ, ಸದಾಚಾರ, ಮಾಯಾ

ಸದಾಚಾರಶ್ಚ ಕಥಿತೋ ಮಾಯಾಮೋಹಕಥಾ ತತಃ ।
ತೃತೀಯೋಂಶೋಯಮುದಿತಃ ಸರ್ವಪಾಪಪ್ರಣಾಶನಃ ॥ ೧೦ ॥

ಸೂರ್ಯವಂಶಕಥಾ ಪುಣ್ಯಾ ಸೋಮವಂಶಾನುಕೀರ್ತನಂ ।
ಚತುರ್ಥೇಂಶೇ ಮುನಿಶ್ರೇಷ್ಠ ನಾನಾರಾಜಕಥಾನ್ವಿತಂ ॥ ೧೧ ॥

ಕೃಷ್ಣಾವತಾರಸಂಪ್ರಶ್ನೋ ಗೋಕುಲೀಯಾ ಕಥಾ ತತಃ ।
ಪೂತನಾದಿವಧೋ ಬಾಲ್ಯೇ ಕೌಮಾರೇಽಘಾದಿಹಿಂಸನಂ ॥ ೧೨ ॥

ಕೈಶೋರೇ ಕಂಸಹನನಂ ಮಾಥುರಂ ಚರಿತಂ ತಥಾ ।
ತತಸ್ತು ಯೌವ್ವನೇ ಪ್ರೋಕ್ತಾ ಲೀಲಾ ದ್ವಾರವತೀಭವಾ ॥ ೧೩ ॥

ಸರ್ವದೈತ್ಯವಧೋ ಯತ್ರ ವಿವಾಹಾಶ್ಚ ಪೃಥಗ್ವಿಧಾಃ ।
ಯತ್ರ ಸ್ಥಿತ್ವಾ ಜಗನ್ನಾಥಃ ಕೃಷ್ಣೋ ಯೋಗೇಶ್ವರೇಶ್ವರಃ ॥ ೧೪ ॥

ಭೂಭಾರಹರಣಂ ಚಕ್ರೇ ಪರೇಷಾಂ ಹನನಾದಿಭಿಃ ।
ಅಷ್ಟಾವಕ್ರೀಯಮಾಖ್ಯಾನಂ ಪಂಚಮೋಂಶ ಇತೀರಿತಃ ॥ ೧೫ ॥

---

ಮೋಹಕಥೆ ಇವು ಸಕಲಪಾಪಪರಿಹಾರಕವಾದ ಮೂರನೆಯ ಅಂಶದ ವಿಷಯುಗಳು.

## ನಾಲ್ಕನೆಯ ಅಂಶ.

೧೧. ಪುಣ್ಯಕರವಾದ ಸೂರ್ಯವಂಶಕಥೆ, ನಾನಾರಾಜರ ಕಥೆಗಳಿಂದ ಯುಕ್ತವಾದ ಚಂದ್ರವಂಶಾನುಕೀರ್ತನೆ ಇವು ನಾಲ್ಕನೆಯ ಅಂಶದ ವಿಷಯುಗಳು.

## ಐದನೆಯ ಅಂಶ.

೧೨-೧೫. ಕೃಷ್ಣಾವತಾರಕಥೆ, ಗೋಕುಲಕಥೆ, ಬಾಲ್ಯದಲ್ಲಿ ಪೂತನಾದಿ ವಧೆ, ಕೌಮಾರದಲ್ಲಿ ಅಘಾದಿ ಹಿಂಸೆ, ಕಂಸಹನನ, ಮಾಥುರ ಚರಿತ್ರೆ, ಯೌವನದಲ್ಲಿ ದ್ವಾರಿಕೆಯಲ್ಲಿ ನಡೆಸಿದ ಲೀಲೆ, ಸಕಲ ದೈತ್ಯವಧೆ, ನಾನಾವಿಧವಿವಾಹಗಳು, ಶತ್ರುಹನನಾದಿಗಳಿಂದ ಭೂಭಾರಹರಣ, ಅಷ್ಟಾವಕ್ರೋಪಾಖ್ಯಾನ ಇವು ಐದನೆಯ ಅಂಶದ ವಿಷಯುಗಳು.

ಕಲಿಜಂ ಚರಿತಂ ಪ್ರೋಕ್ತಂ ಚಾತುರ್ವಿಧ್ಯಂ ಲಯಸ್ಯ ಚ ।
ಬ್ರಹ್ಮಜ್ಞಾನಸಮುದ್ದೇಶಃ ಖಾಂಡಿಕ್ಯಸ್ಯ ನಿರೂಪಿತಃ ॥ ೧೬ ॥

ಕೇಶಿಧ್ವಜೇನ ಚೇತ್ಯೇಷ ಷಷ್ಠೋಂಶಃ ಪರಿಕೀರ್ತಿತಃ ।
ಅತಃ ಪರಂ ತು ಸೂತೇನ ಶೌನಕಾದಿಭಿರಾದರಾತ್ ॥ ೧೭ ॥

ಪೃಷ್ಟೇನ ಚೋದಿತಾಃ ಶಶ್ವದ್ವಿಷ್ಣುಧರ್ಮೋತ್ತರಾಹ್ವಯಾಃ ।
ನಾನಾಧರ್ಮಕಥಾಃ ಪುಣ್ಯಾ ವ್ರತಾನಿ ನಿಯಮಾ ಯಮಾಃ ॥ ೧೮ ॥

ಧರ್ಮಶಾಸ್ತ್ರಂ ಚಾರ್ಥಶಾಸ್ತ್ರಂ ವೇದಾಂತಂ ಜ್ಯೋತಿಷಂ ತಥಾ ।
ವಂಶಾಖ್ಯಾನಂ ಪ್ರಕರಣಾತ್ ಸ್ತೋತ್ರಾಣಿ ಮಾನವಸ್ತಥಾ ॥ ೧೯ ॥

ನಾನಾವಿದ್ಯಾಸ್ತಥಾ ಪ್ರೋಕ್ತಾಃ ಸರ್ವಲೋಕೋಪಕಾರಿಕಾಃ ।
ಏತದ್ವಿಷ್ಣುಪುರಾಣಂ ವೈ ಸರ್ವಶಾಸ್ತ್ರಾರ್ಥಸಂಗ್ರಹಂ ॥ ೨೦ ॥

ವಾರಾಹಕಲ್ಪವೃತ್ತಾಂತಂ ವ್ಯಾಸೇನ ಕಥಿತಂ ತ್ವಿಹ ।
ಯೋ ನರಃ ಪಠತೇ ಭಕ್ತ್ಯಾ ಯಃ ಶೃಣೋತಿ ಚ ಸಾದರಂ ॥ ೨ ॥

---

೧೬. ಕಲಿಚರಿತ್ರೆ, ನಾಲ್ಕುವಿಧಪ್ರಲಯಗಳು, ಕೇಶಿಧ್ವಜನಿಂದ ಖಾಂಡಿಕ್ಯನಿಗೆ ಬ್ರಹ್ಮಜ್ಞಾನೋಪದೇಶ ಇವು ಆರನೆಯ ಅಂಶದ ವಿಷಯಗಳು.

ಆರನೆಯ ಅಂಶ.

ವಿಷ್ಣುಪುರಾಣದ ದ್ವಿತೀಯಭಾಗ

೧೭-೨೦. **ಸೂತ ಶೌನಕಸಂವಾದ.** ವಿಷ್ಣುಧರ್ಮೋತ್ತರವೆಂಬ ನಾನಾಧರ್ಮಕಥೆಗಳು, ವ್ರತ, ನಿಯಮ, ಯಮ, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ವೇದಾಂತ, ಜ್ಯೋತಿಷ, ವಂಶಾಖ್ಯಾನ, ಸ್ತೋತ್ರ, ಮನು, ಸಕಲಲೋಕಗಳಿಗೂ ಹಿತಕರವಾದ ನಾನಾವಿದ್ಯೆಗಳು ಇವು ದ್ವಿತೀಯಭಾಗದ ವಿಷಯಗಳು. ಈ ರೀತಿ ಸಕಲಶಾಸ್ತ್ರಾರ್ಥಸಂಗ್ರಹವೇ ವಿಷ್ಣುಪುರಾಣವು.

೨೧-೨೩. ಈ ಪುರಾಣದಲ್ಲಿ ವರಾಹಕಲ್ಪವೃತ್ತಾಂತವನ್ನು ವ್ಯಾಸರು

ತಾವುಭೌ ವಿಷ್ಣುಲೋಕಂ ಹಿ ವ್ರಜೇತಾಂ ಭುಕ್ತಭೋಗಕೌ ।
ತಲ್ಲಿಖಿತ್ವಾ ಚ ಯೋ ದದ್ಯಾದಾಷಾಢ್ಯಾಂ ಘೃತಧೇನುನಾ ॥ ೨೨ ॥

ಸಹಿತಂ ವಿಷ್ಣುಭಕ್ತಾಯ ಪುರಾಣಾರ್ಥವಿದೇ ದ್ವಿಜ ।
ಸ ಯಾತಿ ವೈಷ್ಣವಂ ಧಾಮ ವಿಮಾನೇನಾರ್ಕವರ್ಚಸಾ ॥ ೨೩ ॥

ಯಶ್ಚ ವಿಷ್ಣುಪುರಾಣಸ್ಯ ಸಮನುಕ್ರಮಣೀಂ ದ್ವಿಜ ।
ಕಥಯೇಚ್ಛೃಣುಯಾದ್ವಾಪಿ ಸ ಪುರಾಣಫಲಂ ಲಭೇತ್ ॥ ೨೪ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಚತುರ್ಥಪಾದೇ ವಿಷ್ಣುಪುರಾಣಾನುಕ್ರಮಣೀನಿರೂಪಣಂ
ನಾಮ ಚತುರ್ನವತಿತಮೋಽಧ್ಯಾಯಃ

---

ಹೇಳಿರುವರು. ಇದನ್ನು ಭಕ್ತಿಯಿಂದ ಪಠನೆ ಮಾಡುವವನು ಮತ್ತು ಶ್ರವಣ ಮಾಡುವವನು, ಇವರಿಬ್ಬರೂ ಸಹ ಇಲ್ಲಿ ಭೋಗಗಳನ್ನೆಲ್ಲಾ ಅನುಭವಿಸಿ ವಿಷ್ಣುಲೋಕಕ್ಕೆ ಹೋಗುವರು.

ದ್ವಿಜನೇ ! ಈ ಪುರಾಣವನ್ನು ಬರೆದು ಘೃತಧೇನುಸಹಿತವಾಗಿ ಅದನ್ನು ಆಷಾಢ ಶುಕ್ಲ ಪೂರ್ಣಿಮೆಯ ದಿನ ಪುರಾಣಾರ್ಥವೇತ್ತೃವಾದ ವಿಷ್ಣುಭಕ್ತನಿಗೆ ದಾನಮಾಡುವ ಮನುಷ್ಯನು ಸೂರ್ಯನಂತೆ ತೇಜಸ್ಸಿನಿಂದ ಯುಕ್ತವಾದ ವಿಮಾನಾರೂಢನಾಗಿ ವೈಕುಂಠಲೋಕಕ್ಕೆ ಹೋಗುತ್ತಾನೆ.

೨೪. ಈ ವಿಷ್ಣುಪುರಾಣ ವಿಷಯಾನುಕ್ರಮಣಿಕೆಯನ್ನು ಶ್ರವಣಪಠನೆ ಮಾಡುವವನೂ ಸಹ ಪುರಾಣಶ್ರವಣಾದಿ ಫಲವನ್ನೇ ಹೊಂದುವನು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ನಾಲ್ಕನೆಯ ಪಾದದಲ್ಲಿ ವಿಷ್ಣುಪುರಾಣವಿಷಯಾನು
ಕ್ರಮಣಿಕೆಯ ನಿರೂಪಣವೆಂಬ ತೊಂಬತ್ತುನಾಲ್ಕನೆಯ
ಅಧ್ಯಾಯವು ಮುಗಿದುದು.

*

## ಪಂಚನವತಿತಮೋಽಧ್ಯಾಯಃ

### ಬ್ರಹ್ಮೋವಾಚ

ಶೃಣು ವಿಪ್ರ ಪ್ರವಕ್ಷ್ಯಾಮಿ ಪುರಾಣಂ ವಾಯವೀಯಕಂ ।
ಯಸ್ಮಿನ್ ಶ್ರುತೇ ಲಭೇದ್ಧಾಮ ರುದ್ರಸ್ಯ ಪರಮಾತ್ಮನಃ ॥ ೧ ॥

ಚತುರ್ವಿಂಶತಿಸಾಹಸ್ರಂ ತತ್ಪುರಾಣಂ ಪ್ರಕೀರ್ತಿತಂ ।
ಶ್ವೇತಕಲ್ಪಪ್ರಸಂಗೇನ ಧರ್ಮಾನತ್ರಾಹ ಮಾರುತಃ ॥ ೨ ॥

ತದ್ವಾಯವೀಯಮುದಿತಂ ಭಾಗದ್ವಯಸಮನ್ವಿತಂ ।
ಸರ್ಗಾದಿಲಕ್ಷಣಂ ಯತ್ರ ಪ್ರೋಕ್ತಂ ವಿಪ್ರ ಸವಿಸ್ತರಂ ॥ ೩ ॥

---

### ತೊಂಬತ್ತೈದನೆಯ ಅಧ್ಯಾಯವು

೧. ಶ್ರೀಬ್ರಹ್ಮನು ಹೇಳಿದನು—ಬ್ರಾಹ್ಮಣನಾದ ಮರೀಚಿಯೇ! ಕೇಳು ವಾಯವೀಯಪುರಾಣದ ವಿಷಯವನ್ನು ಹೇಳುವೆನು. ಅದನ್ನು ಶ್ರವಣ ಮಾಡಿದರೆ ರೋಗಪರಿಹಾರಕನಾದುದರಿಂದ ರುದ್ರನೆನಿಸಿರುವ ಪರಮಾತ್ಮನ ಸ್ಥಾನವು ದೊರಕುವುದು.

### ವಾಯುಪುರಾಣ.

೨-೩. ಈ ಪುರಾಣವು ಇಪ್ಪತ್ತು ನಾಲ್ಕುಸಾವಿರ ಗ್ರಂಥಗಳನ್ನೊಳಗೊಂಡಿದೆ. ವಾಯುದೇವನು ಈ ಪುರಾಣದಲ್ಲಿ ಶ್ವೇತಕಲ್ಪಪ್ರಸಂಗದಿಂದ ಧರ್ಮಗಳನ್ನು ಹೇಳಿರುವನಾದಕಾರಣ, ಅದಕ್ಕೆ ವಾಯವೀಯವೆಂದು ಹೆಸರು ಬಂದಿತು. ಅದರಲ್ಲಿ ಎರಡು ಭಾಗಗಳಿವೆ.

ಮನ್ವಂತರೇಷು ವಂಶಾಶ್ಚ ರಾಜ್ಞಾಂ ಯೇ ಯತ್ರ ಕೀರ್ತಿತಾಃ ।
ಗಯಾಸುರಸ್ಯ ಹನನಂ ವಿಸ್ತರಾದ್ಯತ್ರ ಕೀರ್ತಿತಂ ॥ ೪ ॥

ಮಾಸಾನಾಂ ಚೈವ ಮಾಹಾತ್ಮ್ಯಂ ಮಾಘಸ್ಯೋಕ್ತಂ ಫಲಾಧಿಕಂ ।
ದಾನಧರ್ಮಾ ರಾಜಧರ್ಮಾ ವಿಸ್ತರೇಣೋದಿತಾಸ್ತಥಾ ॥ ೫ ॥

ಭೂಪಾತಾಲಕಕುಬ್ವ್ಯೋಮಚಾರಿಣಾಂ ಯತ್ರ ನಿರ್ಣಯಃ ।
ವ್ರತಾದೀನಾಂ ಚ ಪೂರ್ವೋಯಂ ವಿಭಾಗಃ ಸಮುದಾಹೃತಃ ॥ ೬ ॥

ಉತ್ತರೇ ತಸ್ಯ ಭಾಗೇ ತು ನರ್ಮದಾತೀರ್ಥವರ್ಣನಂ ।
ಶಿವಸ್ಯ ಸಂಹಿತೋಕ್ತಾ ವೈ ವಿಸ್ತರೇಣ ಮುನೀಶ್ವರ ॥ ೭ ॥

ಯೋ ದೇವಃ ಸರ್ವದೇವಾನಾಂ ದುರ್ವಿಜ್ಞೇಯಃ ಸನಾತನಃ ।
ಸ ತು ಸರ್ವಾತ್ಮನಾ ಯಸ್ಯಾಸ್ತೀರೇ ತಿಷ್ಠತಿ ಸಂತತಂ ॥ ೮ ॥

---

## ಪೂರ್ವಭಾಗ.

೩-೬. ಸರ್ಗಾದಿಲಕ್ಷಣ, ಮನ್ವಂತರ, ರಾಜವಂಶ, ಗಯಾಸುರಸಂಹಾರ, ಮಾಸಮಾಹಾತ್ಮ್ಯ, ಮಾಘಮಾಸದ ಫಲಾಧಿಕ್ಯ, ದಾನಧರ್ಮ, ರಾಜಧರ್ಮ, ಭೂಪಾತಾಲಾಂತರಿಕ್ಷಗಳಲ್ಲಿ ಸಂಚರಿಸುವವರ ನಿರ್ಣಯ, ವ್ರತಾದಿಗಳನಿರ್ಣಯ ಇವು ಪೂರ್ವಭಾಗದ ವಿಷಯಗಳು

## ಉತ್ತರಭಾಗ.

೭-೧೦. ನರ್ಮದಾತೀರ್ಥವರ್ಣನೆ, ಶಿವಸಂಹಿತೆ, ಸಕಲ ದೇವತೆಗಳಿಗೂ ದುರ್ಜ್ಞೇಯನಾದ ಸನಾತನದೇವನು ವಿಶೇಷಸಾನ್ನಿಧ್ಯದಿಂದ ನರ್ಮದಾತೀರದಲ್ಲಿ ಯಾವಾಗಲೂ ಇರುವನು. ಈ ನರ್ಮದಾಜಲವೇ ಬ್ರಹ್ಮ, ಹರಿ, ಈಶ್ವರರೆಂಬ ತ್ರಿಮೂರ್ತಿಗಳ ಸನ್ನಿಧಾನಕ್ಕೆ ಪಾತ್ರವು. ಇದೇ ಪ್ರಾಕೃತಾಕಾರಾದಿ

ಇದಂ ಬ್ರಹ್ಮಾ ಹರಿರಿದಂ ಸಾಕ್ಷಾಚ್ಚೇದಂ ಪರೋ ಹರಃ ।
ಇದಂ ಬ್ರಹ್ಮ ನಿರಾಕಾರಂ ಕೈವಲ್ಯಂ ನರ್ಮದಾಜಲಂ ॥ ೯ ॥

ಧ್ರುವಂ ಲೋಕಹಿತಾರ್ಥಾಯ ಶಿವೇನ ಸ್ವಶರೀರತಃ ।
ಶಕ್ತಿಃ ಕಾಪಿ ಸರಿದ್ರೂಪಾ ರೇವೇಯಮವತಾರಿತಾ ॥ ೧೦ ॥

ಯೇ ವಸಂತ್ಯುತ್ತರೇ ಕೂಲೇ ರುದ್ರಸ್ಯಾನುಚರಾ ಹಿ ತೇ ।
ವಸಂತಿ ಯಾಮ್ಯತೀರೇ ಯೇ ಲೋಕಂ ತೇ ಯಾಂತಿ ವೈಷ್ಣವಂ ॥ ೧೧ ॥

ಓಂಕಾರೇಶ್ವರಮಾರಭ್ಯ ಯಾವತ್ಪಶ್ಚಿಮಸಾಗರಃ ।
ಸಂಗಮಾಃ ಪಂಚ ಚ ತ್ರಿಂಶನ್ನದೀನಾಂ ಪಾಪನಾಶಿನೀ ॥ ೧೨ ॥

ದಶೈಕಮುತ್ತರೇ ತೀರೇ ತ್ರಯೋವಿಂಶತಿರ್ದಕ್ಷಿಣೇ ।
ಪಂಚತ್ರಿಂಶತ್ತಮಃ ಪ್ರೋಕ್ತೋ ರೇವಾಸಾಗರಸಂಗಮಃ ॥ ೧೩ ॥

ಸಂಗಮೈಃ ಸಹಿತಾನ್ಯೇವ ರೇವಾತೀರದ್ವಯೇಽಪಿ ಚ ।
ಚತುಃಶತಾನಿ ತೀರ್ಥಾನಿ ಪ್ರಸಿದ್ಧಾನಿ ಚ ಸಂತಿ ಹಿ ॥ ೧೪ ॥

---

ರಹಿತನಾದ ಪರಬ್ರಹ್ಮನ ಆವಾಸಸ್ಥಾನವು. ಲೋಕಹಿತಕ್ಕೋಸ್ಕರ ಈಶ್ವರನು ತನ್ನ ಶರೀರದಿಂದಲೇ ಒಂದಾನೊಂದು ಶಕ್ತಿಯನ್ನು ಭೂಲೋಕಕ್ಕೆ ನದಿಯ ರೂಪವಾಗಿ ಕಳುಹಿಸಿರುವನು. ಅದೇ ನರ್ಮದಾನದಿಯು.

೧೧-೧೫. ಈ ನದಿಯು ಉತ್ತರ ತೀರದಲ್ಲಿ ವಾಸವಾಗಿರುವ ರುದ್ರ ಭಕ್ತರು ಮತ್ತು ದಕ್ಷಿಣ ತೀರದಲ್ಲಿ ವಾಸವಾಗಿರುವವರೂ ಸಹ ವಿಷ್ಣುಲೋಕಕ್ಕೆ ಹೋಗುವರು. ಓಂಕಾರೇಶ್ವರಕ್ಷೇತ್ರದಿಂದ ಪಶ್ಚಿಮಸಮುದ್ರದವರೆಗೆ ಈ ನದಿಗೆ ಮೂವತ್ತೈದು ಸಂಗಮಗಳಾಗುತ್ತವೆ. ಉತ್ತರ ತೀರದಲ್ಲಿ ಹನ್ನೊಂದು ಸಂಗಮಗಳು, ದಕ್ಷಿಣತೀರದಲ್ಲಿ ಇಪ್ಪತ್ತುಮೂರು. ಸಾಗರಸಂಗಮವೇ ಮೂವತ್ತೈದನೆಯದು. ಈ ನದಿಯ ಎರಡು ತೀರಗಳಲ್ಲಿ ಸಂಗಮಸಹಿತವಾಗಿ

**ಷಷ್ಟಿತೀರ್ಥಸಹಸ್ರಾಣಿ ಷಷ್ಟಿಕೋಟ್ಯೋ ಮುನೀಶ್ವರ |**
**ಸಂತಿ ಚಾನ್ಯಾನಿ ರೇವಾಯಾಸ್ತೀರಯುಗ್ಮೇ ಪದೇ ಪದೇ || ೧೫ ||**

**ಸಂಹಿತೇಯಂ ಮಹಾಪುಣ್ಯಾ ಶಿವಸ್ಯ ಪರಮಾತ್ಮನಃ |**
**ನರ್ಮದಾಚರಿತಂ ಯತ್ರ ವಾಯುನಾ ಪರಿಕೀರ್ತಿತಂ || ೧೬ ||**

**ಲಿಖಿತ್ವೇದಂ ಪುರಾಣಂ ತು ಗುಡಧೇನುಸಮನ್ವಿತಂ |**
**ಶ್ರಾವಣ್ಯಾಂ ಯೋ ದದೇದ್ಭಕ್ತ್ಯಾ ಬ್ರಾಹ್ಮಣಾಯ ಕುಟುಂಬಿನೇ || ೧೭ ||**

**ರುದ್ರಲೋಕೇ ವಸೇತ್ಸೋಽಪಿ ಯಾವದಿಂದ್ರಾಶ್ಚತುರ್ದಶ |**
**ಯಃ ಶ್ರಾವಯೇದ್ವಾ ಶೃಣುಯಾದ್ವಾಯಮೀಯಮಿದಂ ನರಃ || ೧೮ ||**

---

ನಾಲ್ಕುನೂರು ತೀರ್ಥಗಳು ಪ್ರಸಿದ್ಧವಾಗಿವೆ. ಈ ರೇವಾತೀರಗಳಲ್ಲಿ ಪ್ರತಿಯೊಂದು ಹೆಜ್ಜೆಗೂ ಒಂದೊಂದು ತೀರ್ಥವಿದೆ. ಒಟ್ಟಿನಲ್ಲಿ ಕೋಟ್ಯಂತರ ಸಾವಿರ ತೀರ್ಥಗಳಿವೆ.

೧೬. ಇತ್ಯಾದಿ ನರ್ಮದಾನದಿಯ ಮಹಿಮೆಯು ವರ್ಣಿತವಾಗಿದೆ. ವಾಯುದೇವನು ನರ್ಮದಾ ಚರಿತ್ರೆಯನ್ನು ಹೇಳಿರುವ ಈ ಶಿವಪರಮಾತ್ಮನ ಸಂಹಿತೆಯು ಮಹಾಪುಣ್ಯಕರವಾದುದು.

೧೭-೨೦. ಈ ಪುರಾಣವನ್ನು ಬರೆದು, ಗುಡ ಧೇನುಸಹಿತವಾಗಿ ಶ್ರಾವಣ ಶುದ್ಧ ಪೂರ್ಣಿಮೆಯ ದಿನ ಕುಟುಂಬಿಯಾದ ಶ್ರೋತ್ರಿಯ ಬ್ರಾಹ್ಮಣನಿಗೆ ಭಕ್ತಿಯಿಂದ ದಾನಮಾಡುವವನು ಹದಿನಾಲ್ಕು ಇಂದ್ರರು ಇರುವವರೆಗೂ ರುದ್ರಲೋಕದಲ್ಲಿ ವಾಸಮಾಡುವನು.

ಹವಿಷ್ಯಾನ್ನವನ್ನೇ ಭೋಜನಮಾಡುತ್ತಾ ನಿಯಮದಿಂದ ಈ ಪುರಾಣ

ನಿಯಮೇನ ಹವಿಷ್ಯಾಶೀ ಸ ರುದ್ರೋ ನಾತ್ರ ಸಂಶಯಃ ।
ಯಶ್ಚಾನುಕ್ರಮಣೀಮೇತಾಂ ಶೃಣೋತಿ ಶ್ರಾವಯೇತ್ತಥಾ ॥ ೧೯ ॥

ಸೋಽಪಿ ಸರ್ವಪುರಾಣಸ್ಯ ಫಲಂ ಶ್ರವಣಜಂ ಲಭೇತ್ ॥ ೨೦ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಚತುರ್ಥಪಾದೇ ವಾಯುಪುರಾಣಾನುಕ್ರಮಣೀನಿರೂಪಣಂ ನಾಮ
ಪಂಚನವತಿತಮೋಽಧ್ಯಾಯಃ

---

ವನ್ನು ಶ್ರವಣಪಠನಮಾಡುವವನು ರುದ್ರಸಾಯುಜ್ಯವನ್ನು ಪಡೆಯುವನು ಸಂದೇಹವಿಲ್ಲ.

ಈ ವಿಷಯಾನುಕ್ರಮಣಿಕೆಯನ್ನು ಶ್ರವಣಪಠನೆಮಾಡುವವನೂ ಸಹ ಸಂಪೂರ್ಣ ಪುರಾಣಶ್ರವಣ ಫಲವನ್ನು ಹೊಂದುವನು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗವ ಬೃಹದುಪಾಖ್ಯಾನ
ವೆಂಬ ನಾಲ್ಕನೆಯ ಪಾದದಲ್ಲಿ ವಾಯುಪುರಾಣವಿಷಯಾನುಕ್ರಮ
ವರ್ಣನೆಯೆಂಬ ತೊಂಬತ್ತೈದನೆಯ ಅಧ್ಯಾಯವು ಮುಗಿದುದು.

---

*

## ಷಣ್ಣವತಿತಮೋಽಧ್ಯಾಯಃ

### ಶ್ರೀಬ್ರಹ್ಮೋವಾಚ

ಮರೀಚೇ ಶೃಣು ವಕ್ಷ್ಯಾಮಿ ವೇದವ್ಯಾಸೇನ ಯತ್ಕೃತಂ ।
ಶ್ರೀಮದ್ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಂ ॥ ೧ ॥

ತದಷ್ಟಾದಶಸಾಹಸ್ರಂ ಕೀರ್ತಿತಂ ಪಾಪನಾಶನಂ ।
ಸುರಪಾದಪರೂಪೋಽಯಂ ಸ್ಕಂಧೈರ್ದ್ವಾದಶಭಿರ್ಯುತಃ ॥ ೨ ॥

ಭಗವಾನೇವ ವಿಪ್ರೇಂದ್ರ ವಿಶ್ವರೂಪೀ ಸಮೀರಿತಃ ।
ತತ್ರ ತು ಪ್ರಥಮಸ್ಕಂಧೇ ಸೂತರ್ಷೀಣಾಂ ಸಮಾಗಮಃ ॥ ೩ ॥

ವ್ಯಾಸಸ್ಯ ಚರಿತಂ ಪುಣ್ಯಂ ಪಾಂಡವಾನಾಂ ತಥೈವ ಚ ।
ಪಾರೀಕ್ಷಿತಮುಪಾಖ್ಯಾನಮಿತೀದಂ ಸಮುದಾಹೃತಂ ॥ ೪ ॥

---

### ತೊಂಬತ್ತಾರನೆಯ ಅಧ್ಯಾಯವು.

೧. ಶ್ರೀಬ್ರಹ್ಮನು ಹೇಳಿದನು--ಮರೀಚಿಯೇ ! ವೇದವ್ಯಾಸರಚಿತವಾದ ಶ್ರೀಮದ್ಭಾಗವತವೆಂಬ ಬ್ರಹ್ಮಸಂಹಿತ ಪುರಾಣ ವಿಷಯವನ್ನು ಹೇಳುವೆನು, ಕೇಳು.

### ಶ್ರೀಮದ್ಭಾಗವತ.

೨. ಅದು ಹದಿನೆಂಟುಸಾವಿರ ಗ್ರಂಥಗರ್ಭಿತವಾಗಿದೆ. ಸಕಲ ಪಾಪ ನಾಶಕವು ಮತ್ತು ಕಲ್ಪವೃಕ್ಷಸಮಾನವು ಅದರಲ್ಲಿ ಹನ್ನೆರಡು ಸ್ಕಂಧಗಳಿವೆ.

೩-೬. ಬ್ರಾಹ್ಮಣವರ್ಯನೇ ! ಇದರಲ್ಲಿ ಭಗವಂತನೇ ವಿಶ್ವರೂಪಿಯಾಗಿ ಉಕ್ತನಾಗಿರುವನು.

ಪರೀಕ್ಷಿಚ್ಛುಕಸಂವಾದೇ ಸೃಷ್ಟಿದ್ವಯನಿರೂಪಣಂ |
ಬ್ರಹ್ಮನಾರದಸಂವಾದೇ ದೇವತಾಚರಿತಾಮೃತಂ || ೫ ||

ಪುರಾಣಲಕ್ಷಣಂ ಚೈವ ಸೃಷ್ಟಿಕಾರಣಸಂಭವಃ |
ದ್ವಿತೀಯೋಽಯಂ ಸಮುದಿತಃ ಸ್ಕಂಧೋ ವ್ಯಾಸೇನ ಧೀಮತಾ || ೬ ||

ಚರಿತಂ ವಿದುರಸ್ಯಾಥ ಮೈತ್ರೇಯೇಣಾಸ್ಯ ಸಂಗಮಃ |
ಸೃಷ್ಟಿಪ್ರಕರಣಂ ಪಶ್ಚಾದ್ಬ್ರಹ್ಮಣಃ ಪರಮಾತ್ಮನಃ || ೭ ||

ಕಾಪಿಲಂ ಸಾಂಖ್ಯಮಪ್ಯತ್ರ ತೃತೀಯೋಽಯಮುದಾಹೃತಃ |
ಸತ್ಯಾಶ್ಚರಿತಮಾದೌ ತು ಧ್ರುವಸ್ಯ ಚರಿತಂ ತತಃ || ೮ ||

ಪೃಥೋಃ ಪುಣ್ಯಸಮಾಖ್ಯಾನಂ ತತಃ ಪ್ರಾಚೀನಬರ್ಹಿಷಂ |
ಇತ್ಯೇಷ ತುರ್ಯೋ ಗದಿತೋ ವಿಸರ್ಗೇ ಸ್ಕಂಧ ಉತ್ತಮಃ || ೯ ||

---

## ಪ್ರಥಮಸ್ಕಂಧ

ಸೂತ ಶೌನಕ ಸಮಾವೇಶ, ವ್ಯಾಸಚರಿತ್ರೆ, ಪಾಂಡವರ ಕಥೆ, ಪರಿಕ್ಷಿದ್ರಾಜಚರಿತ್ರೆ, ದ್ವಿಜಶಾಪ, ಶುಕಪರೀಕ್ಷಿತ್ಸಮಾವೇಶ ಇವು ಪ್ರಥಮಸ್ಕಂಧದಲ್ಲಿ ವಿಸ್ತರಿಸಲ್ಪಟ್ಟವೆ.

## ದ್ವಿತೀಯಸ್ಕಂಧ.

ಪರೀಕ್ಷಿಚ್ಛುಕಸಂವಾದದಲ್ಲಿ ಸೃಷ್ಟಿದ್ವಯನಿರೂಪಣೆ, ಬ್ರಹ್ಮನಾರದ ಸಂವಾದದಲ್ಲಿ ದೇವತಾಚರಿತಾಮೃತ, ಪುರಾಣಲಕ್ಷಣ, ಸೃಷ್ಟಿಕಾರಣಸಂಭವ ಇವು ಉಕ್ತವಾಗಿವೆ.

## ತೃತೀಯಸ್ಕಂಧ.

೭-೧೨. ವಿದುರಚರಿತ್ರೆ, ಮೈತ್ರೇಯಸಮಾಗಮ, ಬ್ರಹ್ಮಸೃಷ್ಟಿ, ಯುಗಮಾನವರ್ಣನೆ, ವರಾಹಾವತಾರ, ಸ್ವಾಯಂಭುವಚರಿತೆ, ಕಪಿಲಸಾಂಖ್ಯಾದಿ ತತ್ವೋಪದೇಶ ಇವು ಉಕ್ತವಾಗಿವೆ.

ಪ್ರಿಯವ್ರತಸ್ಯ ಚರಿತಂ ತದ್ವಂಶ್ಯಾನಾಂ ಚ ಪುಣ್ಯದಂ ।
ಬ್ರಹ್ಮಾಂಡಾಂತರ್ಗತಾನಾಂ ಚ ಲೋಕಾನಾಂ ವರ್ಣನಂ ತತಃ ॥ ೧೦ ॥

ನರಕಸ್ಥಿತಿರಿತ್ಯೇಷ ಸಂಸ್ಥಾನೇ ಪಂಚಮೋ ಮತಃ ।
ಅಜಾಮಿಲಸ್ಯ ಚರಿತಂ ದಕ್ಷಸೃಷ್ಟಿನಿರೂಪಣಂ ॥ ೧೧ ॥

ವೃತ್ರಾಖ್ಯಾನಂ ತತಃ ಪಶ್ಚಾನ್ಮರುತಾಂ ಜನ್ಮ ಪುಣ್ಯದಂ ।
ಷಷ್ಠೋಽಯಮುದಿತಃ ಸ್ಕಂಧೋ ವ್ಯಾಸೇನ ಪರಿಪೋಷಣೇ ॥ ೧೨ ॥

ಪ್ರಹ್ಲಾದಚರಿತಂ ಪುಣ್ಯಂ ವರ್ಣಾಶ್ರಮನಿರೂಪಣಂ ।
ಸಪ್ತಮೋ ಗದಿತೋ ವತ್ಸ ವಾಸನಾಕರ್ಮಕೀರ್ತನೇ ॥ ೧೩ ॥

---

## ಚತುರ್ಥಸ್ಕಂಧ

ಸತೀಚರಿತ್ರೆ, ಧ್ರುವಚರಿತ್ರೆ, ಪೃಥುಪುಣ್ಯಚರಿತ್ರೆ, ಪ್ರಾಚೀನಬರ್ಹಿ ಮತ್ತು ಪ್ರಚೇತಸಚರಿತ್ರೆ ಮುಂತಾದುವು ಈ ಸ್ಕಂಧದಲ್ಲಿ ಉಕ್ತವಾಗಿವೆ.

## ಪಂಚಮಸ್ಕಂಧ.

ಪ್ರಿಯವ್ರತಚರಿತ್ರೆ, ಅವನ ವಂಶಪರಂಪರೆಯ ಚರಿತ್ರೆ, ಬ್ರಹ್ಮಾಂಡಾಂತರ್ಗತಲೋಕವರ್ಣನೆ, ನರಕಸ್ಥಿತಿ ಇತ್ಯಾದಿ ವಿಷಯಗಳು ಇಲ್ಲಿ ಹೇಳಲ್ಪಟ್ಟವೆ.

## ಷಷ್ಠಸ್ಕಂಧ

ಅಜಾಮಿಳಚರಿತ್ರೆ, ದಕ್ಷಸೃಷ್ಟಿ, ವೃತ್ರೋಪಾಖ್ಯಾನ, ಮರುದುತ್ಪತ್ತಿ ಇವು ಆರನೆಯ ಸ್ಕಂಧದಲ್ಲಿ ಉಕ್ತವಾಗಿವೆ.

## ಸಪ್ತಮಸ್ಕಂಧ

೧೩. ಪ್ರಹ್ಲಾದಚರಿತ್ರೆ, ನರಸಿಂಹಾವತಾರ, ವರ್ಣಾಶ್ರಮಧರ್ಮ ಇವುಗಳು ಏಳನೆಯ ಸ್ಕಂಧದಲ್ಲಿ ನಿರೂಪಿತವಾಗಿವೆ.

ಗಜೇಂದ್ರಮೋಕ್ಷಣಾಖ್ಯಾನಂ ಮನ್ವಂತರನಿರೂಪಣೇ ।
ಸಮುದ್ರಮಥನಂ ಚೈವ ಬಲಿವೈಭವಬಂಧನಂ ॥ ೧೪ ॥

ಮತ್ಸ್ಯಾವತಾರಚರಿತಮಷ್ಟಮೋಽಯಂ ಪ್ರಕೀರ್ತಿತಃ ।
ಸೂರ್ಯವಂಶಸಮಾಖ್ಯಾನಂ ಸೋಮವಂಶನಿರೂಪಣಂ ॥ ೧೫ ॥

ವಂಶ್ಯಾನುಚರಿತೇ ಪ್ರೋಕ್ತೋ ನವಮೋಽಯಂ ಮಹಾಮತೇ ।
ಕೃಷ್ಣಸ್ಯ ಬಾಲಚರಿತಂ ಕೌಮಾರಂ ಚ ವ್ರಜಸ್ಥಿತಿಃ ॥ ೧೬ ॥

ಕೈಶೋರಂ ಮಥುರಾಸ್ಥಾನಂ ಯೌವನಂ ದ್ವಾರಕಾಸ್ಥಿತಿಃ ।
ಭೂಭಾರಹರಣಂ ಚಾತ್ರ ನಿರೋಧೇ ದಶಮಃ ಸ್ಮೃತಃ ॥ ೧೭ ॥

---

## ಅಷ್ಟಮಸ್ಕಂಧ

೧೪-೧೭. ಚತುರ್ದಶಮನ್ವಂತರ ನಿರೂಪಣೆಯಲ್ಲಿ ಗಜೇಂದ್ರಮೋಕ್ಷ, ಸಮುದ್ರಮಥನ, ಬಲಿವೈಭವಬಂಧನ, ಮತ್ಸ್ಯಾವತಾರಚರಿತ್ರೆ ಇವು ಎಂಟನೆಯ ಸ್ಕಂಧದಲ್ಲಿ ಉಕ್ತವಾಗಿವೆ.

## ನವಮಸ್ಕಂಧ

ಸೂರ್ಯವಂಶಚರಿತ್ರೆ, ಚಂದ್ರವಂಶೋಪಾಖ್ಯಾನ ಇವು ಒಂಬತ್ತನೆಯ ಸ್ಕಂಧದಲ್ಲಿ ವಿಸ್ತಾರವಾಗಿ ಆಯಾಯಾ ವಂಶದಲ್ಲಿ ಪ್ರಸಿದ್ಧರಾಜರಕಥೆಪೂರ್ವಕ ವಾಗಿ ಉಕ್ತವಾಗಿವೆ.

## ದಶಮಸ್ಕಂಧ

ಶ್ರೀಕೃಷ್ಣನ ಬಾಲಲೀಲೆ, ಕೌಮಾರ ವಿಹಾರ, ಗೋಕುಲವಾಸ, ಮಥುರಾ ಸ್ಥಿತಿ, ಯೌವನದಲ್ಲಿ ದ್ವಾರಕಾವಾಸ, ಯುದ್ಧಸಂದರ್ಭದಲ್ಲಿ ಭೂಭಾರಹರಣ, ಇವು ಹತ್ತನೆಯ ಸ್ಕಂಧದಲ್ಲಿ ವಿವರಿಸಲ್ಪಟ್ಟಿವೆ.

ನಾರದೇನ ತು ಸಂವಾದೋ ವಸುದೇವಸ್ಯ ಕೀರ್ತಿತಃ |
ಯದೋಶ್ಚ ದತ್ತಾತ್ರೇಯೇಣ ಶ್ರೀಕೃಷ್ಣೇನೋದ್ಧವಸ್ಯ ಚ || ೧೮ ||

ಯಾದವಾನಾಂ ಮಿಥೋಂತಶ್ಚ ಮುಕ್ತಾವೇಕಾದಶಃ ಸ್ಮೃತಃ |
ಭವಿಷ್ಯಕಲಿನಿರ್ದೇಶೋ ಮೋಕ್ಷೋ ರಾಜ್ಞಃ ಪರೀಕ್ಷಿತಃ || ೧೯ ||

ವೇದಶಾಖಾಪ್ರಣಯನಂ ಮಾರ್ಕಂಡೇಯತಪಃ ಕ್ರಿಯಾ |
ಸೌರೀ ವಿಭೂತಿರುದಿತಾ ಸಾತ್ವತೀ ಚ ತತಃ ಪರಂ || ೨೦ ||

ಪುರಾಣಸಂಖ್ಯಾಕಥನಮಾಶ್ರಯೋ ದ್ವಾದಶೋ ಹ್ಯಯಂ |
ಇತ್ಯೇವಂ ಕಥಿತಂ ವತ್ಸ ಶ್ರೀಮದ್ಭಾಗವತಂ ತವ || ೨೧ ||

ವಕ್ತುಃ ಶ್ರೋತುಶ್ಚೋಪದೇಷ್ಟುರನುಮೋದಿತುರೇವ ಚ |
ಸಾಹಾಯ್ಯಕರ್ತುರ್ಗದಿತಂ ಭಕ್ತಿಭುಕ್ತಿವಿಮುಕ್ತಿದಂ || ೨೨ ||

---

## ಏಕಾದಶಸ್ಕಂಧ

೧೮-೨೧. ವಸುದೇವನಾರದ ಸಂವಾದ, ಯದು ದತ್ತಾತ್ರೇಯ ಸಂವಾದ, ಶ್ರೀಕೃಷ್ಣೋದ್ಧವ ಸಂವಾದ, ನಿರ್ಯಾಣಪ್ರಕರಣದಲ್ಲಿ ಯಾದವರ ಪರಸ್ಪರ ಸಂಹಾರ ಇವು ಹನ್ನೊಂದನೆಯ ಸ್ಕಂಧದಲ್ಲಿ ವಿವರಿಸಲ್ಪಟ್ಟಿವೆ.

## ದ್ವಾದಶಸ್ಕಂಧ

ಕಲಿಯುಗ ಭವಿಷ್ಯ ಕೀರ್ತನೆ, ಪರೀಕ್ಷಿದ್ರಾಜಮೋಕ್ಷ, ವೇದಶಾಖಾ ರಚನೆ, ಮಾರ್ಕಂಡೇಯ ತಪಸ್ಸು, ದ್ವಾದಶಾದಿತ್ಯರ ಗತಿ, ಪುರಾಣ ಸಂಖ್ಯಾ ವರ್ಣನೆ ಇವು ಹನ್ನೆರಡನೆಯ ಸ್ಕಂಧದಲ್ಲಿ ಉಕ್ತವಾಗಿವೆ.

ವತ್ಸ ! ಈ ರೀತಿಯಾಗಿ ನಿನಗೆ ಭಾಗವತ ವಿಷಯಗಳನ್ನು ಹೇಳಿರುವೆನು.

೨೨. ಈ ಭಾಗವತವನ್ನು ಹೇಳುವವನು, ಕೇಳುವವನು, ಉಪದೇಶಿಸುವವನು, ಅನುಮೋದಿಸುವವನು, ಸಹಾಯಮಾಡುವವನು ಇವರೆಲ್ಲರಿಗೂ ಇಹದಲ್ಲಿ ನಾನಾಭೋಗಗಳು, ಪರದಲ್ಲಿ ಮುಕ್ತಿಯೂ ಉಂಟಾಗುವುವು.

ಪ್ರೋಷ್ಠಪದ್ಯಾಂ ಪೂರ್ಣಿಮಾಯಾಂ ಹೇಮಸಿಂಹಸಮನ್ವಿತಂ ।
ದೇಯಂ ಭಾಗವತಾಯೇದಂ ದ್ವಿಜಾಯ ಪ್ರೀತಿಪೂರ್ವಕಂ ॥ ೨೩ ॥

ಸಂಪೂಜ್ಯ ವಸ್ತ್ರಹೇಮಾದ್ಯೈರ್ಭಗವದ್ಭಕ್ತಿಮಿಚ್ಛತಾ ।
ಯೋಽಪ್ಯನುಕ್ರಮಣೀಮೇತಾಂ ಶ್ರಾವಯೇಚ್ಛೃಣುಯಾತ್ತಥಾ ।
ಸ ಪುರಾಣಶ್ರವಣಜಂ ಪ್ರಾಪ್ನೋತಿ ಫಲಮುತ್ತಮಂ ॥ ೨೪ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಚತುರ್ಥಪಾದೇ ಶ್ರೀಮದ್ಭಾಗವತಾನುಕ್ರಮಣೀನಿರೂಪಣಂ ನಾಮ
ಷಣ್ಣವತಿತಮೋಽಧ್ಯಾಯಃ

---

೨೩-೨೪. ಭಗವದ್ಭಕ್ತಿಯನ್ನು ಬಯಸುವವನು ಭಾದ್ರಪದ ಶುಕ್ಲ ಪೂರ್ಣಿಮೆಯ ದಿನದಲ್ಲಿ ವಸ್ತ್ರ ಹಿರಣ್ಯಾದಿಗಳಿಂದ ಭಗವದ್ಭಕ್ತನಾದ ಬ್ರಾಹ್ಮಣನನ್ನು ಪೂಜಿಸಿ ಅವನಿಗೆ ಈ ಭಾಗವತ ಪುಸ್ತಕವನ್ನು ಬಂಗಾರದ ಸಹಿತವಾಗಿ ಭಕ್ತಿಯಿಂದ ದಾನಮಾಡಬೇಕು

ಈ ವಿಷಯಾನುಕ್ರಮಣಿಕೆಯನ್ನು ಸ್ವತಃ ಶ್ರವಣಮಾಡುವವನು, ಇತರರಿಗೆ ಶ್ರವಣ ಮಾಡಿಸುವವನೂ ಸಹ ಸಂಪೂರ್ಣಪುರಾಣದಿಂದಾಗುವ ಫಲವನ್ನು ಪೂರ್ತಿಯಾಗಿ ಪಡೆಯುವನು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ನಾಲ್ಕನೆಯ ಪಾದದಲ್ಲಿ ಶ್ರೀಮದ್ಭಾಗವತವಿಷಯಾನುಕ್ರಮವರ್ಣನೆಯೆಂಬ ತೊಂಬತ್ತಾರನೆಯ ಅಧ್ಯಾಯವು ಮುಗಿದುದು.



# ಸಪ್ತನವತಿತಮೋಽಧ್ಯಾಯಃ

## ಶ್ರೀಬ್ರಹ್ಮೋವಾಚ

ಶೃಣು ವಿಪ್ರ ಪ್ರವಕ್ಷ್ಯಾಮಿ ಪುರಾಣಂ ನಾರದೀಯಕಂ ।
ಪಂಚವಿಂಶತಿಸಾಹಸ್ರಂ ಬೃಹತ್ಕಲ್ಪಕಥಾಶ್ರಯಂ ॥ ೧ ॥

ಸೂತಶೌನಕಸಂವಾದಃ ಸೃಷ್ಟಿಸಂಕ್ಷೇಪವರ್ಣನಂ ।
ನಾನಾಧರ್ಮಕಥಾಃ ಪುಣ್ಯಾಃ ಪ್ರವೃತ್ತೇ ಸಮುದಾಹೃತಾಃ ॥ ೨ ॥

ಪ್ರಾಗ್ಭಾಗೇ ಪ್ರಥಮೇ ಪಾದೇ ಸನಕೇನ ಮಹಾತ್ಮನಾ ।
ದ್ವಿತೀಯೇ ಮೋಕ್ಷಧರ್ಮಾಖ್ಯೇ ಮೋಕ್ಷೋಪಾಯ ನಿರೂಪಣಂ ॥ ೩ ॥

---

## ತೊಂಬತ್ತೇಳನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು—ಬ್ರಾಹ್ಮಣನಾದ ಮರೀಚಿಯೇ! ಬೃಹತ್ಕಲ್ಪಕಥೆಯನ್ನು ವಿವರಿಸುವಂತಹ ಇಪ್ಪತ್ತೈದುಸಾವಿರಗ್ರಂಥಗಳುಳ್ಳ ನಾರದೀಯ ಪುರಾಣದ ವಿಷಯವನ್ನು ಹೇಳುವೆನು ; ಕೇಳು.

೨-೪. ಈ ಪುರಾಣದಲ್ಲಿ ಪೂರ್ವಭಾಗ, ಉತ್ತರಭಾಗಗಳೆಂದು ಎರಡು ಭಾಗಗಳಿವೆ. ಪೂರ್ವಭಾಗದಲ್ಲಿ ನಾಲ್ಕುಪಾದಗಳಿವೆ.

### ಪ್ರಥಮಪಾದ

ಸೂತ ಶೌನಕ ಸಂವಾದ, ಸೃಷ್ಟಿ ಸಂಕ್ಷೇಪ ವರ್ಣನೆ, ನಾನಾ ಧರ್ಮ ಕಥೆಗಳು ಇವು ಮೊದಲನೆಯ ಪಾದದಲ್ಲಿ ಸನಕರಿಂದ ನಾರದರಿಗೆ ಉಪದಿಷ್ಟವಾಗಿವೆ.

**ವೇದಾಂಗಾನಾಂ ಚ ಕಥನಂ ಶುಕೋತ್ಪತ್ತಿಶ್ಚ ವಿಸ್ತರಾತ್ ।**
**ಸನಂದೇನ ಗದಿತಾ ನಾರದಾಯ ಮಹಾತ್ಮನೇ ॥ ೪ ॥**

**ಮಹಾತಂತ್ರೇ ಸಮುದ್ದಿಷ್ಟಂ ಪಶುಪಾಶವಿಮೋಕ್ಷಣಂ ।**
**ಮಂತ್ರಾಣಾಂ ಶೋಧನಂ ದೀಕ್ಷಾ ಮಂತ್ರೋದ್ಧಾರಶ್ಚ ಪೂಜನಂ ॥ ೫ ॥**

**ಪ್ರಯೋಗಾಃ ಕವಚಂ ನಾಮಸಹಸ್ರಂ ಸ್ತೋತ್ರಮೇವ ಚ ।**
**ಗಣೇಶಸೂರ್ಯವಿಷ್ಣೂನಾಂ ಶಿವಶಕ್ತ್ಯೋರನುಕ್ರಮಾತ್ ॥ ೬ ॥**

**ಸನತ್ಕುಮಾರಮುನಿನಾ ನಾರದಾಯ ತೃತೀಯಕೇ ।**
**ಪುರಾಣಲಕ್ಷಣಂ ಚೈವ ಪ್ರಮಾಣಂ ದಾನಮೇವ ಚ ॥ ೭ ॥**

---

### ದ್ವಿತೀಯಪಾದ (ಮೋಕ್ಷಧರ್ಮ)

ಮೋಕ್ಷೋಪಾಯ, ವೇದಾಂಗಗಳು, ಶುಕೋತ್ಪತ್ತಿ ಇವು ವಿಸ್ತಾರವಾಗಿ ನಾರದನಿಗೆ ಸನಂದನನಿಂದ ಉಪದೇಶಿಸಲ್ಪಟ್ಟವೆ.

### ತೃತೀಯಪಾದ (ಮಹಾತಂತ್ರ)

೫-೯. ಬಂಧಮೋಕ್ಷ, ಮಂತ್ರಶೋಧನೆ, ದೀಕ್ಷೆ, ಮಂತ್ರೋದ್ಧಾರ, ಪೂಜೆ, ನಾನಾವಿಧಪ್ರಯೋಗಗಳು, ಕವಚ, ಸಹಸ್ರನಾಮ, ಸ್ತೋತ್ರ, ಕ್ರಮವಾಗಿ ಗಣೇಶ, ಸೂರ್ಯ, ವಿಷ್ಣು, ಶಿವ, ಶಕ್ತಿ ಮುಂತಾದ ದೇವತೆಗಳ ಮಂತ್ರಗಳು ಇವು ಸಪರಿಕರವಾಗಿ ಸನತ್ಕುಮಾರಮುನಿಯಿಂದ ನಾರದನಿಗೆ ಮೂರನೆಯ ಪಾದದಲ್ಲಿ ಉಪದೇಶಿಸಲ್ಪಟ್ಟವೆ.

### ಚತುರ್ಥಪಾದ

ಪುರಾಣಗಳ ವಿಷಯಸಂಗ್ರಹ, ಪರಿಮಾಣ, ದಾನ, ಪ್ರತ್ಯೇಕವಾಗಿ ಅದರ ಕಾಲ, ಚೈತ್ರಾದಿ ಸಕಲಮಾಸಗಳಲ್ಲಿಯೂ ಪಾಡ್ಯ ಮುಂತಾದ ಆಯಾ ತಿಥಿಗಳಲ್ಲಿ

ಪೃಥಕ್ಪೃಥಕ್ ಸಮುದ್ದಿಷ್ಟಂ ದಾನಕಾಲಪುರಸ್ಸರಂ ।
ಚೈತ್ರಾದಿಸರ್ವಮಾಸೇಷು ತಿಥೀನಾಂ ಚ ಪೃಥಕ್ಪೃಥಕ್ ॥ ೮ ॥

ಪ್ರೋಕ್ತಂ ಪ್ರತಿಪದಾದೀನಾಂ ವ್ರತಂ ಸರ್ವಾಘನಾಶನಂ ।
ಸನಾತನೇನ ಮುನಿನಾ ನಾರದಾಯ ಚತುರ್ಥಕೇ ॥ ೯ ॥

ಪೂರ್ವಭಾಗೋಽಯಮುದಿತೋ ಬೃಹದಾಖ್ಯಾನಸಂಜ್ಞಿತಃ ।
ಅಸ್ಯೋತ್ತರೇ ವಿಭಾಗೇ ತು ಪ್ರಶ್ನ ಏಕಾದಶೀವ್ರತೇ ॥ ೧೦ ॥

ವಸಿಷ್ಠೇನಾಥ ಸಂವಾದೋ ಮಾಂಧಾತುಃ ಪರಿಕೀರ್ತಿತಃ ।
ರುಕ್ಮಾಂಗದಕಥಾ ಪುಣ್ಯಾ ಮೋಹಿನ್ಯುತ್ಪತ್ತಿಕರ್ಮ ಚ ॥ ೧೧ ॥

ವಸುಶಾಪಶ್ಚ ಮೋಹಿನ್ಯೈ ಪಶ್ಚಾದುದ್ಧರಣಕ್ರಿಯಾ ।
ಗಂಗಾಕಥಾ ಪುಣ್ಯತಮಾ ಗಯಾಯಾತ್ರಾನುಕೀರ್ತನಂ ॥ ೧೨ ॥

ಕಾಶ್ಯಾ ಮಾಹಾತ್ಮ್ಯಮತುಲಂ ಪುರುಷೋತ್ತಮ ವರ್ಣನಂ ।
ಯಾತ್ರಾವಿಧಾನಂ ಕ್ಷೇತ್ರಸ್ಯ ಬಹ್ವಾಖ್ಯಾನಸಮನ್ವಿತಂ ॥ ೧೩ ॥

---

ಮಾಡಬೇಕಾದ ಸಕಲ ಪಾಪಪರಿಹಾರಕವಾದ ವ್ರತಗಳು ಇವು ನಾಲ್ಕನೆಯ ಪಾದದಲ್ಲಿ ಸನಾತನ ಮುನಿಯಿಂದ ನಾರದನಿಗೆ ಉಪದೇಶಿಸಲ್ಪಟ್ಟವೆ.

ಈ ನಾಲ್ಕು ಪಾದಗಳಿಗೆ ಪೂರ್ವಭಾಗವೆಂದು ಹೆಸರು. ಇದಕ್ಕೆ ಬೃಹದುಪಾಖ್ಯಾನವೆಂದು ಸಂಜ್ಞೆಯು.

## ಉತ್ತರಭಾಗ

೧೦-೧೮. ಏಕಾದಶೀ ವಿಷಯದಲ್ಲಿ ಮಾಂಧಾತರಾಜನ ಪ್ರಶ್ನೆ, ವಸಿಷ್ಠರ ಉತ್ತರ, ರುಕ್ಮಾಂಗದ ಕಥೆ, ಮೋಹಿನಿಯ ಉತ್ಪತ್ತಿ, ವ್ಯಾಪಾರ, ಮೋಹಿನಿಗೆ ವಸುಶಾಪ, ಅದರ ಉದ್ಧಾರ, ಗಂಗೆಯ ಕಥೆ, ಗಯಾಯಾತ್ರೆ, ಕಾಶೀಮಾಹಾತ್ಮ್ಯ, ಪುರುಷೋತ್ತಮವರ್ಣನೆ, ಕ್ಷೇತ್ರಯಾತ್ರಾವಿಧಾನ, ಅದರಲ್ಲಿ

ಪ್ರಯಾಗಸ್ಯಾಥ ಮಾಹಾತ್ಮ್ಯಂ ಕುರುಕ್ಷೇತ್ರಸ್ಯ ತತ್ಪರಂ ।
ಹರಿದ್ವಾರಸ್ಯ ಚಾಖ್ಯಾನಂ ಕಾಮೋದಾಖ್ಯಾನಕಂ ತಥಾ ॥ ೧೪ ॥

ಬದರೀತೀರ್ಥಮಾಹಾತ್ಮ್ಯಂ ಕಾಮಾಕ್ಷಾಯಾಸ್ತಥೈವ ಚ ।
ಪ್ರಭಾಸಸ್ಯ ಚ ಮಾಹಾತ್ಮ್ಯಂ ಪುಷ್ಕರಾಖ್ಯಾನಕಂ ತತಃ ॥ ೧೫ ॥

ಗೌತಮಾಖ್ಯಾನಕಂ ಪಶ್ಚಾದ್ವೇದಪಾದಸ್ತವಸ್ತತಃ ।
ಗೋಕರ್ಣಕ್ಷೇತ್ರಮಾಹಾತ್ಮ್ಯಂ ಲಕ್ಷ್ಮಣಾಖ್ಯಾನಕಂ ತಥಾ ॥ ೧೬ ॥

ಸೇತುಮಾಹಾತ್ಮ್ಯಕಥನಂ ನರ್ಮದಾತೀರ್ಥವರ್ಣನಂ ।
ಅವಂತ್ಯಾಶ್ಚೈವ ಮಾಹಾತ್ಮ್ಯಂ ಮಥುರಾಯಾಸ್ತತಃ ಪರಂ ॥ ೧೭ ॥

ವೃಂದಾವನಸ್ಯ ಮಹಿಮಾ ಪಶ್ಚೋರ್ಬ್ರಹ್ಮಾಂತಿಕೇ ಗತಿಃ ।
ಮೋಹಿನೀಚರಿತಂ ಪಶ್ಚಾದೇವಂ ವೈ ನಾರದೀಯಕಂ ॥ ೧೮ ॥

ಯಃ ಶೃಣೋತಿ ನರೋ ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ।
ಸ ಯಾತಿ ಬ್ರಹ್ಮಣೋ ಧಾಮ ನಾತ್ರ ಕಾರ್ಯಾ ವಿಚಾರಣಾ ॥ ೧೯ ॥

---

ಬಹೂಪಾಖ್ಯಾನಗಳು, ಪ್ರಯಾಗ, ಕುರುಕ್ಷೇತ್ರ, ಹರಿದ್ವಾರಗಳ ಮಾಹಾತ್ಮ್ಯಗಳು, ಕಾಮೋದಕಿಯ ಉಪಾಖ್ಯಾನ, ಬದರೀತೀರ್ಥಮಹಿಮೆ, ಕಾಮಾಕ್ಷೀ ಮಾಹಾತ್ಮ್ಯ, ಪ್ರಭಾಸಕ್ಷೇತ್ರಮಾಹಾತ್ಮ್ಯ, ಪುಷ್ಕರಾಖ್ಯಾನ, ಗೌತಮಾಖ್ಯಾನ, ವೇದಪಾದಸ್ತೋತ್ರ, ಗೋಕರ್ಣಕ್ಷೇತ್ರಮಾಹಾತ್ಮ್ಯ, ಲಕ್ಷ್ಮಣಾಖ್ಯಾನ, ಸೇತುಮಾಹಾತ್ಮ್ಯ, ನರ್ಮದಾತೀರ್ಥವರ್ಣನೆ, ಅವಂತೀ, ಮಧುರೆ, ವೃಂದಾವನ, ಇವುಗಳ ಮಾಹಾತ್ಮ್ಯ, ವಸುವು ಬ್ರಹ್ಮಸಮೀಪಕ್ಕೆ ಹೋದುದು, ಮೋಹಿನೀ ಚರಿತ್ರೆ ಇವು ಉತ್ತರಭಾಗದಲ್ಲಿ ಉಕ್ತವಾಗಿವೆ.

೧೯. ಈ ವಿಷಯಗಳನ್ನೊಳಗೊಂಡಿರುವ ನಾರದೀಯಪುರಾಣವನ್ನು ಭಕ್ತಿಯಿಂದ ಶ್ರವಣ ಮಾಡುವವನು ಮತ್ತು ಇತರರಿಗೆ ಶ್ರವಣ ಮಾಡಿಸುವವನೂ ಸಹ, ಪರಬ್ರಹ್ಮನ ಸ್ಥಾನಕ್ಕೆ ಹೋಗುವನು. ಸಂದೇಹವಿಲ್ಲ.

**ಯಸ್ತ್ವೇತದಿಷುಪೂರ್ಣಾಯಾಂ ಧೇನೂನಾಂ ಸಪ್ತಕಾನ್ವಿತಂ ।**
**ಪ್ರದದ್ಯಾದ್ದ್ವಿಜವರ್ಯಾಯ ಸ ಲಭೇನ್ಮೋಕ್ಷಮೇವ ಚ ॥ ೨೦ ॥**

**ಯಶ್ಚಾನುಕ್ರಮಣೀಮೇತಾಂ ನಾರದೀಯಸ್ಯ ವರ್ಣಯೇತ್ ।**
**ಶೃಣುಯಾದ್ವೈಕಚಿತ್ತೇನ ಸೋಽಪಿ ಸ್ವರ್ಗಗತಿಂ ಲಭೇತ್ ॥ ೨೧ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ನಾರದೀಯಪುರಾಣಾನುಕ್ರಮಣೀಕಥನಂ ನಾಮ ಸಪ್ತನವತಿತಮೋಽಧ್ಯಾಯಃ**

---

೨೦. ಆಶ್ವಯುಜಮಾಸದ ಪೂರ್ಣಿಮೆಯ ದಿನದಲ್ಲಿ ಏಳು ಗೋವುಗಳ ಸಹಿತವಾಗಿ ಈ ಪುರಾಣವನ್ನು ಬ್ರಾಹ್ಮಣಶ್ರೇಷ್ಠನಿಗೆ ದಾನಮಾಡುವವನು ಮೋಕ್ಷವನ್ನು ಪಡೆಯುವನು.

೨೧. ನಾರದೀಯಪುರಾಣದ ಈ ವಿಷಯಾನುಕ್ರಮಣಿಕೆಯನ್ನು ಶ್ರವಣಪಠನ ಮಾಡುವವನೂ ಸಹ ಸ್ವರ್ಗಲೋಕಕ್ಕೆ ಹೋಗುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ಚತುರ್ಥಪಾದದಲ್ಲಿ ನಾರದೀಯಪುರಾಣವಿಷಯಾನು ಕ್ರಮಣಿಕೆಯ ವರ್ಣನೆಯೆಂಬ ತೊಂಬತ್ತೇಳನೆಯ ಅಧ್ಯಾಯವು ಮುಗಿದುದು.

# ಅಷ್ಟನವತಿತಮೋಽಧ್ಯಾಯಃ

## ಶ್ರೀಬ್ರಹ್ಮೋವಾಚ

ಅಥ ತೇ ಸಂಪ್ರವಕ್ಷ್ಯಾಮಿ ಮಾರ್ಕಂಡೇಯಾಭಿಧಂ ಮುನೇ ।
ಪುರಾಣಂ ಸುಮಹತ್ಪುಣ್ಯಂ ಪಠತಾಂ ಶೃಣ್ವತಾಂ ಸದಾ ॥ ೧ ॥

ಯತ್ರಾಧಿಕೃತ್ಯ ಶಕುನೀನ್ಸರ್ವಧರ್ಮನಿರೂಪಣಂ ।
ಮಾರ್ಕಂಡೇಯಪುರಾಣಂ ತನ್ನವಸಾಹಸ್ರಮೀರಿತಂ ॥ ೨ ॥

ಮಾರ್ಕಂಡೇಯಮುನೇಃ ಪ್ರಶ್ನೋ ಜೈಮಿನೇಃ ಪ್ರಾಕ್ಸಮೀರಿತಃ ।
ಪಕ್ಷಿಣಾಂ ಧರ್ಮಸಂಜ್ಞಾನಾಂ ತತೋ ಜನ್ಮನಿರೂಪಣಂ ॥ ೩ ॥

ಪೂರ್ವಜನ್ಮಕಥಾ ಚೈಷಾಂ ವಿಕ್ರಿಯಾ ಚ ದಿವಸ್ಪತೇಃ ।
ತೀರ್ಥಯಾತ್ರಾ ಬಲಸ್ಯಾಥ ದ್ರೌಪದೇಯಕಥಾನಕಂ ॥ ೪ ॥

---

## ತೊಂಬತ್ತೆಂಟನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು—ಮುನಿಯೇ! ಯಾವಾಗಲೂ ಶ್ರವಣ ಪಠನೆಮಾಡುವವರಿಗೆ ಮಹಾಪುಣ್ಯದಾಯಕವಾದ ಮಾರ್ಕಂಡೇಯ ಪುರಾಣ ವಿಷಯವನ್ನು ನಿನಗೆ ಈಗ ಹೇಳುವೆನು.

೨. ಈ ಪುರಾಣದಲ್ಲಿ ಶಕುನಿಗಳನ್ನು ಕುರಿತು ಸಕಲ ಧರ್ಮವೂ ನಿರೂಪಿತವಾಗಿದೆ. ಇದರಲ್ಲಿ ಒಂಬತ್ತುಸಾವಿರ ಗ್ರಂಥಗಳಿವೆ.

೩-೧೦. ಈ ಪುರಾಣವು ಜೈಮಿನಿಮಾರ್ಕಂಡೇಯರ ಪ್ರಶ್ನೋತ್ತರ ರೂಪವಾಗಿದೆ.

ಹರಿಶ್ಚಂದ್ರಕಥಾ ಪುಣ್ಯಾ ಯುದ್ಧಮಾಡೀವಕಾಭಿಧಂ ।
ಪಿತಾಪುತ್ರಸಮಾಖ್ಯಾನಂ ದತ್ತಾತ್ರೇಯಕಥಾ ತತಃ ॥ ೫ ॥

ಹೈಹಯಸ್ಯಾಥ ಚರಿತಂ ಮಹಾಖ್ಯಾನಸಮನ್ವಿತಂ ।
ಮದಾಲಸಾಕಥಾ ಪ್ರೋಕ್ತಾ ಹ್ಯಲರ್ಕಚರಿತಾನ್ವಿತಾ ॥ ೬ ॥

ಸೃಷ್ಟಿಸಂಕೀರ್ತನಂ ಪುಣ್ಯಂ ನವಧಾ ಪರಿಕೀರ್ತಿತಂ ।
ಕಲ್ಪಾಂತಕಾಲನಿರ್ದೇಶೋ ಯಕ್ಷಸೃಷ್ಟಿನಿರೂಪಣಂ ॥ ೭ ॥

ರುದ್ರಾದಿಸೃಷ್ಟಿರಪ್ಯುಕ್ತಾ ದ್ವೀಪಚರ್ಯಾನುಕೀರ್ತನಂ ।
ಮನೂನಾಂ ಚ ಕಥಾ ನಾನಾ ಕೀರ್ತಿತಾಃ ಪಾಪಹಾರಿಕಾಃ ॥ ೮ ॥

ತಾಸು ದುರ್ಗಾಕಥಾತ್ಯಂತಂ ಪುಣ್ಯದಾ ಚಾಷ್ಟಮೇಂತರೇ ।
ತತ್ಪಶ್ಚಾತ್ಪ್ರಣವೋತ್ಪತ್ತಿಸ್ತ್ರಯೀತೇಜಃ ಸಮುದ್ಭವಃ ॥ ೯ ॥

ಮಾರ್ತಂಡಸ್ಯ ಚ ಜನ್ಮಾಖ್ಯಾ ತನ್ಮಾಹಾತ್ಮ್ಯಸಮನ್ವಿತಾ ।
ವೈವಸ್ವತಾನ್ವಯಶ್ಚಾಪಿ ವತ್ಸಪ್ರೀಶ್ಚರಿತಂ ತತಃ ॥ ೧೦ ॥

---

## ಮಾರ್ಕಂಡೇಯ ಪುರಾಣ ವಿಷಯ

ಧರ್ಮವೆಂಬ ಪಕ್ಷಿಗಳ ಜನನ, ಇವುಗಳ ಪೂರ್ವಜನ್ಮಕಥೆ, ದಿವಸ್ಪತಿಯ ವಿಕ್ರಿಯಾ, ಬಲರಾಮನ ತೀರ್ಥಯಾತ್ರೆ, ದ್ರೌಪದೇಯಕಥೆ, ಹರಿಶ್ಚಂದ್ರಕಥೆ, ಆಡೀವಕವೆಂಬ ಯುದ್ಧ, ಪಿತಾಪುತ್ರೋಪಾಖ್ಯಾನ, ದತ್ತಾತ್ರೇಯ ಕಥೆ, ಹೈಹಯಕಥೆ, ಮಹಾಖ್ಯಾನ, ಮದಾಲಸೋಪಾಖ್ಯಾನ, ಅಲರ್ಕಚರಿತ್ರೆ, ನವವಿಧಸೃಷ್ಟಿ, ಕಲ್ಪಾಂತಕಾಲನಿರ್ದೇಶ, ಯಕ್ಷಸೃಷ್ಟಿ, ರುದ್ರಾದಿಸೃಷ್ಟಿ, ದ್ವೀಪಚರ್ಯಾನುಕೀರ್ತನೆ, ಮನುಗಳ ನಾನಾಕಥೆಗಳು, ದುರ್ಗಾಕಥೆ, ಪ್ರಣವೋತ್ಪತ್ತಿ, ತ್ರಯೀತೇಜೋತ್ಪತ್ತಿ, ಮಾರ್ತಾಂಡಜನ್ಮ, ಅವನ ಮಾಹಾತ್ಮ್ಯ, ವೈವಸ್ವತವಂಶ, ವತ್ಸಪ್ರಿಯಚರಿತ್ರೆ.

ಖನಿತ್ರಸ್ಯ ತತಃ ಪ್ರೋಕ್ತಾ ಕಥಾ ಪುಣ್ಯಾ ಮಹಾತ್ಮನಃ ।
ಅವಿಕ್ಷಿಚ್ಚರಿತಂ ಚೈವ ಕಿಮಿಚ್ಛವ್ರತಕೀರ್ತನಂ ॥ ೧೧ ॥

ನರಿಷ್ಯಂತಸ್ಯ ಚರಿತಂ ಇಕ್ಷ್ವಾಕುಚರಿತಂ ತತಃ ।
ನಲಸ್ಯ ಚರಿತಂ ಪಶ್ಚಾದ್ರಾಮಚಂದ್ರಸ್ಯ ಸತ್ಕಥಾ ॥ ೧೨ ॥

ಕುಶವಂಶಸಮಾಖ್ಯಾನಂ ಸೋಮವಂಶಾನುಕೀರ್ತನಂ ।
ಪುರೂರವಃ ಕಥಾ ಪುಣ್ಯಾ ನಹುಷಸ್ಯ ಕಥಾದ್ಭುತಾ ॥ ೧೩ ॥

ಯಯಾತಿಚರಿತಂ ಪುಣ್ಯಂ ಯದುವಂಶಾನುಕೀರ್ತನಂ ।
ಶ್ರೀಕೃಷ್ಣಬಾಲಚರಿತಂ ಮಾಥುರಂ ಚರಿತಂ ತತಃ ॥ ೧೪ ॥

ದ್ವಾರಕಾಚರಿತಂ ಚಾಥ ಕಥಾ ಸರ್ವಾವತಾರಜಾ ।
ತತಃ ಸಾಂಖ್ಯಸಮುದ್ದೇಶಃ ಪ್ರಪಂಚಾಸತ್ವಕೀರ್ತನಂ ॥ ೧೫ ॥

ಮಾರ್ಕಂಡೇಯಸ್ಯ ಚರಿತಂ ಪುರಾಣಶ್ರವಣೇ ಫಲಂ ।
ಯಃ ಶೃಣೋತಿ ನರೋ ಭಕ್ತ್ಯಾ ಪುರಾಣಮಿದಮಾದರಾತ್ ॥ ೧೬ ॥

---

೧೧-೧೭. ಅನಂತರ ಖನಿತ್ರಮಹಾತ್ಮನಕಥೆ, ಅವಿಕ್ಷಿಚ್ಚರಿತ್ರೆ, ನರಿಷ್ಯಂತಚರಿತ್ರೆ, ಇಕ್ಷ್ವಾಕುಚರಿತ್ರೆ, ನಳಚರಿತ್ರೆ, ರಾಮಚಂದ್ರಕಥೆ, ಕುರುವಂಶಸಮಾಖ್ಯಾನ, ಚಂದ್ರವಂಶಾನುಕೀರ್ತನೆ, ಪುರೂರವಕಥೆ, ಅದ್ಭುತವಾದ ನಹುಷಕಥೆ, ಪುಣ್ಯಪ್ರದ ಯಯಾತಿಚರಿತ್ರೆ, ಯದುವಂಶಕೀರ್ತನೆ, ಶ್ರೀಕೃಷ್ಣಬಾಲಚರಿತ್ರೆ, ಶ್ರೀಕೃಷ್ಣನು ಮಧುರೆ ದ್ವಾರಕೆಗಳಲ್ಲಿದ್ದಾಗ ನಡೆಸಿದ ವ್ಯಾಪಾರ, ಸರ್ವಾವತಾರಕಥೆ, ಸಾಂಖ್ಯವಿಚಾರ, ಪ್ರಪಂಚಸ್ವರೂಪ, ಮಾರ್ಕಂಡೇಯಚರಿತ್ರೆ, ಪುರಾಣಶ್ರವಣಫಲ ಇವು ಈ ಪುರಾಣದಲ್ಲಿ ಅಡಕವಾಗಿರುವ ವಿಷಯಗಳು.

ಮಾರ್ಕಂಡೇಯೋಭಿಧಂ ವತ್ಸ ಸ ಲಭೇತ್ಪರಮಾಂ ಗತಿಂ ।
ಯಸ್ತು ವ್ಯಾಕುರುತೇ ಚೈತಚ್ಛೈವಂ ಸ ಲಭತೇ ಪದಂ ॥ ೧೭ ॥

ತತ್ಪ್ರಯಚ್ಛೇಲ್ಲಿಖಿತ್ವಾ ಯಃ ಸೌವರ್ಣಕರಿಸಂಯುತಂ ।
ಕಾರ್ತಿಕ್ಯಾಂ ದ್ವಿಜವರ್ಯಾಯ ಸ ಲಭೇದ್ಬ್ರಹ್ಮಣಃ ಪದಂ ॥ ೧೮ ॥

ಶೃಣೋತಿ ಶ್ರಾವಯೇದ್ವಾಪಿ ಯಶ್ಚಾನುಕ್ರಮಣೀಮಿಮಾಂ ।
ಮಾರ್ಕಂಡೇಯಪುರಾಣಸ್ಯ ಸ ಲಭೇದ್ವಾಂಛಿತಂ ಫಲಂ ॥ ೧೯ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ಮಾರ್ಕಂಡೇಯ ಪುರಾಣಾನುಕ್ರಮಣೀನಿರೂಪಣಂ ನಾಮಾಷ್ಟನವತಿತಮೋಽಧ್ಯಾಯಃ

---

ಈ ಪುರಾಣವನ್ನು ಭಕ್ತಿಯಿಂದ ಶ್ರವಣಮಾಡುವವನು ಪರಮಪದವನ್ನು ಹೊಂದುತ್ತಾನೆ. ಇದನ್ನು ವ್ಯಾಖ್ಯಾನ ಮಾಡುವವನು ಶೈವಪದವನ್ನು ಪಡೆಯುತ್ತಾನೆ.

೧೮. ಈ ಪುರಾಣವನ್ನು ಬರೆದು ಬಂಗಾರದ ಆನೆಯಸಹಿತವಾಗಿ ಕಾರ್ತಿಕ ಶುದ್ಧ ಪೂರ್ಣಿಮೆಯ ದಿವಸ ದ್ವಿಜವರ್ಯನಿಗೆ ದಾನಮಾಡುವವನು ಬ್ರಹ್ಮಪದವನ್ನು ಹೊಂದುವನು.

೧೯. ಮಾರ್ಕಂಡೇಯ ಪುರಾಣದ ಈ ವಿಷಯಾನುಕ್ರಮಣಿಕೆಯನ್ನು ಶ್ರವಣ ಮಾಡುವವನು ಅಥವಾ ಮಾಡಿಸುವವನು ಅಪೇಕ್ಷಿಸಿದ ಫಲವನ್ನು ಹೊಂದುತ್ತಾನೆ.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ಮಾರ್ಕಂಡೇಯಪುರಾಣದ ವಿಷಯಾನು ಕ್ರಮಣಿಕೆಯ ನಿರೂಪಣವೆಂಬ ತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು.

# ಏಕೋನಶತತಮೋಽಧ್ಯಾಯಃ

## ಶ್ರೀಬ್ರಹ್ಮೋವಾಚ

ಅಥಾತಃ ಸಂಪ್ರವಕ್ಷ್ಯಾಮಿ ತವಾಗ್ನೇಯಪುರಾಣಕಂ ।
ಈಶಾನಕಲ್ಪವೃತ್ತಾಂತಂ ವಸಿಷ್ಠಾಯಾನಲೋಽಬ್ರವೀತ್ ॥ ೧ ॥

ತತ್ಪಂಚದಶಸಾಹಸ್ರಂ ನಾನಾಚರಿತಮದ್ಭುತಂ ।
ಪಠತಾಂ ಶೃಣ್ವತಾಂ ಚೈವ ಸರ್ವಪಾಪಹರಂ ನೃಣಾಂ ॥ ೨ ॥

ಪ್ರಶ್ನಃ ಪೂರ್ವಪುರಾಣಸ್ಯ ಕಥಾ ಸರ್ವಾವತಾರಜಾ ।
ಸೃಷ್ಟಿಪ್ರಕರಣಂ ಚಾಥ ವಿಷ್ಣುಪೂಜಾದಿಕಂ ತತಃ ॥ ೩ ॥

ಅಗ್ನಿಕಾರ್ಯಂ ತತಃ ಪಶ್ಚಾನ್ಮಂತ್ರಮುದ್ರಾದಿ ಲಕ್ಷಣಂ ।
ಸರ್ವದೀಕ್ಷಾವಿಧಾನಂ ಚ ಅಭಿಷೇಕನಿರೂಪಣಂ ॥ ೪ ॥

---

## ತೊಂಬತ್ತೊಂಬತ್ತನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು—ಮರೀಚಿಯೇ! ಈಗ ಅಗ್ನಿಯು ವಸಿಷ್ಠನಿಗೆ ಉಪದೇಶಮಾಡಿದ ಈಶಾನಕಲ್ಪವೃತ್ತಾಂತವನ್ನೊಳಗೊಂಡಿರುವ ಆಗ್ನೇಯ ಪುರಾಣವನ್ನು ನಿನಗೆ ಹೇಳುವೆನು.

೨. ಆ ಪುರಾಣವು ಅದ್ಭುತವಾದ ನಾನಾಚರಿತ್ರೆಗಳನ್ನೊಳಗೊಂಡಿದೆ. ಅದರಲ್ಲಿ ಹದಿನೈದುಸಾವಿರಗ್ರಂಥಗಳಿವೆ ಶ್ರವಣಪಠನಮಾಡುವ ಮನುಷ್ಯರಿಗೆ ಅದು ಸಕಲ ಪಾಪಗಳನ್ನೂ ಪರಿಹರಿಸುತ್ತದೆ.

## ಆಗ್ನೇಯ ಪುರಾಣದ ವಿಷಯ

೩-೨೨. ಪ್ರಶ್ನೆಪೂರ್ವಕವಾಗಿ ಸರ್ವಾವತಾರವರ್ಣನೆ, ಸೃಷ್ಟಿ, ವಿಷ್ಣು ಪೂಜಾದಿಗಳು, ಅಗ್ನಿಕಾರ್ಯ, ಮಂತ್ರ, ಮುದ್ರೆ ಮುಂತಾದುವುಗಳ ಲಕ್ಷಣ,

ಲಕ್ಷಣಂ ಮಂಡಲಾದೀನಾಂ ಕುಶಾಯೂಪಾರ್ಜನಂ ತತಃ ।
ಪವಿತ್ರಾರೋಪಣವಿಧಿರ್ದೇವಾಲಯ ವಿಧಿಸ್ತತಃ ॥ ೫ ॥

ಶಾಲಗ್ರಾಮಾದಿಪೂಜಾ ಚ ಮೂರ್ತಿಲಕ್ಷ್ಮ ಪೃಥಕ್ಪೃಥಕ್ ।
ನ್ಯಾಸಾದೀನಾಂ ವಿಧಾನಂ ಚ ಪ್ರತಿಷ್ಠಾಪೂರ್ವಕಂ ತತಃ ॥ ೬ ॥

ವಿನಾಯಕಾದಿಪೂಜಾ ಚ ನಾನಾದೀಕ್ಷಾವಿಧಿಃ ಪರಂ ।
ಪ್ರತಿಷ್ಠಾ ಸರ್ವದೇವಾನಾಂ ಬ್ರಹ್ಮಾಂಡಸ್ಯ ನಿರೂಪಣಂ ॥ ೭ ॥

ಗಂಗಾದಿತೀರ್ಥಮಾಹಾತ್ಮ್ಯಂ ದ್ವೀಪವರ್ಷಾನುವರ್ಣನಂ ।
ಊರ್ಧ್ವಾಧೋಲೋಕರಚನಾ ಜ್ಯೋತಿಶ್ಚಕ್ರನಿರೂಪಣಂ ॥ ೮ ॥

ಜ್ಯೋತಿಷಂ ಚ ತತಃ ಪ್ರೋಕ್ತಂ ಶಾಸ್ತ್ರಂ ಯುದ್ಧಜಯಾರ್ಣವಂ ।
ಷಟ್ಕರ್ಮ ಚ ತತಃ ಪ್ರೋಕ್ತಂ ಮಂತ್ರಮಂತ್ರೌಷಧೀಗಣಃ ॥ ೯ ॥

ಕುಬ್ಜಿಕಾದಿಸಮರ್ಚಾತ್ವಂ ಷೋಢಾನ್ಯಾಸವಿಧಿಸ್ತಥಾ ।
ಕೋಟಿಹೋಮವಿಧಾನಂ ಚ ಮನ್ವಂತರನಿರೂಪಣಂ ॥ ೧೦ ॥

ಬ್ರಹ್ಮಚರ್ಯಾದಿಧರ್ಮಾಂಶ್ಚ ಶ್ರಾದ್ಧಕಲ್ಪವಿಧಿಸ್ತತಃ ।
ಗ್ರಹಯಜ್ಞಸ್ತತಃ ಪ್ರೋಕ್ತೋ ವೈದಿಕಸ್ಮಾರ್ತಕರ್ಮ ಚ ॥ ೧೧ ॥

---

ಸಕಲದೀಕ್ಷಾವಿಧಾನ, ಅಭಿಷೇಕನಿರೂಪಣೆ, ಮಂಡಲಾದಿ ಲಕ್ಷಣ, ಕುಶಮಾರ್ಜನೆ, ಪವಿತ್ರಾರೋಪಣವಿಧಾನ, ದೇವಾಲಯವಿಧಾನ, ಸಾಲಿಗ್ರಾಮಾದಿ ಪೂಜೆ, ಬೇರೆ ಬೇರೆ ಮೂರ್ತಿಗಳ ಲಕ್ಷಣ, ನ್ಯಾಸಾದಿ ವಿಧಾನ, ಪ್ರತಿಷ್ಠೆ, ವಿನಾಯಕಾದಿ ಪೂಜೆ, ನಾನಾದೀಕ್ಷಾವಿಧಾನ, ಸರ್ವದೇವತೆಗಳ ಪ್ರತಿಷ್ಠಾ ವಿಧಾನ, ಬ್ರಹ್ಮಾಂಡ ನಿರೂಪಣೆ, ಗಂಗಾದಿ ತೀರ್ಥಮಾಹಾತ್ಮ್ಯ, ದ್ವೀಪ ಖಂಡರಚನೆ, ಊರ್ಧ್ವಾಧೋಲೋಕರಚನೆ, ಜ್ಯೋತಿಶ್ಚಕ್ರನಿರೂಪಣೆ, ಜ್ಯೋತಿಶ್ಶಾಸ್ತ್ರ, ಷಟ್ಕರ್ಮ, ಮಂತ್ರ, ಯಂತ್ರ, ಔಷಧೀಗಣ, ಕುಬ್ಜಿಕಾದಿ ಪೂಜೆ, ಷಡ್ವಿಧ ನ್ಯಾಸ, ಕೋಟಿಹೋಮ, ಮನ್ವಂತರ, ಬ್ರಹ್ಮಚರ್ಯಾದಿ ಧರ್ಮ,

ಪ್ರಾಯಶ್ಚಿತ್ತಾನುಕಥನಂ ತಿಥೀನಾಂ ಚ ವ್ರತಾದಿಕಂ ।
ವಾರವ್ರತಾನುಕಥನಂ ನಕ್ಷತ್ರವ್ರತಕೀರ್ತನಂ ॥ ೧೨ ॥

ಮಾಸಿಕವ್ರತನಿರ್ದೇಶೋ ದೀಪದಾನವಿಧಿಸ್ತಥಾ ।
ನವವ್ಯೂಹಾರ್ಚನಂ ಪ್ರೋಕ್ತಂ ನರಕಾಣಾಂ ನಿರೂಪಣಂ ॥ ೧೩ ॥

ವ್ರತಾನಾಂ ಚಾಪಿ ದಾನಾನಾಂ ನಿರೂಪಣಮಿಹೋದಿತಂ ।
ನಾಡೀಚಕ್ರಸಮುದ್ದೇಶಃ ಸಂಧ್ಯಾವಿಧಿರನುತ್ತಮಃ ॥ ೧೪ ॥

ಗಾಯತ್ರ್ಯರ್ಥಸ್ಯ ನಿರ್ದೇಶೋ ಲಿಂಗಸ್ತೋತ್ರಂ ತತಃ ಪರಂ ।
ರಾಜ್ಯಾಭಿಷೇಕಮಂತ್ರೋಕ್ತಿರ್ಧರ್ಮಕೃತ್ಯಂ ಚ ಭೂಭುಜಾಂ ॥ ೧೫ ॥

ಸ್ವಪ್ನಾಧ್ಯಾಯಸ್ತತಃ ಪ್ರೋಕ್ತಃ ಶಕುನಾದಿನಿರೂಪಣಂ ।
ಮಂಡಲಾದಿಕನಿರ್ದೇಶೋ ರತ್ನದೀಕ್ಷಾವಿಧಿಸ್ತತಃ ॥ ೧೬ ॥

ರಾಮೋಕ್ತನೀತಿನಿರ್ದೇಶೋ ರತ್ನಾನಾಂ ಲಕ್ಷಣಂ ತತಃ ।
ಧನುರ್ವಿದ್ಯಾ ತತಃ ಪ್ರೋಕ್ತಾ ವ್ಯವಹಾರಪ್ರದರ್ಶನಂ ॥ ೧೭ ॥

ದೇವಾಸುರವಿಮರ್ದಾಖ್ಯಾ ಹ್ಯಾಯುರ್ವೇದನಿರೂಪಣಂ ।
ಗಜಾದೀನಾಂ ಚಿಕಿತ್ಸಾ ಚ ತೇಷಾಂ ಶಾಂತಿಸ್ತತಃ ಪರಂ ॥ ೧೮ ॥

---

ಶ್ರಾದ್ಧಕಲ್ಪವಿಧಾನ, ಗೃಹಯಜ್ಞ, ಶ್ರೌತಸ್ಮಾರ್ತಕರ್ಮ, ಪ್ರಾಯಶ್ಚಿತ್ತ, ತಿಥಿವ್ರತ, ವಾರವ್ರತ, ನಕ್ಷತ್ರವ್ರತ, ಮಾಸಿಕವ್ರತ, ದೀಪದಾನವಿಧಿ, ನವವ್ಯೂಹಾರ್ಚನೆ, ನರಕನಿರೂಪಣೆ, ವ್ರತದಾನ ನಿರೂಪಣೆ, ನಾಡೀಚಕ್ರ, ಸಂಧ್ಯಾವಿಧಿ, ಗಾಯತ್ರ್ಯರ್ಥಕಥನೆ, ಲಿಂಗಸ್ತೋತ್ರ, ರಾಜ್ಯಾಭಿಷೇಕಮಂತ್ರ, ರಾಜಧರ್ಮ, ಸ್ವಪ್ನಾಧ್ಯಾಯ, ಶಕುನಾದಿಗಳು, ಮಂಡಲಾದಿ ನಿರ್ದೇಶ, ರಣದೀಕ್ಷಾವಿಧಿ, ರಾಮೋಕ್ತ ನೀತಿನಿರ್ದೇಶ, ರತ್ನಲಕ್ಷಣ, ಧನುರ್ವಿದ್ಯೆ, ವ್ಯವಹಾರ ಪ್ರದರ್ಶನ, ದೇವಾಸುರ ಯುದ್ಧ, ಆಯುರ್ವೇದ, ಗಜಚಿಕಿತ್ಸೆ, ಗಜಶಾಂತಿ, ಗೋಚಿಕಿತ್ಸೆ,

ಗೋನರಾದಿಚಿಕಿತ್ಸಾ ಚ ನಾನಾಪೂಜಾಸ್ತತಃ ಪರಂ ।
ಶಾಂತಯಶ್ಚಾಪಿ ವಿವಿಧಾ ಛಂದಶ್ಶಾಸ್ತ್ರಮತಃ ಪರಂ ॥ ೧೯ ॥

ಸಾಹಿತ್ಯಂ ಚ ತತಃ ಪಶ್ಚಾದೇಕಾರ್ಣಾದಿಸಮಾಹ್ವಯಾಃ ।
ಸಿದ್ಧಶಬ್ದಾನುಶಿಷ್ಟಿಶ್ಚ ಕೋಶಃ ಸರ್ಗಾದಿವರ್ಗಕಃ ॥ ೨೦ ॥

ಪ್ರಲಯಾನಾಂ ಲಕ್ಷಣಂ ಚ ಶಾರೀರಕನಿರೂಪಣಂ ।
ವರ್ಣನಂ ನರಕಾಣಾಂ ಚ ಯೋಗಶಾಸ್ತ್ರಮತಃ ಪರಂ ॥ ೨೧ ॥

ಬ್ರಹ್ಮಜ್ಞಾನಂ ತತಃ ಪಶ್ಚಾತ್ಪುರಾಣಶ್ರವಣೇ ಫಲಂ ।
ಏತದಾಗ್ನೇಯಕಂ ವಿಪ್ರ ಪುರಾಣಂ ಪರಿಕೀರ್ತಿತಂ ॥ ೨೨ ॥

ತಲ್ಲಿಖಿತ್ವಾ ತು ಯೋ ದದ್ಯಾತ್ಸುವರ್ಣಕಮಲಾನ್ವಿತಂ ।
ತಿಲಧೇನುಯುತಂ ಚಾಪಿ ಮಾರ್ಗಶೀರ್ಷ್ಯಾಂ ವಿಧಾನತಃ ॥ ೨೩ ॥

---

ಮನುಷ್ಯಚಿಕಿತ್ಸೆ, ನಾನಾವಿಧಪೂಜೆಗಳು, ವಿವಿಧಶಾಂತಿಗಳು, ಛಂದಶ್ಶಾಸ್ತ್ರ, ಸಾಹಿತ್ಯ, ಏಕಾಕ್ಷರನಾಮ, ಸಿದ್ಧಶಬ್ದಾನುಶಾಸನಕೋಶ, ಸೃಷ್ಟಿ, ಪ್ರಳಯ ಲಕ್ಷಣ, ಶಾರೀರಕಲಕ್ಷಣ, ನರಕವರ್ಣನೆ, ಯೋಗಶಾಸ್ತ್ರ, ಬ್ರಹ್ಮಜ್ಞಾನ, ಪುರಾಣಶ್ರವಣಫಲ ಇವು ಆಗ್ನೇಯ ಪುರಾಣದಲ್ಲಿ ಅಡಕವಾಗಿರುವ ವಿಷಯಗಳು

೨೩-೨೪ ಈ ಪುರಾಣವನ್ನು ಬರೆದು ಸುವರ್ಣಕಮಲ, ತಿಲ, ಧೇನು ಸಹಿತವಾಗಿ ಮಾರ್ಗಶೀರ್ಷಶುಕ್ಲಪೂರ್ಣಿಮಾ ದಿವಸ ವಿಧಿವತ್ತಾಗಿ ಪುರಾಣಾರ್ಥ ಜ್ಞಾನಿಗೆ ದಾನಮಾಡುವವನು ಸ್ವರ್ಗಲೋಕದಲ್ಲಿ ಪೂಜ್ಯನಾಗುವನು.

ಪುರಾಣಾರ್ಥವಿದೇ ಸೋಽಥ ಸ್ವರ್ಗಲೋಕೇ ಮಹೀಯತೇ ।
ಏಷಾನುಕ್ರಮಣೀ ಪ್ರೋಕ್ತಾ ತವಾಗ್ನೇಯಸ್ಯ ಮುಕ್ತಿದಾ ॥ ೨೪ ॥
ಶೃಣ್ವತಾಂ ಪಠತಾಂ ಚೈವ ನೃಣಾಂ ಚೇಹ ಪರತ್ರ ಚ ॥ ೨೫ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇಽಗ್ನಿಪುರಾಣಾನುಕ್ರಮಣೀನಿರೂಪಣಂ ನಾಮ ಏಕೋನಶತತಮೋಽಧ್ಯಾಯಃ

---

ಈ ವಿಷಯಾನುಕ್ರಮಣಿಕೆಯು ನಿನಗೆ ಉಕ್ತವಾಗಿದೆ. ಇದನ್ನು ಶ್ರವಣ ಪಠನೆಗಳನ್ನು ಮಾಡುವವರಿಗೆ ಈ ಲೋಕದಲ್ಲಿ ಯಥೇಷ್ಟವಾಗಿ ಭೋಗಗಳು ಲಭಿಸಿ ಪರಲೋಕದಲ್ಲಿ ಮುಕ್ತಿಯಾಗುವುದು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ಅಗ್ನಿಪುರಾಣವಿಷಯಾನು ಕ್ರಮಣಿಕೆಯ ಕಥನವೆಂಬ ತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

---

# ಶತತಮೋಽಧ್ಯಾಯಃ

## ಶ್ರೀಬ್ರಹ್ಮೋವಾಚ

ಅಥ ತೇ ಸಂಪ್ರವಕ್ಷ್ಯಾಮಿ ಪುರಾಣಂ ಸರ್ವಸಿದ್ಧಿದಂ ।
ಭವಿಷ್ಯಂ ಭವತಃ ಸರ್ವಲೋಕಾಭೀಷ್ಟಪ್ರದಾಯಕಂ ॥ ೧ ॥

ಯತ್ರಾಹಂ ಸರ್ವದೇವಾನಾಮಾದಿಕರ್ತಾ ಸಮುದ್ಗತಃ ।
ಸೃಷ್ಟ್ಯರ್ಥಂ ತತ್ರ ಸಂಜಾತೋ ಮನುಃ ಸ್ವಾಯಂಭುವಃ ಪುರಾ ॥ ೨ ॥

ಸ ಮಾಂ ಪ್ರಣಮ್ಯ ಪಪ್ರಚ್ಛ ಧರ್ಮಂ ಸರ್ವಾರ್ಥಸಾಧಕಂ ।
ಅಹಂ ತಸ್ಮೈ ತದಾ ಪ್ರೀತಃ ಪ್ರಾವೋಚಂ ಧರ್ಮಸಂಹಿತಾಂ ॥ ೩ ॥

ಪುರಾಣಾನಾಂ ಯದಾ ವ್ಯಾಸೋ ವ್ಯಾಸಂ ಚಕ್ರೇ ಮಹಾಮತಿಃ ।
ತದಾ ತಾಂ ಸಂಹಿತಾಂ ಸರ್ವಾಂ ಪಂಚಧಾ ವ್ಯಭಜನ್ಮುನಿಃ ॥ ೪ ॥

---

## ನೂರನೆಯ ಅಧ್ಯಾಯವು

೧-೩. ಬ್ರಹ್ಮನು ಹೇಳಿದನು—ಮರೀಚಿಯೇ! ಈಗ ಲೋಕಕ್ಕೆಲ್ಲಾ ಅಭೀಷ್ಟದಾಯಕವು, ಸಕಲಸಿದ್ಧಿಪ್ರದವೂ ಆದ ಭವಿಷ್ಯಪುರಾಣದ ವಿಷಯವನ್ನು ನಿನಗೆ ಹೇಳುವೆನು.

ಸರ್ವದೇವತೆಗಳಿಗೂ ನಾನೇ ಆದಿಕರ್ತನು. ಸೃಷ್ಟಿಗಾಗಿ ಸ್ವಾಯಂಭುವ ಮನುವು ಆದಿಯಲ್ಲಿ ಹುಟ್ಟಿದನು. ಅವನು ನಮಸ್ಕಾರ ಮಾಡಿ ನನ್ನನ್ನು ಸರ್ವಾರ್ಥಸಾಧಕವಾದ, ಧರ್ಮವಿಷಯದಲ್ಲಿ ಪ್ರಶ್ನೆಮಾಡಿದನು. ಆಗ ನಾನು ಸಂತುಷ್ಟನಾಗಿ ಅವನಿಗೆ ಧರ್ಮಸಂಹಿತೆಯನ್ನು ಹೇಳಿದೆನು.

೪-೫. ಮಹಾಜ್ಞಾನಿಗಳಾದ ವ್ಯಾಸರು ಪುರಾಣಗಳನ್ನು ವಿಭಾಗ ಮಾಡಿದಾಗ ಆ ಸಂಹಿತೆಯನ್ನು ಐದು ವಿಧವಾಗಿ ವಿಭಾಗಮಾಡಿದರು.

ಅಘೋರಕಲ್ಪವೃತ್ತಾಂತಂ ನಾನಾಶ್ಚರ್ಯಕಥಾನ್ವಿತಂ ।
ತತ್ರಾದಿಮಂ ಸ್ಮೃತಂ ಪರ್ವ ಬ್ರಾಹ್ಮಂ ಯತ್ರಾಸ್ತ್ಯುಪಕ್ರಮಃ ॥ ೫ ॥

ಸೂತಶೌನಕಸಂವಾದೇ ಪುರಾಣಪ್ರಶ್ನಸಂಕ್ರಮಃ ।
ಆದಿತ್ಯಚರಿತಪ್ರಾಯಃ ಸರ್ವಾಖ್ಯಾನಸಮನ್ವಿತಃ ॥ ೬ ॥

ಸೃಷ್ಟ್ಯಾದಿಲಕ್ಷಣೋಪೇತಃ ಶಾಸ್ತ್ರಸರ್ವಸ್ವರೂಪಕಃ ।
ಪುಸ್ತಲೇಖಕಲೇಖಾನಾಂ ಲಕ್ಷಣಂ ಚ ತತಃ ಪರಂ ॥ ೭ ॥

ಸಂಸ್ಕಾರಾಣಾಂ ಚ ಸರ್ವೇಷಾಂ ಲಕ್ಷಣಂ ಚಾತ್ರ ಕೀರ್ತಿತಂ ।
ಪಕ್ಷಸ್ಯಾದಿತಿಥೀನಾಂ ಚ ಕಲ್ಪಾಃ ಸಪ್ತ ಚ ಕೀರ್ತಿತಾಃ ॥ ೮ ॥

ಅಷ್ಟಮ್ಯಾದ್ಯಾಃ ಶೇಷಕಲ್ಪಾ ವೈಷ್ಣವೇ ಪರ್ವಣಿ ಸ್ಮೃತಾಃ ।
ಶೈವೇ ಚ ಕಾಯತೋ ಭಿನ್ನಾಃ ಸೌರೇ ಚಾಂತ್ಯಕಥಾನ್ವಯಃ ॥ ೯ ॥

---

ನಾನಾವಿಧವಾದ, ಆಶ್ಚರ್ಯವಾದ ಕಥೆಗಳಿಂದ ಕೂಡಿದ, ಅಘೋರಕಲ್ಪ ವೃತ್ತಾಂತರೂಪವಾದ, ಬ್ರಾಹ್ಮಪರ್ವವು ಈ ಪುರಾಣಕ್ಕೆ ಆರಂಭವು.

೬-೧೦. ಈ ಪುರಾಣವು ಸೂತಶೌನಕರ ಪ್ರಶ್ನೋತ್ತರ ರೂಪವಾದ ಸಂವಾದವು. ಇದರಲ್ಲಿ ಐದು ಪರ್ವಗಳಿವೆ.

### ಭವಿಷ್ಯಪುರಾಣ—ಬ್ರಾಹ್ಮಪರ್ವ

ಸಕಲೋಪಾಖ್ಯಾನಗಳಿಂದ ಸಹಿತವಾಗಿ ಆದಿತ್ಯಚರಿತ್ರೆ, ಸೃಷ್ಟ್ಯಾದಿ ಲಕ್ಷಣ, ಶಾಸ್ತ್ರಸ್ವರೂಪ, ಪುಸ್ತಕಲೇಖಕಲೇಖನಗಳ ಲಕ್ಷಣ, ಸಕಲಸಂಸ್ಕಾರ ಲಕ್ಷಣ ಇವು ಬ್ರಾಹ್ಮಪರ್ವ ವಿಷಯಗಳು.

### ವೈಷ್ಣವಪರ್ವ

ಪಕ್ಷದ ಆದಿ ತಿಥಿಗಳ ಏಳುಕಲ್ಪಗಳು, ಅಷ್ಟಮ್ಯಾದಿ ಉಳಿದ ಕಲ್ಪಗಳೂ ವೈಷ್ಣವಪರ್ವದಲ್ಲಿ ಉಕ್ತವಾಗಿವೆ.

**ಪ್ರತಿಸರ್ಗಾಹ್ವಯಂ ಪಶ್ಚಾನ್ನಾನಾಖ್ಯಾನಸಮನ್ವಿತಂ ।**
**ಪುರಾಣಸ್ಯೋಪಸಂಹಾರಸಹಿತಂ ಪರ್ವ ಪಂಚಮಂ ॥ ೧೦ ॥**

**ಏಷು ಪಂಚಸು ಪೂರ್ವಸ್ಮಿನ್ ಬ್ರಹ್ಮಣೋ ಮಹಿಮಾಧಿಕಾಃ ।**
**ಧರ್ಮೋ ಕಾಮೋ ಚ ಮೋಕ್ಷೋ ತು ವಿಷ್ಣೋಶ್ಚಾಪಿ ಶಿವಸ್ಯ ಚ ॥ ೧೧ ॥**

**ದ್ವಿತೀಯೋ ಚ ತೃತೀಯೋ ಚ ಸೌರೇ ವರ್ಗಚತುಷ್ಟಯೋ ।**
**ಪ್ರತಿಸರ್ಗಾಹ್ವಯಂ ತ್ವಂತ್ಯಂ ಪ್ರೋಕ್ತಂ ಸರ್ವಕಥಾನ್ವಿತಂ ॥ ೧೨ ॥**

**ಸಭವಿಷ್ಯಂ ವಿನಿರ್ದಿಷ್ಟಂ ಸರ್ವಂ ವ್ಯಾಸೇನ ಧೀಮತಾ ।**
**ಚತುರ್ದಶಸಹಸ್ರಂ ತು ಪುರಾಣಂ ಪರಿಕೀರ್ತಿತಂ ॥ ೧೩ ॥**

---

## ಶೈವಪರ್ವ

ಶರೀರದಿಂದ ಆತ್ಮರು ಭಿನ್ನರೆಂಬುದು ಈ ಪರ್ವದ ವಿಷಯ.

## ಸೌರಪರ್ವ

ಇದರಲ್ಲಿ ಅಂತ್ಯಕಥಾನ್ವಯವು ಉಕ್ತವಾಗಿದೆ.

## ಪ್ರತಿಸರ್ಗಪರ್ವ

ಇದರಲ್ಲಿ ನಾನಾಕಥೆಗಳು, ಉಪಸಂಹಾರ ಇವು ಉಕ್ತವಾಗಿವೆ.

೧೧-೧೪. ಈ ಐದು ಪರ್ವಗಳ ಪೈಕಿ ಮೊದಲನೆಯ ಪರ್ವದಲ್ಲಿ ಬ್ರಹ್ಮ ಮಹಿಮೆಯನ್ನು ಹೆಚ್ಚಾಗಿ ಹೇಳಿದೆ. ಧರ್ಮ ಕಾಮ ಮೋಕ್ಷಗಳು, ವಿಷ್ಣು, ಶಿವ, ಸೌರಪರ್ವಗಳಲ್ಲಿ ಕ್ರಮವಾಗಿ ನಿರೂಪಿಸಲ್ಪಟ್ಟಿವೆ. ಪ್ರತಿಸರ್ಗವೆಂಬ ಅಂತ್ಯಪರ್ವವು ಭವಿಷ್ಯಸಹಿತವಾಗಿ ಸರ್ವಕಥೆಗಳಿಂದಲೂ ಯುಕ್ತವಾಗಿದೆ. ಈ ರೀತಿ ಜ್ಞಾನಿಗಳಾದ ವೇದವ್ಯಾಸರಿಂದ ವಿಭಾಗಿಸಲ್ಪಟ್ಟು ಉಕ್ತವಾಗಿರುವುದು. ಈ ಪುರಾಣದಲ್ಲಿ ಹದಿನಾಲ್ಕುಸಾವಿರ ಗ್ರಂಥಗಳು ಅಡಕವಾಗಿವೆ. ಸರ್ವ

**ಭವಿಷ್ಯಂ ಸರ್ವದೇವಾನಾಂ ಸಾಮ್ಯಂ ಯತ್ರ ಪ್ರಕೀರ್ತಿತಂ ।**
**ಗುಣಾನಾಂ ತಾರತಮ್ಯೇನ ಸಮಂ ಬ್ರಹ್ಮೇತಿ ಹಿ ಶ್ರುತಿಃ ॥ ೧೪ ॥**

**ತಂ ಲಿಖಿತ್ವಾ ತು ಯೋ ದದ್ಯಾತ್ಪೌಷ್ಯಾಂ ವಿದ್ವಾನ್ವಿಮತ್ಸರಃ ।**
**ಗುಡಧೇನುಯುತಂ ಹೇಮವಸ್ತ್ರಮಾಲ್ಯವಿಭೂಷಣೈಃ ॥ ೧೫ ॥**

**ವಾಚಕಂ ಪುಸ್ತಕಂ ಚಾಪಿ ಪೂಜಯಿತ್ವಾ ವಿಧಾನತಃ ।**
**ಗಂಧಾದ್ಯೈರ್ಭೋಜ್ಯಭಕ್ಷೈಶ್ಚ ಕೃತ್ವಾ ನೀರಾಜನಾದಿಕಂ ॥ ೧೬ ॥**

**ಯೋ ವೈ ಜಿತೇಂದ್ರಿಯೋ ಭೂತ್ವಾ ಸೋಪವಾಸಃ ಸಮಾಹಿತಃ ।**
**ಅಥವೈಕಹವಿಷ್ಯಾಶೀ ಕೀರ್ತಯೇಚ್ಛೃಣುಯಾದಪಿ ॥ ೧೭ ॥**

---

ದೇವತೆಗಳ ವಿಷಯದಲ್ಲಿ ಬ್ರಹ್ಮನ ಸಾಮ್ಯವನ್ನು ನಿರೂಪಿಸುವುದೇ ಭವಿಷ್ಯ ಪುರಾಣವು. ಅವರವರ ಗುಣತಾರತಮ್ಯಕ್ಕನುಗುಣವಾಗಿ ಆಯಾಯಾ ದೇವತೆಗಳನ್ನು ನೋಡುವುದರಿಂದ ಬ್ರಹ್ಮನು ಸಮನೆಂದು ವೇದವು ಹೇಳುತ್ತದೆ.

೧೫-೧೯. ಆ ಪುರಾಣವನ್ನು ಬರೆದು ಅದನ್ನು ಮಾತ್ಸರ್ಯರಹಿತನಾದ ವಿದ್ವಾಂಸನು ಪುಷ್ಯ ಶುಕ್ಲ ಪೂರ್ಣಿಮೆಯ ದಿನ ಗುಡ, ಧೇನು, ಸುವರ್ಣ, ವಸ್ತ್ರ, ಮಾಲಿಕೆ ಮತ್ತು ಆಭರಣಗಳಿಂದ ಸಹಿತವಾಗಿ ದಾನ ಮಾಡಿದರೆ ಅವನು ಮುಕ್ತನಾಗುವನು.

ಜಿತೇಂದ್ರಿಯನಾಗಿ ಉಪವಾಸ ಮಾಡಿ ಅಥವಾ ಒಪ್ಪತ್ತೇ ಹವಿಷ್ಯ ಭೋಜನ ಮಾಡಿ ಸಮಾಧಾನಮನಸ್ಸಿನಿಂದ ಪುರಾಣ ವಕ್ತೃಗಳನ್ನೂ, ಪುಸ್ತಕವನ್ನೂ ಸಹ ವಿಧಾನೋಕ್ತಪ್ರಕಾರವಾಗಿ ಗಂಧಪುಷ್ಪಾದಿಗಳಿಂದಲೂ, ಭಕ್ಷ್ಯಭೋಜ್ಯಗಳಿಂದಲೂ ಪೂಜಿಸಿ, ಮಂಗಳಾರತಿ ಮಾಡಿ ಪುರಾಣ ಶ್ರವಣ ಕೀರ್ತನೆಗಳನ್ನು ಮಾಡುವವನು ಘೋರಪಾಪಗಳಿಂದ ಮುಕ್ತನಾಗಿ ಬ್ರಹ್ಮಲೋಕಕ್ಕೆ ಹೋಗುವನು.

**ಸ ಮುಕ್ತಃ ಪಾತಕೈರ್ಘೋರೈಃ ಪ್ರಯಾತಿ ಬ್ರಹ್ಮಣಃ ಪದಂ ।**
**ಯೋಽಪ್ಯನುಕ್ರಮಣೀಮೇತಾಂ ಭವಿಷ್ಯಸ್ಯ ನಿರೂಪಿತಾಂ ॥ ೧೮ ॥**

**ಪಠೇದ್ವಾ ಶೃಣುಯಾಚ್ಚೈತಾಂ ಭುಕ್ತಿಂ ಮುಕ್ತಿಂ ಚ ವಿಂದತಿ ॥ ೧೯ ॥**

**ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ಭವಿಷ್ಯಪುರಾಣಾನುಕ್ರಮಣೀನಿರೂಪಣಂ ನಾಮ ಶತತಮೋಽಧ್ಯಾಯಃ**

---

ಈ ರೀತಿಯಾಗಿ ಉಕ್ತವಾದ ಭವಿಷ್ಯಪುರಾಣದ ವಿಷಯಾನುಕ್ರಮಣಿಕೆಯನ್ನು ಶ್ರವಣಪಠನೆ ಮಾಡುವವನು ಭೋಗ ಮೋಕ್ಷಗಳನ್ನು ಪಡೆಯುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ಭವಿಷ್ಯಪುರಾಣವಿಷಯಾನುಕ್ರಮಣಿಕೆಯೆಂಬ ನೂರನೆಯ ಅಧ್ಯಾಯವು ಮುಗಿದುದು.



## ಏಕೋತ್ತರಶತತಮೋಽಧ್ಯಾಯಃ

### ಶ್ರೀಬ್ರಹ್ಮೋವಾಚ

ಶೃಣು ವತ್ಸ ಪ್ರವಕ್ಷ್ಯಾಮಿ ಪುರಾಣಂ ದಶಮಂ ತವ ।
ಬ್ರಹ್ಮವೈವರ್ತಕಂ ನಾಮ ವೇದಮಾರ್ಗಾನುದರ್ಶಕಂ ॥ ೧ ॥

ಸಾವರ್ಣಿರ್ಯತ್ರ ಭಗವಾನ್ಸಾಕ್ಷಾದ್ದೇವರ್ಷಯೇ ಸ್ಥಿತಃ ।
ನಾರದಾಯ ಪುರಾಣಾರ್ಥಂ ಪ್ರಾಹ ಸರ್ವಮಲೌಕಿಕಂ ॥ ೨ ॥

ಧರ್ಮಾರ್ಥಕಾಮಮೋಕ್ಷಾಣಾಂ ಸಾರಃ ಪ್ರೀತಿರ್ಹರೌಹರೇ ।
ತಯೋರಭೇದಸಿದ್ಧ್ಯರ್ಥಂ ಬ್ರಹ್ಮವೈವರ್ತಮುತ್ತಮಂ ॥ ೩ ॥

ರಥಂತರಸ್ಯ ಕಲ್ಪಸ್ಯ ವೃತ್ತಾಂತಂ ಯನ್ಮಯೋದಿತಂ ।
ಶತಕೋಟಿಪುರಾಣೇ ತತ್ಸಂಕ್ಷಿಪ್ಯ ಪ್ರಾಹ ವೇದವಿತ್ ॥ ೪ ॥

---

### ನೂರೊಂದನೆಯ ಅಧ್ಯಾಯ

೧. ಬ್ರಹ್ಮನು ಹೇಳಿದನು—ವತ್ಸ! ವೇದಮಾರ್ಗಪ್ರದರ್ಶಕವಾದ ಬ್ರಹ್ಮವೈವರ್ತವೆಂಬ ಹತ್ತನೆಯ ಪುರಾಣದ ವಿಷಯವನ್ನು ಹೇಳುವೆನು. ಸಮಾಧಾನದಿಂದ ಕೇಳು.

೨. ಪೂಜ್ಯನಾದ ಸಾವರ್ಣಿಮನುವು ದೇವರ್ಷಿಗಳಾದ ನಾರದರಿಗೆ ಸಕಲವಾದ ಅಲೌಕಿಕ ಪುರಾಣಾರ್ಥವನ್ನು ಈ ಗ್ರಂಥದಲ್ಲಿ ಹೇಳಿರುವನು.

೩-೪. ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಾರ, ಹರಿಹರರಲ್ಲಿ ಪ್ರೀತಿ ಇವುಗಳನ್ನು ನಿರೂಪಿಸುವಂತಹ, ರಥಂತರ ಕಲ್ಪವೃತ್ತಾಂತರೂಪವಾದ,

ವ್ಯಾಸಶ್ಚತುರ್ಧಾ ಸಂವ್ಯಸ್ಯ ಬ್ರಹ್ಮವೈವರ್ತಸಂಜ್ಞಿತೇ |
ಅಷ್ಟಾದಶಸಹಸ್ರಂ ತತ್ಪುರಾಣಂ ಪರಿಕೀರ್ತಿತಂ || ೫ ||

ಬ್ರಹ್ಮಪ್ರಕೃತಿವಿಘ್ನೇಶಕೃಷ್ಣಖಂಡಸಮನ್ವಿತಂ |
ತತ್ರ ಸೂತರ್ಷಿಸಂವಾದೇ ಪುರಾಣೋಪಕ್ರಮಸ್ತತಃ || ೬ ||

ಸೃಷ್ಟಿಪ್ರಕರಣಂ ತ್ವಾದ್ಯಂ ತತೋ ನಾರದವೇಧಸೋಃ |
ವಿವಾದಃ ಸುಮಹಾನ್ಯತ್ರ ದ್ವಯೋರಾಸೀತ್ಪರಾಭವಃ || ೭ ||

ಶಿವಲೋಕಗತಿಃ ಪಶ್ಚಾತ್ ಜ್ಞಾನಲಾಭಃ ಶಿವಾತ್ಮನಃ |
ಶಿವವಾಕ್ಯೇನ ತತ್ಪಶ್ಚಾನ್ಮರೀಚೇರ್ನಾರದಸ್ಯ ತು || ೮ ||

---

ಶತಕೋಟಿಪುರಾಣದಲ್ಲಿ ನಾನು ಹೇಳಿರುವ, ಬ್ರಹ್ಮವೈವರ್ತವೆಂಬ ಉತ್ತಮ ಪುರಾಣವನ್ನು ವೇದಜ್ಞಾನಿಗಳಾದ ವ್ಯಾಸರು ಸಂಗ್ರಹಿಸಿ ಅದನ್ನು ನಾಲ್ಕುಭಾಗ ಮಾಡಿ ಬ್ರಹ್ಮವೈವರ್ತನಾಮಕಪುರಾಣದಲ್ಲಿ ಹೇಳಿರುವರು. ಅದು ಹದಿನೆಂಟು ಸಾವಿರ ಗ್ರಂಥಗಳುಳ್ಳುದೆಂದು ಉಕ್ತವಾಗಿದೆ.

೬. ಆ ಪುರಾಣವು ಬ್ರಹ್ಮಖಂಡ, ಪ್ರಕೃತಿಖಂಡ, ವಿಘ್ನೇಶಖಂಡ ಮತ್ತು ಕೃಷ್ಣಖಂಡ ಎಂಬುದಾಗಿ ನಾಲ್ಕುಭಾಗಗಳಾಗಿ ವಿಂಗಡಿಸಲ್ಪಟ್ಟಿದೆ. ಅದರಲ್ಲಿ ಬ್ರಹ್ಮಖಂಡವು ಸೂತಋಷಿಗಳ ಸಂವಾದರೂಪವಾಗಿ ಉಪಕ್ರಮಿಸಲ್ಪಟ್ಟಿದೆ.

## ಬ್ರಹ್ಮಖಂಡ

೭-೯. ಸೃಷ್ಟಿಪ್ರಕರಣ, ನಾರದಬ್ರಹ್ಮವಿವಾದ, ಉಭಯ ಪರಾಭವ, ಶಿವಲೋಕಗಮನ, ಶಿವನ ಉಪದೇಶದಿಂದ ಜ್ಞಾನಲಾಭ, ಅನಂತರ ಸಿದ್ಧಾ

ಗಮನಂ ಚೈವ ಸಾವರ್ಣೇರ್ಜ್ಞಾನಾರ್ಥಂ ಸಿದ್ಧಸೇವಿತೇ ।
ಆಶ್ರಮೇ ಸುಮಹಾಪುಣ್ಯೇ ತ್ರೈಲೋಕ್ಯಾಶ್ಚರ್ಯಕಾರಿಣಿ ॥ ೯ ॥

ಏತದ್ಧಿ ಬ್ರಹ್ಮಖಂಡಂ ಹಿ ಶ್ರುತಂ ಪಾಪವಿನಾಶನಂ ।
ತತಃ ಸಾವರ್ಣಿಸಂವಾದೋ ನಾರದಸ್ಯ ಸಮೀರಿತಃ ॥ ೧೦ ॥

ಕೃಷ್ಣಮಾಹಾತ್ಮ್ಯಸಂಯುಕ್ತೋ ನಾನಾಖ್ಯಾನಕಥೋತ್ತರಂ ।
ಪ್ರಕೃತೇರಂಶಭೂತಾನಾಂ ಕಲಾನಾಂ ಚಾಪಿ ವರ್ಣಿತಂ ॥ ೧೧ ॥

ಮಾಹಾತ್ಮ್ಯಂ ಪೂಜನಾದ್ಯಂ ಚ ವಿಸ್ತರೇಣ ಯಥಾಸ್ಥಿತಂ ।
ಏತತ್ಪ್ರಕೃತಿಖಂಡಂ ಹಿ ಶ್ರುತಂ ಭೂತಿವಿಧಾಯಕಂ ॥ ೧೨ ॥

ಗಣೇಶಜನ್ಮಸಂಪ್ರಶ್ನಃ ಸಪುಣ್ಯಕಮಹಾವ್ರತಂ ।
ಪಾರ್ವತ್ಯಾಃ ಕಾರ್ತಿಕೇಯೇನ ಸಹ ವಿಘ್ನೇಶಸಂಭವಂ ॥ ೧೩ ॥

---

ಶ್ರಿತವು, ಅತ್ಯಂತ ಪುಣ್ಯಕರವು, ತ್ರೈಲೋಕ್ಯಾಶ್ಚರ್ಯಕಾರಿಯೂ, ಆಗಿರುವ ಸಾವರ್ಣಿಮನುಗಳ ಆಶ್ರಮಕ್ಕೆ ಅವರನ್ನು ನೋಡಲು ಮರೀಚಿ ನಾರದರಿಬ್ಬರು ಹೊರಟುದು.

ಇವುಗಳನ್ನೊಳಗೊಂಡಿರುವುದು ಬ್ರಹ್ಮಖಂಡ. ಇದರ ಶ್ರವಣಾದಿಗಳಿಂದ ಪಾಪವು ಪರಿಹಾರವಾಗುವುದು.

## ಪ್ರಕೃತಿಖಂಡ

೧೦-೧೨. ನಾರದ ಸಾವರ್ಣಿ ಸಂವಾದ, ಕೃಷ್ಣಮಾಹಾತ್ಮ್ಯಗರ್ಭಿತವಾದ ನಾನಾಕಥೆಗಳು, ಪ್ರಕೃತ್ಯಂಶಕಲೆಗಳ ನಿರೂಪಣೆ, ಪೂಜೆ ಮುಂತಾದುವು, ಮಾಹಾತ್ಮ್ಯ ಇವುಗಳು ಭೂತಿವಿಧಾಯಕವಾದ ಪ್ರಕೃತಿಖಂಡದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ.

## ವಿಘ್ನೇಶಖಂಡ

೧೩-೧೪. ಗಣೇಶಜನ್ಮವಿಷಯದಲ್ಲಿ ಪ್ರಶ್ನೋತ್ತರ, ಪುಣ್ಯಕರ ಮಹಾವ್ರತ, ಪಾರ್ವತೀದೇವಿಯವರಲ್ಲಿ ಕಾರ್ತಿಕೇಯಸಹಿತ ವಿಘ್ನೇಶನ ಉತ್ಪತ್ತಿ,

ಚರಿತಂ ಕಾರ್ತವೀರಸ್ಯ ಜಾಮದಗ್ನ್ಯಸ್ಯ ಚಾದ್ಭುತಂ ।
ವಿವಾದಃ ಸುಮಹಾನಾಸೀಜ್ಜಾಮದಗ್ನ್ಯಗಣೇಶಯೋಃ ॥ ೧೪ ॥

ಏತದ್ವಿಘ್ನೇಶಖಂಡಂ ಹಿ ಸರ್ವವಿಘ್ನವಿನಾಶನಂ ।
ಶ್ರೀಕೃಷ್ಣಜನ್ಮಸಂಪ್ರಶ್ನೋ ಜನ್ಮಾಖ್ಯಾನಂ ತತೋದ್ಭುತಂ ॥ ೧೫ ॥

ಗೋಕುಲೇ ಗಮನಂ ಪಶ್ಚಾತ್ಪೂತನಾದಿವಧಾದ್ಭುತಃ ।
ಬಾಲಕೌಮಾರಜಾ ಲೀಲಾ ವಿವಿಧಾಸ್ತತ್ರ ವರ್ಣಿತಾಃ ॥ ೧೬ ॥

ರಾಸಕ್ರೀಡಾ ಚ ಗೋಪೀಭಿಃ ಶಾರದೀ ಸಮುದಾಹೃತಾ ।
ರಹಸ್ಯೇ ರಾಧಯಾ ಕ್ರೀಡಾ ವರ್ಣಿತಾ ಬಹುವಿಸ್ತರಾ ॥ ೧೭ ॥

ಸಹಾಕ್ರೂರೇಣ ತತ್ಪಶ್ಚಾನ್ಮಥುರಾಗಮನಂ ಹರೇಃ ।
ಕಂಸಾದೀನಾಂ ವಧೇ ವೃತ್ತೇ ಕೃಷ್ಣಸ್ಯ ದ್ವಿಜಸಂಸ್ಕೃತಿಃ ॥ ೧೮ ॥

ಕಾಶ್ಯಸಾಂದೀಪಿನೇಃ ಪಶ್ಚಾದ್ವಿದ್ಯೋಪಾದಾನಮದ್ಭುತಂ ।
ಯವನಸ್ಯ ವಧಃ ಪಶ್ಚಾದ್ದ್ವಾರಕಾಗಮನಂ ಹರೇಃ ॥ ೧೯ ॥

---

ಕಾರ್ತವೀರ್ಯಚರಿತ್ರೆ, ಪರಶುರಾಮನ ಅದ್ಭುತಚರಿತ್ರೆ, ಗಣೇಶ ಪರಶುರಾಮರ ವಿವಾದ ಈ ವಿಷಯಗಳನ್ನೊಳಗೊಂಡಿರುವುದು ಸಕಲವಿಘ್ನನಾಶಕವಾದ ವಿಘ್ನೇಶಖಂಡವು.

## ಕೃಷ್ಣಖಂಡವು

೧೫–೨೦. ಶ್ರೀಕೃಷ್ಣಜನ್ಮವಿಷಯದಲ್ಲಿ ಪ್ರಶ್ನೋತ್ತರ, ಅದ್ಭುತಕೃಷ್ಣಜನ್ಮವೃತ್ತಾಂತ, ಗೋಕುಲಗಮನ, ಅದ್ಭುತಪೂತನಾದಿ ಸಂಹಾರ, ನಾನಾವಿಧ ಬಾಲ್ಯಕೌಮಾರಾದಿ ಲೀಲೆಗಳು, ಗೋಪಿಕಾಸ್ತ್ರೀಯರೊಡನೆ ರಾಸಕ್ರೀಡೆ, ಏಕಾಂತದಲ್ಲಿ ರಾಧಾಕ್ರೀಡೆ, ಅಕ್ರೂರನೊಡನೆ ಶ್ರೀಕೃಷ್ಣನು ಮಧುರೆಗೆ ಬಂದುದು, ಕಂಸಾದಿಗಳ ವಧೆ, ಕೃಷ್ಣನಿಗೆ ಉಪನಯನ, ಸಾಂದೀಪರಲ್ಲಿ ವಿದ್ಯಾಭ್ಯಾಸ, ಯವನ ಸಂಹಾರ, ಕೃಷ್ಣನ ದ್ವಾರಕಾಗಮನ, ನರಕಾಸುರ ವಧೆ ಈ ವಿಷಯ

ನರಕಾದಿವಧಸ್ತತ್ರ ಕೃಷ್ಣೇನ ವಿಹಿತೋದ್ಭುತಃ |
ಕೃಷ್ಣಖಂಡಮಿದಂ ವಿಪ್ರ ನೃಣಾಂ ಸಂಸಾರಖಂಡನಂ || ೨೦ ||

ಪಠಿತಂ ಚ ಶ್ರುತಂ ಧ್ಯಾತಂ ಪೂಜಿತಂ ಚಾಭಿವಂದಿತಂ |
ಇತ್ಯೇತದ್ಬ್ರಹ್ಮವೈವರ್ತಪುರಾಣಂ ಚಾತ್ಯಲೌಕಿಕಂ || ೨೧ ||

ವ್ಯಾಸೋಕ್ತಂ ಚಾದಿಸಂಭೂತಂ ಪಠನ್ಛೃಣ್ವನ್ವಿಮುಚ್ಯತೇ |
ವಿಜ್ಞಾನಾಜ್ಞಾನಶಮನಾದ್ಘೋರಾತ್ಸಂಸಾರಸಾಗರಾತ್ || ೨೨ ||

ಲಿಖಿತ್ವೇದಂ ಚ ಯೋ ದದ್ಯಾನ್ಮಾಘ್ಯಾಂ ಧೇನುಸಮನ್ವಿತಂ |
ಬ್ರಹ್ಮಲೋಕಮವಾಪ್ನೋತಿ ಸ ಮುಕ್ತೋಽಜ್ಞಾನಬಂಧನಾತ್ || ೨೩ ||

---

ಗಳನ್ನೊಳಗೊಂಡಿರುವುದು ಕೃಷ್ಣಖಂಡವು. ಅದು ಮನುಜರಿಗೆ ಶ್ರವಣಾದಿಗಳಿಂದ ಸಂಸಾರವನ್ನು ಹೋಗಲಾಡಿಸಿ ಮುಕ್ತಿಯನ್ನು ಕೊಡುವುದು.

೨೧-೨೨. ಈ ಪುರಾಣವು ಪಠನ, ಶ್ರವಣ, ಧ್ಯಾನ, ಪೂಜೆ, ಅಭಿವಂದನೆಗಳಿಂದ ವಿಲಕ್ಷಣಫಲದಾಯಕವಾಗುವುದು.

ಆದಿಯಲ್ಲಿ ವ್ಯಾಸೋಕ್ತವಾದ ಈ ಬ್ರಹ್ಮವೈವರ್ತಪುರಾಣವನ್ನು ಶ್ರವಣ ಪಠನಮಾಡುವವನು ವಿಪರೀತಜ್ಞಾನ, ಅಜ್ಞಾನಗಳನ್ನು ಪರಿಹರಿಸಿಕೊಂಡು ಘೋರವಾದ ಸಂಸಾರ ಸಾಗರದಿಂದ ಉತ್ತೀರ್ಣನಾಗುವನು.

೨೩. ಈ ಪುರಾಣವನ್ನು ಬರೆದು ಮಾಘ ಶುದ್ಧ ಪೂರ್ಣಿಮೆಯ ದಿವಸ ಅದನ್ನು ಗೋಸಹಿತವಾಗಿ ದಾನ ಮಾಡುವವನು ಅಜ್ಞಾನಬಂಧನದಿಂದ ಬಿಡುಗಡೆಯನ್ನು ಹೊಂದಿ ಬ್ರಹ್ಮಲೋಕವನ್ನು ಹೊಂದುವನು.

**ಯಶ್ಚಾನುಕ್ರಮಣೀಂ ಚಾಪಿ ಪಠೇದ್ವಾ ಶೃಣುಯಾದಪಿ ।**
**ಸೋಽಪಿ ಕೃಷ್ಣಪ್ರಸಾದೇನ ಲಭತೇ ವಾಂಛಿತಂ ಫಲಂ ॥ ೨೪ ॥**

**ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಬ್ರಹ್ಮಪುರಾಣಾನುಕ್ರಮಣೀನಿರೂಪಣಂ ನಾಮ ಏಕೋತ್ತರಶತತಮೋಽಧ್ಯಾಯಃ**

---

೨೪. ಈ ವಿಷಯಾನುಕ್ರಮಣಿಕೆಯನ್ನು ಶ್ರವಣಪಠನಮಾಡುವವನೂ ಸಹ ಕೃಷ್ಣಾನುಗ್ರಹದಿಂದ ಅಪೇಕ್ಷಿಸಿದ ಫಲವೆಲ್ಲವನ್ನೂ ಪಡೆಯುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ಬ್ರಹ್ಮವೈವರ್ತಪುರಾಣವಿಷಯಾನು ಕ್ರಮಣಿಕೆಯ ನಿರೂಪಣವೆಂಬ ನೂರೊಂದನೆಯ ಅಧ್ಯಾಯವು ಮುಗಿದುದು.

## ದ್ವ್ಯುತ್ತರಶತತಮೋಽಧ್ಯಾಯಃ

### ಬ್ರಹ್ಮೋವಾಚ

ಶೃಣು ಪುತ್ರ ಪ್ರವಕ್ಷ್ಯಾಮಿ ಪುರಾಣಂ ಲಿಂಗಸಂಜ್ಞಿತಂ ।
ಪಠತಾಂ ಶೃಣ್ವತಾಂ ಚೈವ ಭುಕ್ತಿಮುಕ್ತಿಪ್ರದಾಯಕಂ ॥ ೧ ॥

ಯಚ್ಚ ಲಿಂಗಾಭಿಧಂ ತಿಷ್ಠನ್ವಹ್ನಿಲಿಂಗೇ ಹರೋಽಭ್ಯಧಾತ್ ।
ಮಹ್ಯಂ ಧರ್ಮಾದಿಸಿದ್ಧ್ಯರ್ಥಮಗ್ನಿಕಲ್ಪಕಥಾಶ್ರಯಂ ॥ ೨ ॥

ತದೇವ ವ್ಯಾಸದೇವೇನ ಭಾಗದ್ವಯಸಮನ್ವಿತಂ ।
ಪುರಾಣಂ ಲಿಂಗಮುದಿತಂ ಬಹ್ವಾಖ್ಯಾನವಿಚಿತ್ರಿತಂ ॥ ೩ ॥

ತದೇಕಾದಶಸಾಹಸ್ರಂ ಹರಮಾಹಾತ್ಮ್ಯಸೂಚಕಂ ।
ಪರಂ ಸರ್ವಪುರಾಣಾನಾಂ ಸಾರಭೂತಂ ಜಗತ್ರಯೇ ॥ ೪ ॥

---

### ನೂರೆರಡನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು—ಪುತ್ರ ! ಶ್ರವಣಪಠನೆಗಳನ್ನು ಮಾಡುವವರಿಗೆ ಭೋಗಮೋಕ್ಷದಾಯಕವಾದ ಲಿಂಗಪುರಾಣವನ್ನು ಹೇಳುವೆನು ಕೇಳು.

೨-೩. ಈಶ್ವರನು ನನಗೆ ಧರ್ಮಾದಿಸಿಧ್ಯರ್ಥವಾಗಿ ವಹ್ನಿಲಿಂಗದಲ್ಲಿ ನಿಂತು ಹೇಳಿದ ಅಗ್ನಿಕಲ್ಪಕಥಾವಿಷಯಕವಾದ ಲಿಂಗಪುರಾಣವನ್ನೇ ವ್ಯಾಸದೇವನು ಬಹೂಪಾಖ್ಯಾನಗಳಿಂದ ಚಿತ್ರಿಸಿ ಭಾಗದ್ವಯಯುಕ್ತವಾದ ಲಿಂಗಪುರಾಣವೆಂಬುದಾಗಿ ರಚಿಸಿರುವನು.

೪. ಆ ಪುರಾಣವು ಹನ್ನೊಂದುಸಾವಿರಗ್ರಂಥಗರ್ಭಿತವಾಗಿದೆ. ಈಶ್ವರನ ಮಾಹಾತ್ಮ್ಯೆಯನ್ನು ವಿಶೇಷವಾಗಿ ಸೂಚಿಸುತ್ತದೆ. ಅದು ಮೂರು ಲೋಕಗಳಲ್ಲಿಯೂ ಉತ್ತಮವಾದ ಸಕಲಪುರಾಣಗಳ ಸಾರಭೂತವಾಗಿದೆ.

ಪುರಾಣೋಪಕ್ರಮೋ ಪ್ರಶ್ನಃ ಸೃಷ್ಟಿಃ ಸಂಕ್ಷೇಪತಃ ಪುರಾ |
ಯೋಗಾಖ್ಯಾನಂ ತತಃ ಪ್ರೋಕ್ತಂ ಕಲ್ಪಾಖ್ಯಾನಂ ತತಃ ಪರಂ || ೫ ||

ಲಿಂಗೋದ್ಭವಸ್ತದರ್ಚಾ ಚ ಕೀರ್ತಿತಾ ಹಿ ತತಃ ಪರಂ |
ಸನತ್ಕುಮಾರಶೈಲಾದಿಸಂವಾದಶ್ಚಾಥ ಪಾವನಃ || ೬ ||

ತತೋ ದಾಧೀಚಚರಿತಂ ಯುಗಧರ್ಮನಿರೂಪಣಂ |
ತತೋ ಭುವನಕೋಶಾಖ್ಯಾ ಸೂರ್ಯಸೋಮಾನ್ವಯಸ್ತತಃ || ೭ ||

ತತಶ್ಚ ವಿಸ್ತರಾತ್ಸರ್ಗಸ್ತ್ರಿಪುರಾಖ್ಯಾನಕಂ ತಥಾ |
ಲಿಂಗಪ್ರತಿಷ್ಠಾ ಚ ತತಃ ಪಶುಪಾಶವಿಮೋಕ್ಷಣಂ || ೮ ||

ಶಿವವ್ರತಾನಿ ಚ ತದಾ ಸದಾಚಾರನಿರೂಪಣಂ |
ಪ್ರಾಯಶ್ಚಿತ್ತಾನ್ಯರಿಷ್ಟಾನಿ ಕಾಶೀಶ್ರೀಶೈಲವರ್ಣನಂ || ೯ ||

ಅಂಧಕಾಖ್ಯಾನಕಂ ಪಶ್ಚಾದ್ವಾರಾಹಚರಿತಂ ಪುನಃ |
ನೃಸಿಂಹಚರಿತಂ ಪಶ್ಚಾಜ್ಜಲಂಧರವಧಸ್ತತಃ || ೧೦ ||

ಶೈವಂ ಸಹಸ್ರನಾಮಾಥ ದಕ್ಷಯಜ್ಞವಿನಾಶನಂ |
ಕಾಮಸ್ಯ ದಹನಂ ಪಶ್ಚಾದ್ಗಿರಿಜಾಯಾಃ ಕರಗ್ರಹಃ || ೧೧ ||

---

## ಪೂರ್ವಭಾಗ

೫-೧೨. ಪ್ರಶ್ನಪೂರ್ವಕ ಸಂಕ್ಷೇಪಸೃಷ್ಟಿಕಥನ, ಯೋಗಾಖ್ಯಾನ, ಕಲ್ಪಾಖ್ಯಾನ, ಲಿಂಗೋದ್ಭವ, ಲಿಂಗಪೂಜೆ, ಸನತ್ಕುಮಾರ ನಂದಿ ಸಂವಾದ, ದಧೀಚಿಚರಿತ್ರೆ, ಯುಗಧರ್ಮ, ಭುವನಕೋಶಾಖ್ಯಾನ, ಸೂರ್ಯಚಂದ್ರವಂಶ, ವಿಸ್ತಾರವಾಗಿ ತ್ರಿಪುರಾಖ್ಯಾನ, ಲಿಂಗಪ್ರತಿಷ್ಠೆ, ಪಶುಪಾಶವಿಮೋಕ್ಷಣೆ, (ಜೀವ ಬಂಧಮೋಕ್ಷ) ಶಿವವ್ರತ, ಸದಾಚಾರ, ಪ್ರಾಯಶ್ಚಿತ್ತ, ಅರಿಷ್ಟ, ಕಾಶೀಶ್ರೀ ಶೈಲವರ್ಣನೆ, ಅಂಧಕಾಸುರಾಖ್ಯಾನ, ವರಾಹಚರಿತ್ರೆ, ನರಸಿಂಹಚರಿತ್ರೆ, ಜಲಂ

ತತೋ ವಿನಾಯಕಾಖ್ಯಾನಂ ನೃಪಾಖ್ಯಾನಂ ಶಿವಸ್ಯ ಚ |
ಉಪಮನ್ಯುಕಥಾ ಚಾಪಿ ಪೂರ್ವಭಾಗ ಇತೀರಿತಃ || ೧೨ ||

ವಿಷ್ಣುಮಾಹಾತ್ಮ್ಯಕಥನಮಂಬರೀಷಕಥಾ ತತಃ |
ಸನತ್ಕುಮಾರನಂದೀಶಸಂವಾದಶ್ಚ ಪುನರ್ಮುನೇ || ೧೩ ||

ಶಿವಮಾಹಾತ್ಮ್ಯಸಂಯುಕ್ತಃ ಸ್ನಾನಯಾಗಾದಿಕಂ ತತಃ |
ಸೂರ್ಯಪೂಜಾವಿಧಿಶ್ಚೈವ ಶಿವಪೂಜಾ ಚ ಮುಕ್ತಿದಾ || ೧೪ ||

ದಾನಾನಿ ಬಹುಧೋಕ್ತಾನಿ ಶ್ರಾದ್ಧಪ್ರಕರಣಂ ತತಃ |
ಪ್ರತಿಷ್ಠಾತಂತ್ರಮುದಿತಂ ತತೋಽಘೋರಸ್ಯ ಕೀರ್ತನಂ || ೧೫ ||

ವಜ್ರೇಶ್ವರೀ ಮಹಾವಿದ್ಯಾ ಗಾಯತ್ರೀಮಹಿಮಾ ತತಃ |
ತ್ರ್ಯಂಬಕಸ್ಯ ಚ ಮಾಹಾತ್ಮ್ಯಂ ಪುರಾಣಶ್ರವಣಸ್ಯ ಚ || ೧೬ ||

ಏವಂ ಚೋಪರಿಭಾಗಸ್ತೇ ಲೈಂಗಸ್ಯ ಕಥಿತೋ ಮಯಾ |
ವ್ಯಾಸೇನ ಹಿ ನಿಬದ್ಧಸ್ಯ ರುದ್ರಮಾಹಾತ್ಮ್ಯಸೂಚಿತಃ || ೧೭ ||

---

ಧರವಧೆ, ಶಿವಸಹಸ್ರನಾಮ, ದಕ್ಷಯಜ್ಞ ವಿಧ್ವಂಸನೆ, ಕಾಮದಹನ, ಗಿರಿಜಾಪಾಣಿಗ್ರಹಣ, ವಿನಾಯಕೋಪಾಖ್ಯಾನ, ನೃಪಾಖ್ಯಾನ, ಶಿವಚರಿತ್ರೆ, ಉಪಮನ್ಯುಕಥೆ ಇವು ಪೂರ್ವಭಾಗದಲ್ಲಿ ಉಕ್ತವಾಗಿವೆ.

## ಉತ್ತರಭಾಗ

೧೩-೧೬. ವಿಷ್ಣುಮಾಹಾತ್ಮ್ಯ, ಅಂಬರೀಷ ಕಥೆ, ಸನತ್ಕುಮಾರ ನಂದೀಶ ಸಂವಾದ, ಶಿವಮಾಹಾತ್ಮ್ಯ, ಸ್ನಾನಯಾಗಾದಿಗಳು, ಸೂರ್ಯ ಪೂಜಾವಿಧಾನ, ಶಿವಪೂಜೆ, ಬಹುವಿಧ ದಾನಗಳು, ಶ್ರಾದ್ಧಪ್ರಕರಣ, ಪ್ರತಿಷ್ಠಾ ತಂತ್ರ, ಅಘೋರಕೀರ್ತನೆ, ವಜ್ರೇಶ್ವರೀಮಹಾವಿದ್ಯೆ, ಗಾಯತ್ರೀ ಮಹಿಮೆ, ತ್ರ್ಯಂಬಕಮಾಹಾತ್ಮ್ಯ, ಪುರಾಣಶ್ರವಣ ಮಹಿಮೆ.

೧೭. ಇವೇ ಲಿಂಗಪುರಾಣದ ಉತ್ತರಭಾಗದ ವಿಷಯಗಳು. ಇದನ್ನು ನಿನಗಾಗಿ ನಾನು ಹೇಳಿದ್ದೇನೆ. ರುದ್ರಮಾಹಾತ್ಮ್ಯೆಯನ್ನು ತಿಳಿಸಲು ಈ ಪುರಾಣವು ವ್ಯಾಸನಿಂದ ರಚಿಸಲ್ಪಟ್ಟಿತು.

ಲಿಖಿತ್ವೈತತ್ಪುರಾಣಂ ತು ತಿಲಧೇನುಸಮನ್ವಿತಂ ।
ಫಾಲ್ಗುಣ್ಯಾಂ ಪೂರ್ಣಿಮಾಯಾಂ ಯೋ ದದ್ಯಾಚ್ಛಕ್ತ್ಯಾ ದ್ವಿಜಾತಯೇ ॥

ಸ ಲಭೇಚ್ಛಿವಸಾಯುಜ್ಯಂ ಜರಾಮರಣವರ್ಜಿತಂ ।
ಯಃ ಪಠೇಚ್ಛೃಣುಯಾದ್ವಾಪಿ ಲೈಂಗಂ ಪಾಪಾಪಹಂ ನರಃ ॥ ೧೯ ॥

ಸ ಭುಕ್ತಭೋಗೋ ಲೋಕೇಸ್ಮಿನ್ನಂತೇ ಶಿವಪುರಂ ವ್ರಜೇತ್ ।
ಲಿಂಗಾನುಕ್ರಮಣೀಮೇತಾಂ ಪಠೇದ್ಯಃ ಶೃಣುಯಾತ್ತಥಾ ॥ ೨೦ ॥

ತಾವುಭೌ ಶಿವಭಕ್ತೌ ತು ಲೋಕದ್ವಿತಯಭೋಗಿನೌ ।
ಜಾಯೇತಾಂ ಗಿರಿಜಾಭರ್ತುಃ ಪ್ರಸಾದಾನ್ನಾತ್ರ ಸಂಶಯಃ ॥ ೨೧ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ಲಿಂಗಪುರಾಣಾನುಕ್ರಮಣೀನಿರೂಪಣಂ ನಾಮ ದ್ವ್ಯುತ್ತರಶತತಮೋಽಧ್ಯಾಯಃ

---

೧೮-೨೧. ಈ ಪುರಾಣವನ್ನು ಬರೆದು ಅದನ್ನು ಎಳ್ಳು, ಹಸುಗಳ ಸಹಿತವಾಗಿ ಫಾಲ್ಗುಣ ಶುಕ್ಲ ಪೂರ್ಣಿಮೆಯ ದಿನ ಭಕ್ತಿಯಿಂದ ದ್ವಿಜರಿಗೆ ದಾನ ಮಾಡುವವನು ಮುಪ್ಪು, ಸಾವಿಲ್ಲದ ಶಿವಸಾಯುಜ್ಯವನ್ನು ಹೊಂದುತ್ತಾನೆ.

ಪಾಪವನ್ನು ನಾಶಪಡಿಸುವ ಲಿಂಗಪುರಾಣವನ್ನು ಭಕ್ತಿಯಿಂದ ಶ್ರವಣ ಪಠನೆಗಳನ್ನು ಮಾಡುವ ಮನುಷ್ಯನು ಈ ಲೋಕದಲ್ಲಿ ಭೋಗಗಳನ್ನನುಭವಿಸಿ ಕೊನೆಯಲ್ಲಿ ಶಿವಲೋಕಕ್ಕೆ ಹೋಗುವನು.

ಈ ಲಿಂಗಪುರಾಣದ ವಿಷಯಾನುಕ್ರಮಣಿಕೆಯನ್ನು ಪಠನಮಾಡುವವನು ಮತ್ತು ಶ್ರವಣಮಾಡುವವನು ಇವರಿಬ್ಬರು ಶಿವಭಕ್ತರೂ, ಗಿರಿಜಾಪತಿಯ ಪ್ರಸಾದದಿಂದ ಇಹಪರಗಳಲ್ಲಿ ಸುಖಭಾಗಿಗಳಾಗುವರು. ಸಂದೇಹವಿಲ್ಲ.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ಲಿಂಗಪುರಾಣವಿಷಯಾನು ಕ್ರಮಣಿಕೆಯ ನಿರೂಪಣವೆಂಬ ನೂರೆರಡನೆಯ ಅಧ್ಯಾಯವು ಮುಗಿದುದು.

# ತ್ರ್ಯುತ್ತರಶತತಮೋಽಧ್ಯಾಯಃ

## ಶ್ರೀಬ್ರಹ್ಮೋವಾಚ

ಶೃಣು ವತ್ಸ ಪ್ರವಕ್ಷ್ಯಾಮಿ ವರಾಹಂ ವೈ ಪುರಾಣಕಂ ।
ಭಾಗದ್ವಯಸಮಾಯುತಂ ಶಶ್ವದ್ವಿಷ್ಣುಮಾಹಾತ್ಮ್ಯಸೂಚಕಂ ॥ ೧ ॥

ಮಾನವಸ್ಯ ತು ಕಲ್ಪಸ್ಯ ಪ್ರಸಂಗಂ ಮತ್ಕೃತಂ ಪುರಾ ।
ನಿಬಬಂಧ ಪುರಾಣೇಽಸ್ಮಿನ್ ಚತುರ್ವಿಂಶಸಹಸ್ರಕೇ ॥ ೨ ॥

ವ್ಯಾಸೋ ಹಿ ವಿದುಷಾಂ ಶ್ರೇಷ್ಠಃ ಸಾಕ್ಷಾನ್ನಾರಾಯಣೋ ಭುವಿ ।
ತತ್ರಾದೌ ಶುಭಸಂವಾದಃ ಸ್ಮೃತೋ ಭೂಮಿವರಾಹಯೋಃ ॥ ೩ ॥

ಅಥಾದಿಕೃತವೃತ್ತಾಂತೇ ರಂಭಸ್ಯ ಚರಿತಂ ತತಃ ।
ದುರ್ಜಯಸ್ಯ ಚ ತತ್ಪಶ್ಚಾಚ್ಛ್ರಾದ್ಧಕಲ್ಪ ಉದೀರಿತಃ ॥ ೪ ॥

---

## ನೂರುಮೂರನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು—ವತ್ಸ! ವಿಷ್ಣುಮಾಹಾತ್ಮ್ಯೆಯನ್ನು ತಿಳಿಸುವ, ಎರಡು ಭಾಗಗಳಾಗಿ ವಿಂಗಡವಾಗಿರುವ, ವರಾಹಪುರಾಣ ವಿಷಯವನ್ನು ಹೇಳುವೆನು ; ಕೇಳು.

೨-೩. ಪೂರ್ವದಲ್ಲಿ ನಾನು ಮಾಡಿದ ಮಾನವಕಲ್ಪಪ್ರಸಂಗವನ್ನು ಸಾಕ್ಷಾನ್ನಾರಾಯಣಾವತಾರನು, ವಿದ್ವಚ್ಛ್ರೇಷ್ಠನೂ ಆದ ವ್ಯಾಸನು ಇಪ್ಪತ್ತು ನಾಲ್ಕುಸಾವಿರಗ್ರಂಥಗಳುಳ್ಳ ಈ ಪುರಾಣದಲ್ಲಿ ಬರೆದಿರುವನು.

## ವರಾಹಪುರಾಣ (ಪ್ರಥಮಭಾಗ)

೪-೮. ಭೂಮಿ ವರಾಹ ಸಂವಾದ, ಆದಿಕೃತಯುಗದ ವೃತ್ತಾಂತ, ರಂಭ ಚರಿತ್ರೆ, ದುರ್ಜಯಚರಿತ್ರೆ, ಶ್ರಾದ್ಧಕಲ್ಪ, ಮಹಾತಪಸ್ಸಿನ ಕಥೆ, ಗೌರ್ಯುತ್ಪತ್ತಿ,

ಮಹಾತಪಸ ಆಖ್ಯಾನಂ ಗೌರ್ಯುತ್ಪತ್ತಿಸ್ತತಃ ಪರಾ ।
ವಿನಾಯಕಸ್ಯ ನಾಗಾನಾಂ ಸೇನಾನ್ಯಾದಿತ್ಯಯೋರಪಿ ॥ ೫ ॥

ಗಣಾನಾಂ ಚ ತಥಾ ದೇವ್ಯಾ ಧನದಸ್ಯ ವೃಷಸ್ಯ ಚ ।
ಆಖ್ಯಾನಂ ಸತ್ಯತಪಸೋ ವ್ರತಾಖ್ಯಾನಸಮನ್ವಿತಂ ॥ ೬ ॥

ಅಗಸ್ತ್ಯಗೀತಾ ತತ್ಪಶ್ಚಾದ್ರುದ್ರಗೀತಾ ಪ್ರಕೀರ್ತಿತಾ ।
ಮಹಿಷಾಸುರವಿಧ್ವಂಸಮಾಹಾತ್ಮ್ಯಂ ಚ ತ್ರಿಶಕ್ತಿಜಂ ॥ ೭ ॥

ಪರ್ವಾಧ್ಯಾಯಸ್ತತಃ ಶ್ವೇತೋಪಾಖ್ಯಾನಂ ಗೋಪ್ರದಾನಕಂ ।
ಇತ್ಯಾದಿಕೃತವೃತ್ತಾಂತಂ ಪ್ರಥಮೋ ದರ್ಶಿತಂ ಮಯಾ ॥ ೮ ॥

ಭಗವದ್ಧರ್ಮಕೇ ಪಶ್ಚಾದ್ವ್ರತತೀರ್ಥಕಥಾನಕಂ ।
ದ್ವಾತ್ರಿಂಶದಪರಾಧಾನಾಂ ಪ್ರಾಯಶ್ಚಿತ್ತಂ ಶರೀರಗಂ ॥ ೯ ॥

ತೀರ್ಥಾನಾಂ ಚಾಪಿ ಸರ್ವೇಷಾಂ ಮಾಹಾತ್ಮ್ಯಂ ಪೃಥಗೀರಿತಂ ।
ಮಥುರಾಯಾ ವಿಶೇಷೇಣ ಶ್ರಾದ್ಧಾದೀನಾಂ ವಿಧಿಸ್ತತಃ ॥ ೧೦ ॥

---

ವಿನಾಯಕ, ನಾಗ, ಸೇನಾನೀ, ಆದಿತ್ಯ, ಗಣ, ದೇವಿ, ಕುಬೇರ ಮತ್ತು ವೃಷ ಇವರ ಚರಿತ್ರೆ, ಸತ್ಯ ತಪಸ್ವಿನ ಉಪಾಖ್ಯಾನ, ವ್ರತಾಖ್ಯಾನ, ಅಗಸ್ತ್ಯಗೀತೆ, ರುದ್ರಗೀತೆ, ಮಹಿಷಾಸುರಸಂಹಾರ, ಶಕ್ತಿತ್ರಯಮಾಹಾತ್ಮ್ಯ, ಪರ್ವಾಧ್ಯಾಯ, ಶ್ವೇತೋಪಾಖ್ಯಾನ, ಗೋಪ್ರದಾನ ಮುಂತಾದ ಕೃತವೃತ್ತಾಂತವು ಪ್ರಥಮ ಭಾಗದಲ್ಲಿ ನಿರೂಪಿಸಲ್ಪಟ್ಟಿದೆ.

## ದ್ವಿತೀಯಭಾಗ

೯-೧೨. ಭಗವದ್ಧರ್ಮ, ವ್ರತತೀರ್ಥಕಥೆ, ಮೂವತ್ತೆರಡಪರಾಧಗಳ ಪ್ರಾಯಶ್ಚಿತ್ತ, ಸಕಲ ತೀರ್ಥಗಳ ಮಾಹಾತ್ಮ್ಯ, ಮಥುರೆಯ ವಿಶೇಷ ಮಹಿಮೆ, ಶ್ರಾದ್ಧವಿಧಾನ, ಯಮಲೋಕವರ್ಣನೆ, ಋಷಿಪುತ್ರಪ್ರಸಂಗದಿಂದ ಕರ್ಮ

ವರ್ಣನಂ ಯಮಲೋಕಸ್ಯ ಋಷಿಪುತ್ರಪ್ರಸಂಗತಃ ।
ವಿಪಾಕಃ ಕರ್ಮಣಾಂ ಚೈವ ವಿಷ್ಣುವ್ರತನಿರೂಪಣಂ ॥ ೧೧ ॥

ಗೋಕರ್ಣಸ್ಯ ಚ ಮಾಹಾತ್ಮ್ಯಂ ಕೀರ್ತಿತಂ ಪಾಪನಾಶನಂ ।
ಇತ್ಯೇವಂ ಪೂರ್ವಭಾಗೋಽಯಂ ಪುರಾಣಸ್ಯ ನಿರೂಪಿತಃ ॥ ೧೨ ॥

ಉತ್ತರೇ ಪ್ರವಿಭಾಗೇ ತು ಪುಲಸ್ತ್ಯ ಕುರುರಾಜಯೋಃ ।
ಸಂವಾದೇ ಸರ್ವತೀರ್ಥಾನಾಂ ಮಾಹಾತ್ಮ್ಯಂ ವಿಸ್ತರಾತ್ಪೃಥಕ್ ॥ ೧೩ ॥

ಅಶೇಷಧರ್ಮಾಶ್ಚಾಖ್ಯಾತಾಃ ಪೌಷ್ಕರಂ ಪುಣ್ಯಪರ್ವ ಚ ।
ಇತ್ಯೇವಂ ತವ ವಾರಾಹಂ ಪ್ರೋಕ್ತಂ ಪಾಪವಿನಾಶನಂ ॥ ೧೪ ॥

ಪಠತಾಂ ಶೃಣ್ವತಾಂ ಚೈವ ಭಗವದ್ಭಕ್ತಿವರ್ಧನಂ ।
ಕಾಂಚನಂ ಗರುಡಂ ಕೃತ್ವಾ ತಿಲಧೇನುಸಮನ್ವಿತಂ ॥ ೧೫ ॥

---

ವಿಪಾಕ, ವಿಷ್ಣುವ್ರತ ನಿರೂಪಣೆ, ಪಾಪನಾಶಕವಾದ ಗೋಕರ್ಣಮಾಹಾತ್ಮ್ಯೆ ಇವು ಈ ಪುರಾಣದ ಪೂರ್ವಭಾಗದ ವಿಷಯಗಳು.

## ಉತ್ತರಭಾಗ

೧೩-೧೪. ಪುಲಸ್ತ್ಯಕುರುರಾಜಸಂವಾದ, ವಿಸ್ತಾರವಾಗಿ ಸಕಲ ತೀರ್ಥಗಳ ಪ್ರತ್ಯೇಕಮಾಹಾತ್ಮ್ಯ, ಅಶೇಷಧರ್ಮ, ಪೌಷ್ಕರಪುಣ್ಯಪರ್ವ ಇವು ಉತ್ತರಭಾಗದ ವಿಷಯಗಳು.

ಪಾಪನಾಶಕವಾದ ವರಾಹಪುರಾಣ ವಿಷಯವು ನಿನಗೆ ಹೇಳಲ್ಪಟ್ಟಿತು.

೧೫-೧೬. ಶ್ರವಣಪಠನೆಗಳನ್ನು ಮಾಡುವವರಿಗೆ ಭಗವದ್ಭಕ್ತಿಯನ್ನು ವೃದ್ಧಿಗೊಳಿಸುವ, ಈ ಪುರಾಣವನ್ನು ಬರೆದು ಅದನ್ನು ಬಂಗಾರದ ಗರುಡ, ಎಳ್ಳು, ಗೋವುಗಳ ಸಹಿತವಾಗಿ ಚೈತ್ರ ಶುಕ್ಲ ಪೂರ್ಣಿಮೆಯ ದಿನ ಭಕ್ತಿಯಿಂದ

ಲಿಖಿತ್ವೈತಚ್ಚ ಯೋ ದದ್ಯಾಚ್ಚೈತ್ರ್ಯಾಂ ವಿಪ್ರಾಯ ಭಕ್ತಿತಃ |
ಸ ಲಭೇದ್ವೈಷ್ಣವಂ ಧಾಮ ದೇವರ್ಷಿಗಣವಂದಿತಃ || ೧೬ ||

ಯೋ ವಾನುಕ್ರಮಣೀಮೇತಾಂ ಶೃಣೋತ್ಯಪಿ ಪಠತ್ಯಪಿ |
ಸೋಽಪಿ ಭಕ್ತಿಂ ಲಭೇದ್ವಿಷ್ಣೌ ಸಂಸಾರೋಚ್ಛೇದಕಾರಿಣೀಂ || ೧೭ ||

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ವರಾಹಪುರಾಣಾನುಕ್ರಮಣೀನಿರೂಪಣಂ ನಾಮ ತ್ರ್ಯುತ್ತರಶತತಮೋಽಧ್ಯಾಯಃ

---

ಬ್ರಾಹ್ಮಣನಿಗೆ ದಾನ ಮಾಡುವವನು ದೇವಋಷಿಗಣಗಳಿಂದ ಸತ್ಕರಿಸಲ್ಪಟ್ಟು ವೈಕುಂಠಲೋಕವನ್ನು ಪಡೆಯುವನು.

೧೭. ಈ ವಿಷಯಾನುಕ್ರಮಣಿಕೆಯನ್ನು ಶ್ರವಣಪಠನೆಮಾಡುವವನೂ ಸಹ ವಿಷ್ಣುವಿನಲ್ಲಿ ಸಂಸಾರಬಂಧನಿವರ್ತಕವಾದ ಭಕ್ತಿಯನ್ನು ಹೊಂದುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ವರಾಹಪುರಾಣವಿಷಯಾನುಕ್ರಮಣಿಕೆಯ ನಿರೂಪಣವೆಂಬ ನೂರುಮೂರನೆಯ ಅಧ್ಯಾಯವು ಮುಗಿದುದು.

# ಚತುರಧಿಕಶತತಮೋಽಧ್ಯಾಯಃ

ಶೃಣು ವತ್ಸ ಪ್ರವಕ್ಷ್ಯಾಮಿ ಪುರಾಣಂ ಸ್ಕಂದಸಂಜ್ಞಕಂ ।
ಯಸ್ಮಿನ್ಪ್ರತಿಪದಂ ಸಾಕ್ಷಾನ್ಮಹಾದೇವೋ ವ್ಯವಸ್ಥಿತಃ ॥ ೧ ॥

ಪುರಾಣೇ ಶತಕೋಟೌ ತು ಯ್ಶೈವಂ ವರ್ಣಿತಂ ಮಯಾ ।
ಲಕ್ಷಂ ತಸ್ಯಾರ್ಥಜಾತಸ್ಯ ಸಾರೋ ವ್ಯಾಸೇನ ಕೀರ್ತಿತಃ ॥ ೨ ॥

ಸ್ಕಂದಾಹ್ವಯಸ್ತತ್ರ ಖಂಡಾಃ ಸಪ್ತೈವ ಪರಿಕಲ್ಪಿತಾಃ ।
ಏಕಾಶೀತಿಸಹಸ್ರಂ ತು ಸ್ಕಾಂದಂ ಸರ್ವಾಘಕೃಂತನಂ ॥ ೩ ॥

ಯಃ ಶೃಣೋತಿ ಪಠೇದ್ವಾಪಿ ಸ ತು ಸಾಕ್ಷಾಚ್ಛಿವಃ ಸ್ಥಿತಃ ।
ಯತ್ರ ಮಾಹೇಶ್ವರಾ ಧರ್ಮಾಃ ಷಣ್ಮುಖೇನ ಪ್ರಕಾಶಿತಾಃ ॥ ೪ ॥

---

## ನೂರುನಾಲ್ಕನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು—ವತ್ಸ! ಪ್ರತಿಯೊಂದು ಪದದಲ್ಲಿಯೂ ಮಹಾದೇವನು ಸಾಕ್ಷಾತ್ತಾಗಿ ಸನ್ನಿಹಿತನಾಗಿರುವ ಸ್ಕಾಂದ ನಾಮಕವಾದ ಪುರಾಣವಿಷಯವನ್ನು ಹೇಳುವೆನು ; ಕೇಳು.

೨-೩. ಶತಕೋಟಿವಿಸ್ತೃತವಾದ ಮೂಲಪುರಾಣದಲ್ಲಿ ನನ್ನಿಂದ ಹೇಳಲ್ಪಟ್ಟಿರುವ, ಶಿವಮಾಹಾತ್ಮ್ಯಸೂಚಕವಾದ ಒಂದುಲಕ್ಷಗ್ರಂಥದ ಸಾರಭೂತವಾದ ಅರ್ಥವು ಸ್ಕಾಂದವೆಂಬ ಪುರಾಣದಲ್ಲಿ ವ್ಯಾಸರಿಂದ ಸಂಗ್ರಹಿಸಲ್ಪಟ್ಟಿದೆ.

ಅದರಲ್ಲಿ ಏಳು ಖಂಡಗಳು, ಒಟ್ಟಿನಲ್ಲಿ ಎಂಬತ್ತೊಂದುಸಾವಿರಗ್ರಂಥಗಳೂ ಸಹ ಇವೆ. ಅದು ಸಕಲಪಾಪಪರಿಹಾರಕವು.

೪-೬. ಆ ಸ್ಕಾಂದಪುರಾಣವನ್ನು ಶ್ರವಣಪಠನೆ ಮಾಡುವವನು ಸಾಕ್ಷಾಚ್ಛಿವನ ಪರಮಾನುಗ್ರಹಕ್ಕೆ ಪಾತ್ರನಾಗಿ ಅವನ ಸಾಯುಜ್ಯವನ್ನು ಪಡೆಯುವನು.

ಕಲ್ಪೇ ತತ್ಪುರುಷೇ ವೃತ್ತಾಃ ಸರ್ವಸಿದ್ಧಿವಿಧಾಯಕಾಃ |
ತಸ್ಯ ಮಾಹೇಶ್ವರಶ್ಚಾಥ ಖಂಡಃ ಪಾಪಪ್ರಣಾಶನಃ || ೫ ||

ಕಿಂಚಿನ್ನ್ಯೂನಾರ್ಕಸಾಹಸ್ರೋ ಬಹುಪುಣ್ಯೋ ಬೃಹತ್ಕಥಃ |
ಸುಚರಿತ್ರಶತೈರ್ಯುಕ್ತಃ ಸ್ಕಂದಮಾಹಾತ್ಮ್ಯಸೂಚಕಃ || ೬ ||

ಯತ್ರ ಕೇದಾರಮಾಹಾತ್ಮ್ಯೇ ಪುರಾಣೋಪಕ್ರಮಃ ಪುರಾ |
ದಕ್ಷಯಜ್ಞಕಥಾ ಪಶ್ಚಾಚ್ಛಿವಲಿಂಗಾರ್ಚನೇ ಫಲಂ || ೭ ||

ಸಮುದ್ರಮಥನಾಖ್ಯಾನಂ ದೇವೇಂದ್ರಚರಿತಂ ತತಃ |
ಪಾರ್ವತ್ಯಾಃ ಸಮುಪಾಖ್ಯಾನಂ ವಿವಾಹಸ್ತದನಂತರಂ || ೮ ||

ಕುಮಾರೋತ್ಪತ್ತಿಕಥನಂ ತತಸ್ತಾರಕಸಂಗರಃ |
ತತಃ ಪಾಶುಪತಾಖ್ಯಾನಂ ಚಂಡಾಖ್ಯಾನಸಮನ್ವಿತಂ || ೯ ||

ದ್ಯೂತಪ್ರವರ್ತನಾಖ್ಯಾನಂ ನಾರದೇನ ಸಮಾಗಮಃ |
ತತಃ ಕುಮಾರಮಾಹಾತ್ಮ್ಯೇ ಪಂಚತೀರ್ಥಕಥಾನಕಂ || ೧೦ ||

---

ಆ ಪುರಾಣದ ಮೊದಲನೆಯ ಖಂಡಕ್ಕೆ ಮಾಹೇಶ್ವರಖಂಡವೆಂದು ಹೆಸರು. ಅದರಲ್ಲಿ ಸಕಲಸಿದ್ಧಿದಾಯಕವಾದ ತತ್ಪುರುಷಕಲ್ಪದಲ್ಲಿ ನಡೆದ ಮಾಹೇಶ್ವರ ಧರ್ಮಗಳು ಷಣ್ಮುಖನಿಂದ ಪ್ರಕಾಶಿಸಲ್ಪಟ್ಟವೆ.

ಶ್ರವಣಾದಿಗಳಿಂದ ಸಕಲಪಾಪವನ್ನೂ ಪರಿಹರಿಸುವ, ಆ ಗ್ರಂಥದಲ್ಲಿ ಗರ್ಭಿತವಾಗಿರುವ, ಸ್ವಲ್ಪಕಮ್ಮಿ ಹನ್ನೆರಡುಸಾವಿರಗ್ರಂಥಗಳಲ್ಲಿ ನೂರಾರು ಸುಚರಿತ್ರೆಗಳು ಮತ್ತು ಸ್ಕಂದಮಾಹಾತ್ಮ್ಯಸೂಚಕವಾದ ಶ್ರವಣಾದಿಗಳಿಂದ ಬಹುಪುಣ್ಯವನ್ನುಂಟುಮಾಡುವ, ಬೃಹತ್ಕಥೆ ಇವುಗಳು ನಿರೂಪಿತವಾಗಿವೆ.

ಧರ್ಮವರ್ಮನೃಪಾಖ್ಯಾನಂ ನದೀಸಾಗರಕೀರ್ತನಂ ।
ಇಂದ್ರದ್ಯುಮ್ನಕಥಾ ಪಶ್ಚಾನ್ನಾಡೀಜಂಘಕಥಾನ್ವಿತಂ ॥ ೧೧ ॥

ಪ್ರಾದುರ್ಭಾವಸ್ತತೋ ಮಹ್ಯಾಃ ಕಥಾ ದಮನಕಸ್ಯ ಚ ।
ಮಹೀಸಾಗರಸಂಯೋಗಃ ಕುಮಾರೇಶಕಥಾ ತತಃ ॥ ೧೨ ॥

ತತಸ್ತಾರಕಯುದ್ಧಂ ಚ ನಾನಾಖ್ಯಾನಸಮನ್ವಿತಂ ।
ವಧಶ್ಚ ತಾರಕಸ್ಯಾಥ ಪಂಚಲಿಂಗನಿವೇಶನಂ ॥ ೧೩ ॥

ದ್ವೀಪಾಖ್ಯಾನಂ ತತಃ ಪುಣ್ಯಮೂರ್ಧ್ವಲೋಕವ್ಯವಸ್ಥಿತಿಃ ।
ಬ್ರಹ್ಮಾಂಡಸ್ಥಿತಿಮಾನಂ ಚ ವರ್ಕರೇಶಕಥಾನಕಂ ॥ ೧೪ ॥

ಮಹಾಕಾಲಸಮುದ್ಭೂತಿಃ ಕಥಾ ಚಾಸ್ಯ ಮಹಾದ್ಭುತಾ ।
ವಾಸುದೇವಸ್ಯ ಮಾಹಾತ್ಮ್ಯಂ ಕೋಟಿತೀರ್ಥಂ ತತಃ ಪರಂ ॥ ೧೫ ॥

---

## ಸ್ಕಾಂದಪುರಾಣ (ಮಾಹೇಶ್ವರಖಂಡ)

೭-೧೫. ಆದಿಯಲ್ಲಿ ಕೇದಾರಮಾಹಾತ್ಮ್ಯ, ದಕ್ಷಯಜ್ಞಕಥೆ, ಶಿವಲಿಂಗಾರ್ಚನೆಯ ಫಲ, ಸಮುದ್ರಮಥನಾಖ್ಯಾನ, ದೇವೇಂದ್ರಚರಿತ್ರೆ, ಪಾರ್ವತಿಯ ಉಪಾಖ್ಯಾನ, ವಿವಾಹ, ಕುಮಾರೋತ್ಪತ್ತಿ, ತಾರಕಯುದ್ಧ, ಪಾಶುಪತಾಖ್ಯಾನ, ಚಂಡಾಖ್ಯಾನ, ದ್ಯೂತಪ್ರವರ್ತನಾಖ್ಯಾನ, ನಾರದ ಸಮಾಗಮ, ಕುಮಾರ ಮಾಹಾತ್ಮ್ಯ, ಪಂಚತೀರ್ಥಕಥೆ, ಧರ್ಮವರ್ಮರಾಜಚರಿತ್ರೆ, ನದೀಸಾಗರ ಕೀರ್ತನೆ, ಇಂದ್ರದ್ಯುಮ್ನಕಥೆ, ನಾಡೀಜಂಘಕಥೆ, ಮಹೀಪ್ರಾದುರ್ಭಾವ, ದಮನಕಕಥೆ, ಮಹೀಸಾಗರಸಂಯೋಗ, ಕುಮಾರೇಶಕಥೆ, ನಾನಾಖ್ಯಾನಸಹಿತ ತಾರಕಯುದ್ಧ, ಅವನ ಸಂಹಾರ, ಪಂಚಲಿಂಗನಿವೇಶನ, ದ್ವೀಪಾಖ್ಯಾನ, ಊರ್ಧ್ವಲೋಕಸ್ಥಿತಿ, ಬ್ರಹ್ಮಾಂಡಸ್ಥಿತಿ, ಮಾನ, ವರ್ಕರೇಶಕಥೆ, ಮಹಾಕಾಲ

ನಾನಾತೀರ್ಥಸಮಾಖ್ಯಾನಂ ಗುಪ್ತಕ್ಷೇತ್ರೇ ಪ್ರಕೀರ್ತಿತಂ ।
ಪಾಂಡವಾನಾಂ ಕಥಾ ಪುಣ್ಯಾ ಮಹಾವಿದ್ಯಾಪ್ರಸಾಧನಂ ॥ ೧೬ ॥

ತೀರ್ಥಯಾತ್ರಾಸಮಾಪ್ತಿಶ್ಚ ಕೌಮಾರಮಿದಮದ್ಭುತಂ ।
ಅರುಣಾಚಲಮಾಹಾತ್ಮ್ಯಂ ಸನಕಬ್ರಹ್ಮಸಂಕಥಾ ॥ ೧೭ ॥

ಗೌರೀತಪಃಸಮಾಖ್ಯಾನಂ ತತ್ರತ್ತೀರ್ಥನಿರೂಪಣಂ ।
ಮಾಹಿಷಾಸುರಮಾಖ್ಯಾನಂ ವಧಶ್ಚಾಸ್ಯ ಮಹಾದ್ಭುತಃ ॥ ೧೮ ॥

ದ್ರೋಣಾಚಲೇ ಶಿವಾಸ್ಥಾನಂ ನಿತ್ಯದಾ ಪರಿಕೀರ್ತಿತಂ ।
ಇತ್ಯೇಷ ಕಥಿತಃ ಸ್ಕಾಂದೇ ಖಂಡೋ ಮಾಹೇಶ್ವರೋದ್ಭುತಃ ॥ ೧೯ ॥

ದ್ವಿತೀಯೋ ವೈಷ್ಣವಃ ಖಂಡಸ್ತಸ್ಯಾಖ್ಯಾನಾನಿ ಮೇ ಶೃಣು ।
ಪ್ರಥಮಂ ಭೂಮಿವಾರಾಹಸಮಾಖ್ಯಾನಂ ಪ್ರಕೀರ್ತಿತಂ ॥ ೨೦ ॥

---

ಸಮುದ್ಭವ, ಅವನ ಕಥೆ, ವಾಸುದೇವಮಾಹಾತ್ಮ್ಯ, ಕೋಟಿತೀರ್ಥ, ಗುಪ್ತ ಕ್ಷೇತ್ರದಲ್ಲಿ ನಾನಾತೀರ್ಥಸಮಾಖ್ಯಾನ, ಪಾಂಡವಕಥೆ, ಮಹಾವಿದ್ಯೆಯ ಸಾಧನೆ, ತೀರ್ಥಯಾತ್ರಾಸಮಾಪ್ತಿ, ಅದ್ಭುತಕೌಮಾರವರ್ಣನೆ, ಅರುಣಾಚಲಮಹಾತ್ಮ್ಯ, ಬ್ರಹ್ಮಸನಕ ಸಂವಾದ, ಗೌರಿಯ ತಪಸ್ಸು, ಗೌರೀ ತೀರ್ಥನಿರೂಪಣೆ, ಮಹಿಷಾಸುರ ಕಥೆ, ಅವನ ಸಂಹಾರ, ಯಾವಾಗಲೂ ದ್ರೋಣಾಚಲದಲ್ಲಿ ಶಿವಸನ್ನಿಧಾನ, ಈ ವಿಷಯಗಳು ಮಾಹೇಶ್ವರೀಖಂಡದಲ್ಲಿ ಅಡಗಿವೆ.

## ವೈಷ್ಣವಖಂಡ (೨)

೨೦-೪೦. ಭೂವರಾಹಾಖ್ಯಾನ, ಉಚಕಕುಂಭಮಾಹಾತ್ಮ್ಯ, ಕಮಲಾ ಕಥೆ, ಶ್ರೀನಿವಾಸ ಸ್ಥಿತಿ, ಕುಲಾಲಾಖ್ಯಾನ, ಸುವರ್ಣಮುಖರೀಕಥೆ, ನಾನಾಕಥೆಗಳಿಂದ ಸಹಿತವಾದ ಭಾರದ್ವಾಜಕಥೆ, ಮತಂಗಾಂಜನ ಸಂವಾದ, ಪುರುಷೋತ್ತಮಮಾಹಾತ್ಮ್ಯ, ಮಾರ್ಕಂಡೇಯ, ಅಂಬರೀಷರಾಜ, ಇಂದ್ರದ್ಯುಮ್ನ,

ಯತ್ರ ಪ್ರೋಚಕಕುಂಭಸ್ಯ ಮಾಹಾತ್ಮ್ಯಂ ಪಾಪನಾಶನಂ ।
ಕಮಲಾಯಾಃ ಕಥಾ ಪುಣ್ಯಾ ಶ್ರೀನಿವಾಸಸ್ಥಿತಿಸ್ತತಃ ॥ ೨೦ ॥

ಕುಲಾಲಾಖ್ಯಾನಕಂ ಚಾತ್ರ ಸುವರ್ಣಮುಖರೀಕಥಾ ।
ನಾನಾಖ್ಯಾನಸಮಾಯುಕ್ತಾ ಭಾರದ್ವಾಜಕಥಾದ್ಭುತಾ ॥ ೨೧ ॥

ಮತಂಗಾಂಜನಸಂವಾದಃ ಕೀರ್ತಿತಃ ಪಾಪನಾಶನಃ ।
ಪುರುಷೋತ್ತಮಮಾಹಾತ್ಮ್ಯಂ ಕೀರ್ತಿತಂ ಚೋತ್ಕಲೇ ತತಃ ॥ ೨೩ ॥

ಮಾರ್ಕಂಡೇಯಸಮಾಖ್ಯಾನಮಂಬರೀಷಸ್ಯ ಭೂಪತೇಃ ।
ಇಂದ್ರದ್ಯುಮ್ನಸ್ಯಚಾಖ್ಯಾನಂ ವಿದ್ಯಾಪತಿಕಥಾ ಶುಭಾ ॥ ೨೪ ॥

ಜೈಮಿನೇಃ ಸಮುಪಾಖ್ಯಾನಂ ನಾರದಸ್ಯಾಪಿ ವಾಡವ ।
ನೀಲಕಂಠಸಮಾಖ್ಯಾನಂ ನರಸಿಂಹೋಪವರ್ಣನಂ । ॥ ೨೫ ॥

ಅಶ್ವಮೇಧಕಥಾ ರಾಜ್ಞೋ ಬ್ರಹ್ಮಲೋಕಗತಿಸ್ತಥಾ ।
ರಥಯಾತ್ರಾವಿಧಿಃ ಪಶ್ಚಾಜ್ಜನ್ಮಸ್ನಾನವಿಧಿಸ್ತಥಾ ॥ ೨೬ ॥

ದಕ್ಷಿಣಾಮೂರ್ತ್ಯುಪಾಖ್ಯಾನಂ ಗುಂಡಿವ್ಯಾಖ್ಯಾನಕಂ ತತಃ ।
ರಥರಕ್ಷಾವಿಧಾನಂ ಚ ಶಯನೋತ್ಸವಕೀರ್ತನಂ ॥ ೨೭ ॥

---

ವಿದ್ಯಾಪತಿ, ಜೈಮಿನಿ, ನಾರದ, ನೀಲಕಂಠ ಮತ್ತು ನರಸಿಂಹ ಇವರುಗಳ ಕಥೆಗಳು, ಅಶ್ವಮೇಧದಕಥೆ, ರಾಜನ ಬ್ರಹ್ಮಲೋಕಗಮನ, ರಥಯಾತ್ರಾವಿಧಿ, ಜನ್ಮಸ್ನಾನವಿಧಿ, ದಕ್ಷಿಣಾಮೂರ್ತ್ಯುಪಾಖ್ಯಾನ, ಗುಂಡಿವ್ಯಾಖ್ಯಾನ, ರಥರಕ್ಷಾವಿಧಾನ, ಶಯನೋತ್ಸವಕೀರ್ತನೆ, ಶ್ವೇತೋಪಾಖ್ಯಾನ, ಪೃಥೂತ್ಸವ, ಡೋಲೋತ್ಸವ, ಸಂವತ್ಸರ ನಾಮಕ ಭಗವದ್ವ್ರತ, ಉದ್ದಾಲಕೋಪದಿಷ್ಟನಿಷ್ಕಾಮ, ವಿಷ್ಣುಪೂಜೆ, ಯೋಗಸಾಧನೆ, ನಾನಾಯೋಗಗಳು, ದಶಾವತಾರಕಥನ, ಸ್ನಾನಾದಿ

ಶ್ವೇತೋಪಾಖ್ಯಾನಮುತ್ರೋಕ್ತಂ ಪೃಥೂತ್ಸವನಿರೂಪಣಂ ।
ದೋಲೋತ್ಸವೇ ಭಗವತೋ ವ್ರತಂ ಸಾಂವತ್ಸರಾಭಿಧಂ ॥ ೨೮ ॥

ಪೂಜಾ ಚಾಕಾಮಿಕಾ ವಿಷ್ಣೋರುದ್ವಾಲಕ ನಿಯೋಗತಃ ।
ಯೋಗಸಾಧನಮುತ್ರೋಕ್ತಂ ನಾನಾಯೋಗನಿರೂಪಣಂ ॥ ೨೯ ॥

ದಶಾವತಾರಕಥನಂ ಸ್ನಾನಾದಿಪರಿಕೀರ್ತನಂ ।
ತತೋ ಬದರಿಕಾಯಾಶ್ಚ ಮಾಹಾತ್ಮ್ಯಂ ಪಾಪನಾಶನಂ ॥ ೩೦ ॥

ಅಗ್ನ್ಯಾದಿತೀರ್ಥಮಾಹಾತ್ಮ್ಯಂ ವೈನತೇಯಶಿಲಾಭವಂ ।
ಕಾರಣಂ ಭಗವದ್ವಾಸೇ ತೀರ್ಥಂ ಕಾಪಾಲಮೋಚನಂ ॥ ೩೧ ॥

ಪಂಚಧಾರಾಭಿಧಂ ತೀರ್ಥಂ ಮೇರುಸಂಸ್ಥಾಪನಂ ತಥಾ ।
ತತಃ ಕಾರ್ತಿಕಮಾಹಾತ್ಮ್ಯಂ ಮಾಹಾತ್ಮ್ಯಂ ಮದನಾಲಸಂ ॥ ೩೨ ॥

ಧೂಮ್ರಕೇಶಸಮಾಖ್ಯಾನಂ ದಿನಕೃತ್ಯಾನಿ ಕಾರ್ತಿಕೇ ।
ಪಂಚಭೀಷ್ಮವ್ರತಾಖ್ಯಾನಂ ಕೀರ್ತಿತಂ ಭುಕ್ತಿಮುಕ್ತಿದಂ ॥ ೩೩ ॥

ತತೋ ಮಾರ್ಗಸ್ಯ ಮಾಹಾತ್ಮ್ಯೇ ವಿಧಾನಂ ಸ್ನಾನಜಂ ತಥಾ ।
ಪುಂಡ್ರಾದಿಕೀರ್ತನಂ ಚಾತ್ರ ಮಾಲಾಧಾರಣಪುಣ್ಯಕಂ ॥ ೩೪ ॥

---

ವಿಧಾನ, ಪಾಪನಾಶಕಬದರಿಕಾಶ್ರಮಮಾಹಾತ್ಮ್ಯ. ಅಗ್ನ್ಯಾದಿ ತೀರ್ಥಮಾಹಾತ್ಮ್ಯ, ವೈನತೇಯಶಿಲೆಯಲ್ಲಿ ಭಗವದ್ವಾಸಕಾರಣ, ಕಪಾಲಮೋಚನತೀರ್ಥ, ಪಂಚಧಾರಾತೀರ್ಥ, ಮೇರುಸಂಸ್ಥಾಪನೆ, ಕಾರ್ತಿಕಮಾಹಾತ್ಮ್ಯ, ಮದನಾಲಸೆ ಮಾಹಾತ್ಮ್ಯ, ಧೂಮ್ರಕೇಶಸಮಾಖ್ಯಾನ, ಕಾರ್ತಿಕಮಾಸದಲ್ಲಿ ದಿನಕೃತ್ಯಗಳು, ಭೀಷ್ಮಪಂಚಕವ್ರತಾಖ್ಯಾನ, ಅದರ ಫಲ, ಮಾರ್ಗಶೀರ್ಷಮಾಹಾತ್ಮ್ಯ, ಸ್ನಾನ ವಿಧಾನ, ಪುಂಡ್ರಾದಿಕೀರ್ತನೆ, ಮಾಲಾಧಾರಣಪುಣ್ಯ, ಪಂಚಾಮೃತಸ್ನಾನಪುಣ್ಯ,

ಪಂಚಾಮೃತಸ್ನಾನಪುಣ್ಯಂ ಘಂಟಾನಾದಾದಿಜಂ ಫಲಂ |
ನಾನಾಪುಷ್ಪಾರ್ಚನಫಲಂ ತುಲಸೀದಲಜಂ ಫಲಂ || ೩೫ ||

ನೈವೇದ್ಯಸ್ಯ ಚ ಮಾಹಾತ್ಮ್ಯಂ ಹರಿವಾಸರಕೀರ್ತನಂ |
ಅಖಂಡೈಕಾದಶೀಪುಣ್ಯಂ ತಥಾ ಜಾಗರಣಸ್ಯ ಚ || ೩೬ ||

ಯಸ್ಯೋತ್ಸವವಿಧಾನಂ ಚ ನಾಮಮಾಹಾತ್ಮ್ಯಕೀರ್ತನಂ |
ಧ್ಯಾನಾದಿಪುಣ್ಯಕಥನಂ ಮಾಹಾತ್ಮ್ಯಂ ಮಥುರಾಭವಂ || ೩೭ ||

ಮಥುರಾತೀರ್ಥಮಾಹಾತ್ಮ್ಯಂ ಪೃಥಗುಕ್ತಂ ತತಃ ಪರಂ |
ವನಾನಾಂ ದ್ವಾದಶಾನಾಂ ಚ ಮಾಹಾತ್ಮ್ಯಂ ಕೀರ್ತಿತಂ ತತಃ || ೩೮ ||

ಶ್ರೀಮದ್ಭಾಗವತಸ್ಯಾತ್ರ ಮಾಹಾತ್ಮ್ಯಂ ಕೀರ್ತಿತಂ ಪರಂ |
ವಜ್ರಶಾಂಡಿಲ್ಯಸಂವಾದೋಽಂತರ್ಲೀಲಾಪ್ರಕಾಶಕಃ || ೩೯ ||

ತತೋ ಮಾಘಸ್ಯ ಮಾಹಾತ್ಮ್ಯಂ ಸ್ನಾನದಾನಜಪೋದ್ಭವಂ |
ನಾನಾಖ್ಯಾನಸಮಾಯುಕ್ತಂ ದಶಾಧ್ಯಾಯೈರ್ನಿರೂಪಿತಂ || ೪೦ ||

---

ಘಂಟಾನಾದಫಲ, ನಾನಾಪುಷ್ಪ ತುಲಸೀ ಅರ್ಚನೆಗಳ ಫಲ, ನೈವೇದ್ಯ ಮಾಹಾತ್ಮ್ಯ, ಹರಿವಾಸರ ಕೀರ್ತನೆ, ಅಖಂಡೈಕಾದಶೀ ಪುಣ್ಯ, ಜಾಗರಣೆಯ ಫಲ, ಉತ್ಸವವಿಧಾನ, ನಾಮ ಮಾಹಾತ್ಮ್ಯಕೀರ್ತನೆ, ಧ್ಯಾನಾದಿಪುಣ್ಯಕಥನ, ಮಧುರಾಕ್ಷೇತ್ರ ಅಲ್ಲಿರುವ ತೀರ್ಥ ಇವುಗಳ ಮಾಹಾತ್ಮ್ಯ, ದ್ವಾದಶವನ ಮಾಹಾತ್ಮ್ಯ ಶ್ರೀಮದ್ಭಾಗವತಮಾಹಾತ್ಮ್ಯ ಅಂತರ್ಲೀಲಾಪ್ರಕಾಶಕವಾದ ವಜ್ರ ಶಾಂಡಿಲ್ಯಸಂವಾದ, ಮಾಘಮಾಸದಲ್ಲಿ ಸ್ನಾನದಾನಜಪಾದಿಗಳಮಾಹಾತ್ಮ್ಯ ಇವುಗಳು ನಾನಾಖ್ಯಾನಗಳ ಸಹಿತವಾಗಿ ಹತ್ತು ಅಧ್ಯಾಯಗಳಲ್ಲಿ ನಿರೂಪಿತವಾಗಿವೆ.

ತತೋ ವೈಷ್ಣವಮಾಹಾತ್ಮ್ಯೇ ಶಯ್ಯಾದಾನಾದಿಜಂ ಫಲಂ ।
ಜಲದಾನಾದಿವಿಧಯಃ ಕಾಮಾಖ್ಯಾನಮತಃ ಪರಂ ॥ ೪೧ ॥

ಶ್ರುತದೇವಸ್ಯ ಚರಿತಂ ವ್ಯಾಧೋಪಾಖ್ಯಾನಮದ್ಭುತಂ ।
ತಥಾಽಕ್ಷಯತೃತೀಯಾದೇರ್ವಿಶೇಷಾತ್ಪುಣ್ಯಕೀರ್ತನಂ ॥ ೪೨ ॥

ತತಸ್ತ್ವಯೋಧ್ಯಾಮಾಹಾತ್ಮ್ಯೇ ಚಕ್ರಬ್ರಹ್ಮಾಹ್ವತೀರ್ಥಕೇ ।
ಸುರಾಪಾಪವಿಮೋಕ್ಷಾಖ್ಯೇ ತಥಾಧಾರಸಹಸ್ರಕಂ ॥ ೪೩ ॥

ಸ್ವರ್ಗದ್ವಾರಂ ಚಂದ್ರಹರಿಧರ್ಮಹರ್ಯುಪವರ್ಣನಂ ।
ಸ್ವರ್ಣವೃಷ್ಟೇರುಪಾಖ್ಯಾನಂ ತಿಲೋದಾಸರಯೂಯುತಿಃ ॥ ೪೪ ॥

ಸೀತಾಕುಂಡಂ ಗುಪ್ತಹರಿಸರಯೂಘರ್ಘರಾನ್ವಯಃ ।
ಗೋಪ್ರತಾರಂ ಚ ದುಗ್ಧೋದಂ ಗುರುಕುಂಡಾದಿಪಂಚಕಂ ॥ ೪೫ ॥

ಸೋಮಾರ್ಕಾದೀನಿ ತೀರ್ಥಾನಿ ತ್ರಯೋದಶ ತತಃ ಪರಂ ।
ಗಯಾಕೂಪಸ್ಯ ಮಾಹಾತ್ಮ್ಯಂ ಸರ್ವಾಘವಿನಿವರ್ತಕಂ ॥ ೪೬ ॥

---

೪೧-೪೮. ಅನಂತರ ವೈಷ್ಣವ ಮಾಹಾತ್ಮ್ಯ, ಶಯ್ಯಾದಾನಾದಿ ಫಲ, ಜಲದಾನಾದಿ ವಿಧಿ, ಕಾಮಾಖ್ಯಾನ, ಶ್ರುತದೇವಚರಿತ್ರೆ, ವ್ಯಾಧೋಪಾಖ್ಯಾನ, ಅಕ್ಷಯತೃತೀಯಾದಿ ವಿಶೇಷ ಪುಣ್ಯಕೀರ್ತನೆ, ಅಯೋಧ್ಯಾ ಮಾಹಾತ್ಮ್ಯ, ಸುರಾಪಾನದ ಮಹಾಪಾಪ ವಿಮೋಚಕವಾದ ಚಕ್ರಬ್ರಹ್ಮತೀರ್ಥದಲ್ಲಿ ಆಧಾರ ಸಹಸ್ರ, ಸ್ವರ್ಗದ್ವಾರ, ಚಂದ್ರ, ಹರಿಧರ್ಮ, ಹರಿಗಳ ವರ್ಣನೆ, ಸ್ವರ್ಣವೃಷ್ಟ್ಯು ಪಾಖ್ಯಾನ, ತಿಲೋದಾ ಸರಯೂ ಸಂಗಮ, ಸೀತಾಕುಂಡ, ಗುಪ್ತಹರಿಸರಯೂ ಘರ್ಘರಾನ್ವಯ, ಗೋಪ್ರಕಾರ, ದುಗ್ಧೋದ, ಗುರುಕುಂಡಾದಿ ಪಂಚಕ,

ಮಾಂಡವ್ಯಾಶ್ರಮಪೂರ್ವಾಣಿ ತೀರ್ಥಾನಿ ತದನಂತರಂ ।
ಅಜಿತಾದಿಮಾನಸಾದಿತೀರ್ಥಾನಿ ಗದಿತಾನಿ ಚ　　　　|| ೪೭ ||

ಇತ್ಯೇಷ ವೈಷ್ಣವಃ ಖಂಡೋ ದ್ವಿತೀಯಃ ಪರಿಕೀರ್ತಿತಃ ।
ಅತಃ ಪರಂ ಬ್ರಹ್ಮಖಂಡಂ ಮರೀಚೇ ಶೃಣು ಪುಣ್ಯದಂ　　　　|| ೪೮ ||

ಯತ್ರ ವೈ ಸೇತುಮಾಹಾತ್ಮ್ಯೇ ಫಲಂ ಸ್ನಾನೇ ಕ್ಷಣೋದ್ಭವಂ ।
ಗಾಲವಸ್ಯ ತಪಶ್ಚರ್ಯಾ ರಾಕ್ಷಸಾಖ್ಯಾನಕಂ ತತಃ　　　　|| ೪೯ ||

ಚಕ್ರತೀರ್ಥಾದಿಮಾಹಾತ್ಮ್ಯಂ ದೇವೀಪತ್ತನಸಂಯುತೇ ।
ವೇತಾಲತೀರ್ಥಮಹಿಮಾ ಪಾಪನಾಶಾದಿಕೀರ್ತನಂ　　　　|| ೫೦ ||

ಮಂಗಲಾದಿಕಮಾಹಾತ್ಮ್ಯಂ ಬ್ರಹ್ಮಕುಂಡಾದಿವರ್ಣನಂ ।
ಹನುಮತ್ಕುಂಡಮಹಿಮಾಗಸ್ತ್ಯತೀರ್ಥಭವಂ ಫಲಂ　　　　|| ೫೧ ||

---

ಹದಿಮೂರು ಸೋಮಾರ್ಕಾದಿ ತೀರ್ಥಗಳು, ಸಕಲಪಾಪನಿವರ್ತಕ ಗಯಾಕೂಪ ಮಾಹಾತ್ಮ್ಯ, ಮಾಂಡವ್ಯಾಶ್ರಮಾದಿ ತೀರ್ಥ, ಅಜಿತಾದಿ ಮಾನಸಾದಿ ತೀರ್ಥ ಮಹಿಮೆಗಳು.

ಈ ವಿಷಯಗಳು ಎರಡನೆಯದಾದ ವೈಷ್ಣವಖಂಡದಲ್ಲಿ ಅಡಗಿವೆ. ಮರೀಚಿಯೇ! ಇನ್ನು ಮುಂದೆ ಪುಣ್ಯಪ್ರದವಾದ ಬ್ರಹ್ಮಖಂಡವಿಷಯವನ್ನು ಹೇಳುವೆನು. ಕೇಳು.

### ೩. ಬ್ರಹ್ಮಖಂಡ-ಪೂರ್ವಭಾಗ

೪೯-೬೮. ಸ್ನಾನಫಲಾದಿ ಸೇತುಮಾಹಾತ್ಮ್ಯ, ಗಾಲವತಪಶ್ಚರ್ಯೆ, ರಾಕ್ಷಸಾಖ್ಯಾನ, ದೇವೀಪತ್ತನಸಂಗತಚಕ್ರತೀರ್ಥಾದಿಮಾಹಾತ್ಮ್ಯ, ವೇತಾಲ ತೀರ್ಥಮಹಿಮೆ, ಪಾಪನಾಶಾದಿ ಕೀರ್ತನೆ, ಮಂಗಳಾದಿ ಮಾಹಾತ್ಮ್ಯ, ಬ್ರಹ್ಮ ಕುಂಡಾದಿ ವರ್ಣನೆ, ಹನುಮತ್ಕುಂಡಮಹಿಮೆ, ಅಗಸ್ತ್ಯತೀರ್ಥಫಲ, ರಾಮ ತೀರ್ಥ ಕಥನ, ಲಕ್ಷ್ಮೀತೀರ್ಥನಿರೂಪಣೆ, ಶಂಖಾದಿ ತೀರ್ಥಮಹಿಮೆ, ಸಾಧ್ಯಾ

ರಾಮತೀರ್ಥಾದಿಕಥನಂ ಲಕ್ಷ್ಮೀತೀರ್ಥನಿರೂಪಣಂ ।
ಶಂಖಾದಿತೀರ್ಥಮಹಿಮಾ ತಥಾ ಸಾಧ್ಯಾಮೃತಾದಿಜಃ ॥ ೫೨ ॥

ಧನುಷ್ಕೋಟ್ಯಾದಿಮಾಹಾತ್ಮ್ಯಂ ಕ್ಷೀರಕುಂಡಾದಿಜಂ ತಥಾ ।
ಗಾಯತ್ರ್ಯಾದಿಕತೀರ್ಥಾನಾಂ ಮಾಹಾತ್ಮ್ಯಂ ಚಾತ್ರ ಕೀರ್ತಿತಂ ॥ ೫೩ ॥

ರಾಮನಾಥಸ್ಯ ಮಹಿಮಾ ತತ್ತ್ವಜ್ಞಾನೋಪದೇಶನಂ ।
ಯಾತ್ರಾವಿಧಾನಕಥನಂ ಸೇತೌ ಮುಕ್ತಿಪ್ರದಂ ನೃಣಾಂ ॥ ೫೪ ॥

ಧರ್ಮಾರಣ್ಯಸ್ಯ ಮಾಹಾತ್ಮ್ಯಂ ತತಃ ಪರಮುದೀರಿತಂ ।
ಸ್ಥಾಣುಃ ಸ್ಕಂದಾಯ ಭಗವಾನ್ಯತ್ರ ತತ್ತ್ವಮುಪಾದಿಶತ್ ॥ ೫೫ ॥

ಧರ್ಮಾರಣ್ಯಸುಸಂಭೂತಿಸ್ತತ್ಪುಣ್ಯಪರಿಕೀರ್ತನಂ ।
ಕರ್ಮಸಿದ್ಧೇಃ ಸಮಾಖ್ಯಾನಂ ಋಷಿವಂಶನಿರೂಪಣಂ ॥ ೫೬ ॥

---

ಮೃತಾದಿ ಮಹಿಮೆ, ಧನುಷ್ಕೋಟಿ, ಕ್ಷೀರಕುಂಡಾದಿಗಳ ಮಾಹಾತ್ಮ್ಯ, ಗಾಯತ್ರ್ಯಾದಿ ತೀರ್ಥಮಹಿಮೆ ರಾಮನಾಥಮಹಿಮೆ, ತತ್ತ್ವಜ್ಞಾನೋಪದೇಶ, ಯಾತ್ರಾವಿಧಾನ, ಸೇತುವಿನಲ್ಲಿ ಮುಕ್ತಿ, ರುದ್ರಭಗವಂತನು ಸ್ಕಂಧನಿಗೆ ತತ್ತ್ವೋಪದೇಶ ಮಾಡಿದ ಸ್ಥಳವಾದ ಧರ್ಮಾರಣ್ಯದ ಮಹಿಮೆಯ ಕಥೆ. ಅದರ ವೈಭವ ಮತ್ತು ಪುಣ್ಯಕೀರ್ತನೆ, ಕರ್ಮಸಿದ್ಧಿ ಸಮಾಖ್ಯಾನ; ಋಷಿವಂಶನಿರೂಪಣೆ, ಅಪ್ಸರಸ್ತೀರ್ಥಾದಿ ಮಾಹಾತ್ಮ್ಯ, ವರ್ಣಾಶ್ರಮಧರ್ಮತತ್ತ್ವನಿರೂಪಣೆ, ಅಂತರಿಕ್ಷಸ್ಥಾನ ವಿಭಾಗ, ಬಕುಳಾರ್ಕಕಥೆ, ಛತ್ರಾ, ನಂದಾ, ಶಾಂತಾ, ಶ್ರೀಮಾತಾ, ಮತಂಗಿನೀ, ಪುಣ್ಯದಾ ದೇವಿಯವರ ಕ್ಷೇತ್ರ ಮಾಹಾತ್ಮ್ಯ, ಇಂದ್ರೇಶ್ವರಾದಿ ಮಾಹಾತ್ಮ್ಯ, ದ್ವಾರಕಾದಿನಿರೂಪಣೆ, ಲೋಕಾಸುರಸಮಾಖ್ಯಾನ, ಗಂಗಾಕೂಪನಿರೂಪಣೆ, ಶ್ರೀರಾಮಚರಿತ್ರೆ, ಸತ್ಯಮಂದಿರ ವರ್ಣನೆ, ಜೀರ್ಣೋದ್ಧಾರ ಕಥನೆ, ಆಸನಪ್ರತಿಪಾದನೆ, ಜಾತಿಭೇದವರ್ಣನೆ, ಸ್ಮೃತಿಧರ್ಮ

ಅಪ್ಸರಸ್ತೀರ್ಥಮುಖ್ಯಾನಾಂ ಮಾಹಾತ್ಮ್ಯಂ ಯತ್ರ ಕೀರ್ತಿತಂ ।
ವರ್ಣಾನಾಮಾಶ್ರಮಾಣಾಂ ಚ ಧರ್ಮತತ್ತ್ವನಿರೂಪಣಂ　　　　॥ ೫೭ ॥

ದಿವಸ್ಥಾನವಿಭಾಗಶ್ಚ ಬಕುಲಾರ್ಕಕಥಾ ಶುಭಾ ।
ಛತ್ರಾನಂದಾ ತಥಾ ಶಾಂತಾ ಶ್ರೀಮಾತಾ ಚ ಮತಂಗಿನೀ　　　　॥ ೫೮ ॥

ಪುಣ್ಯದಾ ಚ ಸಮಾಖ್ಯಾತಾ ಯತ್ರ ದೇವ್ಯಃ ಸಮಾಸ್ಥಿತಾಃ ।
ಇಂದ್ರೇಶ್ವರಾದಿಮಾಹಾತ್ಮ್ಯಂ ದ್ವಾರಕಾದಿನಿರೂಪಣಂ　　　　॥ ೫೯ ॥

ಲೋಹಾಸುರಸಮಾಖ್ಯಾನಂ ಗಂಗಾಕೂಪನಿರೂಪಣಂ ।
ಶ್ರೀರಾಮಚರಿತಂ ಚೈವ ಸತ್ಯಮಂದಿರವರ್ಣನಂ　　　　॥ ೬೦ ॥

ಜೀರ್ಣೋದ್ಧಾರಸ್ಯ ಕಥನಮಾಸನಪ್ರತಿಪಾದನಂ ।
ಜಾತಿಭೇದಪ್ರಕಥನಂ ಸ್ಮೃತಿಧರ್ಮನಿರೂಪಣಂ　　　　॥ ೬೧ ॥

ತತಸ್ತು ವೈಷ್ಣವಾ ಧರ್ಮಾ ನಾನಾಖ್ಯಾನೈರುದೀರಿತಾಃ ।
ಚಾತುರ್ಮಾಸ್ಯೇ ತತಃ ಪುಣ್ಯೇ ಸರ್ವಧರ್ಮನಿರೂಪಣಂ　　　　॥ ೬೨ ॥

ದಾನಪ್ರಶಂಸಾ ತತ್ಪಶ್ಚಾದ್ವ್ರತಸ್ಯ ಮಹಿಮಾ ತತಃ ।
ತಪಸಶ್ಚೈವ ಪೂಜಾಯಾಃ ಸಚ್ಛಿದ್ರಕಥನಂ ತತಃ　　　　॥ ೬೩ ॥

---

ನಿರೂಪಣೆ, ವೈಷ್ಣವಧರ್ಮವಿಷಯಕ ನಾನಾಖ್ಯಾನಗಳು, ಚಾತುರ್ಮಾಸ್ಯ ಧರ್ಮ, ದಾನಪ್ರಶಂಸೆ, ವ್ರತಮಹಿಮೆ, ತಪಸ್ಸು ಪೂಜೆಗಳ ಛಿದ್ರನಿರೂಪಣೆ, ತದ್ವ್ಯತ್ತಿಭೇದಕಥನ, ಸಾಲಿಗ್ರಾಮನಿರೂಪಣೆ, ಭಾರಕವಧೋಪಾಯ, ವೃಕ್ಷಾರ್ಚಸ್ಸಿನ ಮಹಿಮೆ, ವಿಷ್ಣುಶಾಪ, ವೃಕ್ಷತ್ವಪ್ರಾಪ್ತಿ, ಪಾರ್ವತ್ಯನುತಾಪ, ಈಶ್ವರನ ತಾಂಡವ, ರಾಮನಾಮ ನಿರೂಪಣೆ, ಹರಲಿಂಗ ಪತನ, ಬೈಜವನಕಥೆ,

ತದ್ವ್ಯತ್ತೀನಾಂ ಭಿದಾಖ್ಯಾನಂ ಶಾಲಗ್ರಾಮನಿರೂಪಣಂ ।
ಭಾರಕಸ್ಯ ವಧೋಪಾಯೋ ವೃಕ್ಷಾರ್ಚೋಮಹಿಮಾ ಕಥಾ ॥ ೬೪ ॥

ವಿಷ್ಣೋಃ ಶಾಪಶ್ಚ ವೃಕ್ಷತ್ವಂ ಪಾರ್ವತ್ಯನುತಪಸ್ತತಃ ।
ಹರಸ್ಯ ತಾಂಡವಂ ನೃತ್ಯಂ ರಾಮನಾಮನಿರೂಪಣಂ ॥ ೬೫ ॥

ಹರಸ್ಯ ಲಿಂಗಪತನಂ ಕಥಾ ಪೈಜವನಸ್ಯ ಚ ।
ಪಾರ್ವತೀಜನ್ಮಚರಿತಂ ತಾರಕಸ್ಯ ವಧೋದ್ಭುತಃ ॥ ೬೬ ॥

ಪ್ರಣವೈಶ್ವರ್ಯಕಥನಂ ತಾರಕಾಚರಿತಂ ಪುನಃ ।
ದಕ್ಷಯಜ್ಞಸಮಾಪ್ತಿಶ್ಚ ದ್ವಾದಶಾಕ್ಷರಭೂಷಣಂ ॥ ೬೭ ॥

ಜ್ಞಾನಯೋಗಸಮಾಖ್ಯಾನಂ ಮಹಿಮಾ ದ್ವಾದಶಾಕ್ಷರೇಃ ।
ಶ್ರವಣಾದಿಕಪುಣ್ಯಂ ಚ ಕೀರ್ತಿತಂ ಶರ್ಮದಂ ನೃಣಾಂ ॥ ೬೮ ॥

ತತೋ ಬ್ರಹ್ಮೋತ್ತರೇ ಭಾಗೇ ಶಿವಸ್ಯ ಮಹಿಮಾದ್ಭುತಃ ।
ಪಂಚಾಕ್ಷರಸ್ಯ ಮಹಿಮಾ ಗೋಕರ್ಣಮಹಿಮಾ ತತಃ ॥ ೬೯ ॥

---

ಪಾರ್ವತೀಜನ್ಮಚರಿತ್ರೆ, ಅದ್ಭುತತಾರಕವಧೆ, ಪ್ರಣವ ಮಾಹಾತ್ಮ್ಯ, ತಾರಕಾ ಚರಿತ್ರೆ, ದಕ್ಷಯಜ್ಞ ಸಮಾಪ್ತಿ, ದ್ವಾದಶಾಕ್ಷರ ಮಂತ್ರ, ಜ್ಞಾನಯೋಗ ಸಮಾಖ್ಯಾನ, ದ್ವಾದಶಾಕ್ಷರೀಯಮಹಾತ್ಮ್ಯೆ, ಶ್ರವಣಾದಿ ಫಲ.

## ೩. ಬ್ರಹ್ಮಖಂಡ (ಉತ್ತರಭಾಗ)

೬೯-೭೩. ಶಿವನ ಅದ್ಭುತಮಹಿಮೆ, ಪಂಚಾಕ್ಷರ ಮಹಿಮೆ, ಗೋಕರ್ಣ ಮಹಿಮೆ, ಶಿವರಾತ್ರಿಮಹಿಮೆ, ಪ್ರದೋಷವ್ರತಕೀರ್ತನೆ, ಸೋಮವಾರ ವ್ರತ, ಸೀಮಂತಿನೀ ಕಥೆ, ಭದ್ರಾಯೂತ್ಪತ್ತಿ, ಸದಾಚಾರ, ಶಿವಕವಚ,

ಶಿವರಾತ್ರೇಶ್ಚ ಮಹಿಮಾ ಪ್ರದೋಷವ್ರತಕೀರ್ತನಂ |
ಸೋಮವಾರವ್ರತಂ ಚಾಪಿ ಸೀಮಂತಿನ್ಯಾಃ ಕಥಾನಕಂ || ೭೦ ||

ಭದ್ರಾಯೂತ್ಪತ್ತಿಕಥನಂ ಸದಾಚಾರನಿರೂಪಣಂ |
ಶಿವವರ್ಮಸಮುದ್ದೇಶೋ ಭದ್ರಾಯೂದ್ವಾಹವರ್ಣನಂ || ೭೧ ||

ಭದ್ರಾಯುಮಹಿಮಾ ಚಾಪಿ ಭಸ್ಮಮಾಹಾತ್ಮ್ಯಕೀರ್ತನಂ |
ಶಬರಾಖ್ಯಾನಕಂ ಚೈವ ಉಮಾಮಾಹೇಶ್ವರಂ ವ್ರತಂ || ೭೨ ||

ರುದ್ರಾಕ್ಷಸ್ಯ ಚ ಮಾಹಾತ್ಮ್ಯಂ ರುದ್ರಾಧ್ಯಾಯಸ್ಯ ಪುಣ್ಯಕಂ |
ಶ್ರವಣಾದಿಕಪುಣ್ಯಂ ಚ ಬ್ರಹ್ಮಖಂಡೋಯಮೀರಿತಃ || ೭೩ ||

ಅತಃ ಪರಂ ಚತುರ್ಥಂ ತು ಕಾಶೀಖಂಡಮನುತ್ತಮಂ |
ವಿಂಧ್ಯನಾರದಯೋರ್ಯತ್ರ ಸಂವಾದಃ ಪರಿಕೀರ್ತಿತಃ || ೭೪ ||

ಸತ್ಯಲೋಕಪ್ರಭಾವಶ್ಚಾಗಸ್ತ್ಯಾವಾಸೇ ಸುರಾಗಮಃ |
ಪತಿವ್ರತಾಚರಿತ್ರಂ ಚ ತೀರ್ಥಯಾತ್ರಾಪ್ರಶಂಸನಂ || ೭೫ ||

---

ಭದ್ರಾಯು ವಿವಾಹ, ಭದ್ರಾಯುಮಹಿಮೆ, ಭಸ್ಮಮಾಹಾತ್ಮ್ಯಕೀರ್ತನೆ, ಶಬರಾಖ್ಯಾನ, ಉಮಾಮಾಹೇಶ್ವರವ್ರತ, ರುದ್ರಾಕ್ಷಮಾಹಾತ್ಮ್ಯ, ರುದ್ರಾಧ್ಯಾಯ ಶ್ರವಣಪುಣ್ಯಕಥನೆ ಈ ವಿಷಯಗಳನ್ನೊಳಗೊಂಡಿರುವುದು ಬ್ರಹ್ಮಖಂಡವು.

## ೪. ಕಾಶೀಖಂಡ

೭೪-೯೧. ವಿಂಧ್ಯನಾರದ ಸಂವಾದ, ಸತ್ಯಲೋಕಪ್ರಭಾವ, ಅಗಸ್ತ್ಯಾಶ್ರಮಕ್ಕೆ ದೇವತೆಗಳ ಆಗಮನ, ಪತಿವ್ರತಾ ಚರಿತ್ರೆ, ತೀರ್ಥಯಾತ್ರಾ ಪ್ರಶಂಸೆ, ಸಪ್ತಪುರ್ಯಾಖ್ಯಸಂಯಮಿನೀ ನಿರೂಪಣೆ, ಶಿವಶರ್ಮಬುಧನಿಗೆ ಇಂದ್ರಾಗ್ನಿ ಲೋಕಪ್ರಾಪ್ತಿ, ಅಗ್ನಿಸಮುದ್ಭವ, ವರುಣೋತ್ಪತ್ತಿ, ಗಂಧವತೀ, ಅಲಕಾಪುರೀ,

ತತಶ್ಚ ಸಪ್ತಪುರ್ಯಾಖ್ಯಾ ಸಂಯಮಿನ್ಯಾ ನಿರೂಪಣಂ ।
ಬುಧಸ್ಯ ಚ ತಥೇಂದ್ರಾಗ್ನ್ಯೋರ್ಲೋಕಾಪ್ತಿಃ ಶಿವಶರ್ಮಣಃ ॥ ೭೬ ॥

ಅಗ್ನೇಃ ಸಮುದ್ಭವಶ್ಚೈವ ಕ್ರವ್ಯಾದ್ವರುಣಸಂಭವಃ ।
ಗಂಧವತ್ಯಲಕಾಪುರ್ಯೋರೀಶ್ವರ್ಯಾಶ್ಚ ಸಮುದ್ಭವಃ ॥ ೭೭ ॥

ಚಂದ್ರಾರ್ಕಬುಧಲೋಕಾನಾಂ ಕುಜೇಜ್ಯಾರ್ಕಭುವಾಂ ಕ್ರಮಾತ್ ।
ಮಮ ವಿಷ್ಣೋರ್ಧ್ರುವಸ್ಯಾಪಿ ತಪೋಲೋಕಸ್ಯ ವರ್ಣನಂ ॥ ೭೮ ॥

ಧ್ರುವಲೋಕಕಥಾ ಪುಣ್ಯಾ ಸತ್ಯಲೋಕನಿರೀಕ್ಷಣಂ ।
ಸ್ಕಂದಾಗಸ್ತ್ಯಸಮಾಲಾಪೋ ಮಣಿಕರ್ಣೀಸಮುದ್ಭವಃ ॥ ೭೯ ॥

ಪ್ರಭಾವಶ್ಚಾಪಿ ಗಂಗಾಯಾ ಗಂಗಾನಾಮಸಹಸ್ರಕಂ ।
ವಾರಾಣಸೀಪ್ರಶಂಸಾ ಚ ಭೈರವಾವಿರ್ಭವಸ್ತತಃ ॥ ೮೦ ॥

ದಂಡಪಾಣಿಜ್ಞಾನವಾಪ್ಯೋರುದ್ಭವಃ ಸಮನಂತರಂ ।
ತತಃ ಕಲಾವತ್ಯಾಖ್ಯಾನಂ ಸದಾಚಾರನಿರೂಪಣಂ ॥ ೮೧ ॥

ಬ್ರಹಚಾರಿಸಮಾಖ್ಯಾನಂ ತತಃ ಸ್ತ್ರೀಲಕ್ಷಣಾನಿ ಚ ।
ಕೃತ್ಯಾಕೃತ್ಯವಿನಿರ್ದೇಶೋ ಹ್ಯವಿಮುಕ್ತೇಶವರ್ಣನಂ ॥ ೮೨ ॥

---

ಈಶ್ವರೀ ಇವರ ಉತ್ಪತ್ತಿ, ಚಂದ್ರ, ಸೂರ್ಯ, ಬುಧ, ಕುಜ, ನಕ್ಷತ್ರ, ಸಪ್ತರ್ಷಿ, ವಿಷ್ಣು, ಧ್ರುವ ಇವರ ಲೋಕಗಳ ವರ್ಣನೆ, ತಪೋಲೋಕ ಧ್ರುವಲೋಕ ಕಥೆಗಳು, ಸತ್ಯಲೋಕ ನಿರೂಪಣೆ, ಸ್ಕಂದಾಗಸ್ತ್ಯ ಸಂಭಾಷಣೆ, ಮಣಿಕರ್ಣಿಕೋತ್ಪತ್ತಿ, ಗಂಗಾಪ್ರಭಾವ, ಗಂಗಾಸಹಸ್ರನಾಮ, ವಾರಾಣಸೀ ಪ್ರಶಂಸೆ, ಭೈರವಾವಿರ್ಭಾವ, ದಂಡಪಾಣಿಜ್ಞಾನವಾಪಿಗಳ ಉತ್ಪತ್ತಿ, ಕಲಾವತ್ಯಾಖ್ಯಾನ, ಸದಾಚಾರನಿರೂಪಣೆ, ಬ್ರಹ್ಮಚಾರಿ ಸಮಾಖ್ಯಾನ, ಸ್ತ್ರೀಲಕ್ಷಣ, ಕೃತ್ಯಾಕೃತ್ಯವಿವೇ

ಗೃಹಸ್ಥಯೋಗಿನೋ ಧರ್ಮಾಃ ಕಾಲಜ್ಞಾನಂ ತತಃ ಪರಂ ।
ದಿವೋದಾಸಕಥಾ ಪುಣ್ಯಾ ಕಾಶಿಕಾವರ್ಣನಂ ತತಃ ॥ ೮೩ ॥

ಮಾಯಾಗಣಪತೇಶ್ಚಾಥ ಭುವಿ ಪ್ರಾದುರ್ಭವಸ್ತತಃ ।
ವಿಷ್ಣುಮಾಯಾಪ್ರಪಂಚೋಥ ದಿವೋದಾಸವಿಮೋಕ್ಷಣಂ ॥ ೮೪ ॥

ತತಃ ಪಂಚನದೋತ್ಪತ್ತಿರ್ಬಿಂದುಮಾಧವಸಂಭವಃ ।
ತತೋ ವೈಷ್ಣವತೀರ್ಥಾಖ್ಯಾ ಶೂಲಿನಃ ಕಾಶಿಕಾಗಮಃ ॥ ೮೫ ॥

ಜೈಗೀಷವ್ಯೇನ ಸಂವಾದೋ ಜ್ಯೇಷ್ಠೇಶಾಖ್ಯಾ ಮಹೇಶಿತುಃ ।
ಕ್ಷೇತ್ರಾಖ್ಯಾನಂ ಕಂದುಕೇಶಃ ವ್ಯಾಘ್ರೇಶ್ವರಸಮುದ್ಭವಃ ॥ ೮೬ ॥

ಶೈಲೇಶರತ್ನೇಶ್ವರಯೋಃ ಕೃತ್ತಿವಾಸಸ್ಯ ಚೋದ್ಭವಃ ।
ದೇವತಾನಾಮಧಿಷ್ಠಾನಂ ದುರ್ಗಾಸುರಪರಾಕ್ರಮಃ ॥ ೮೭ ॥

ದುರ್ಗಾಯಾ ವಿಜಯಶ್ಚಾಥ ಓಂಕಾರೇಶಸ್ಯ ವರ್ಣನಂ ।
ಪುನರೋಂಕಾರಮಾಹಾತ್ಮ್ಯಂ ತ್ರಿಲೋಚನಸಮುದ್ಭವಃ ॥ ೮೮ ॥

---

ಚನೆ, ಅವಿಮುಕ್ತೇಶ್ವರ ವರ್ಣನೆ, ಗೃಹಸ್ಥ, ಯೋಗಿಗಳ ಧರ್ಮ, ಕಾಲಜ್ಞಾನ, ದಿವೋದಾಸ ಕಥೆ, ಕಾಶೀ ವರ್ಣನೆ, ಭೂಮಿಯಲ್ಲಿ ಮಾಯಾಗಣಪತಿಯ ಪ್ರಾದುರ್ಭಾವ, ವಿಷ್ಣುಮಾಯಾ ವಿಸ್ತಾರ, ದಿವೋದಾಸವಿಮೋಕ್ಷಣೆ, ಪಂಚನದೋತ್ಪತ್ತಿ, ಬಿಂದುಮಾಧವಾವಿರ್ಭಾವ, ವೈಷ್ಣವತೀರ್ಥಾಖ್ಯಾನ, ಈಶ್ವರನು ಕಾಶಿಗೆ ಬಂದುದು, ಜೈಗೀಷವ್ಯ ಮಹೇಶ್ವರ ಸಂವಾದ, ಕ್ಷೇತ್ರಾಖ್ಯಾನ, ಕಂದುಕೇಶ, ವ್ಯಾಘ್ರೇಶ್ವರ, ಶೈಲೇಶ, ರತ್ನೇಶ್ವರ ಮತ್ತು ಕೃತ್ತಿವಾಸ ಇವರುಗಳ ಉತ್ಪತ್ತಿ, ದೇವತಾಧಿಷ್ಠಾನ, ದುರ್ಗಾಸುರಪರಾಕ್ರಮ, ದುರ್ಗಾವಿಜಯ, ಓಂಕಾರೇಶ್ವರ ವರ್ಣನೆ, ಓಂಕಾರಮಾಹಾತ್ಮ್ಯ, ತ್ರಿಲೋಚನ ಸಮುದ್ಭವ, ಕೇದಾರಾಖ್ಯಾನ,

ಕೇದಾರಾಖ್ಯಾ ಚ ಧರ್ಮೇಶಕಥಾ ವಿಷ್ಣುಭುಜೋದ್ಭವಾ |
ವೀರೇಶ್ವರಸಮಾಖ್ಯಾನಂ ಗಂಗಾಮಾಹಾತ್ಮ್ಯಕೀರ್ತನಂ || ೮೯ ||

ವಿಶ್ವಕರ್ಮೇಶಮಹಿಮಾ ದಕ್ಷಯಜ್ಞೋದ್ಭವಸ್ತಥಾ |
ಸತೀಶಸ್ಯಾಮೃತೇಶಾದೇರ್ಭುಜಸ್ತಂಭಃ ಪರಾಶರೇ || ೯೦ ||

ಕ್ಷೇತ್ರತೀರ್ಥಕದಂಬಶ್ಚ ಮುಕ್ತಿಮಂಡಪಸಂಕಥಾ |
ವಿಶ್ವೇಶವಿಭವಶ್ಚಾಥ ತತೋ ಯಾತ್ರಾಪರಿಕ್ರಮಃ || ೯೧ ||

ಅತಃ ಪರಂ ತ್ವವಂತ್ಯಾಖ್ಯಂ ಶೃಣು ಖಂಡಂ ಚ ಪಂಚಮಂ |
ಮಹಾಕಾಲವನಾಖ್ಯಾನಂ ಬ್ರಹ್ಮಶೀರ್ಷಚ್ಛಿದಾ ತತಃ || ೯೨ ||

ಪ್ರಾಯಶ್ಚಿತ್ತವಿಧಿಶ್ಚಾಗ್ನೇರುತ್ಪತ್ತಿಶ್ಚ ಸುರಾಗಮಃ |
ದೇವದೀಕ್ಷಾ ಶಿವಸ್ತೋತ್ರಂ ನಾನಾಪಾತಕನಾಶನಂ || ೯೩ ||

ಕಪಾಲಮೋಚನಾಖ್ಯಾನಂ ಮಹಾಕಾಲವನಸ್ಥಿತಿಃ |
ತೀರ್ಥಂ ಕನಖಲೇಶಸ್ಯ ಸರ್ವಪಾಪಪ್ರಣಾಶನಂ || ೯೪ ||

---

ಧರ್ಮೇಶಕಥೆ, ವೀರೇಶ್ವರ ಸಮಾಖ್ಯಾನ, ಗಂಗಾಮಾಹಾತ್ಮ್ಯಕೀರ್ತನೆ, ವಿಶ್ವಕರ್ಮೇಶಮಹಿಮೆ, ದಕ್ಷಯಜ್ಞೋದ್ಭವ, ಸತೀಶ ಅಮೃತೇಶಾದಿಗಳ ಭುಜಸ್ತಂಭನ, ಕ್ಷೇತ್ರತೀರ್ಥಸಮೂಹ, ಮುಕ್ತಿಮಂಟಪ ಸಂಕೀರ್ತನೆ, ವಿಶ್ವೇಶವಿಭವ, ಯಾತ್ರಾಪರಿಕ್ರಮ.

### ೫. ಅವಂತೀಖಂಡ

೯೨-೧೪೦. ಮಹಾಕಾಲವನಾಖ್ಯಾನ, ಬ್ರಹ್ಮಶಿರಶ್ಛೇದನೆ, ಪ್ರಾಯಶ್ಚಿತ್ತವಿಧಾನ, ಅಗ್ನ್ಯುತ್ಪತ್ತಿ, ದೇವತಾ ಗಮನ, ದೇವದೀಕ್ಷೆ, ಶಿವಸ್ತೋತ್ರ, ಕಪಾಲಮೋಚನಾಖ್ಯಾನ, ಮಹಾಕಾಲವನಸ್ಥಿತಿ, ಸಕಲ ಪಾಪಪರಿಹಾರಕವಾದ, ಕನಖಲೇಶತೀರ್ಥ, ಅಪ್ಸರಕುಂಡ, ರುದ್ರಸರೋವರ, ಕುಡವೇಶವಿದ್ಯಾಧ್ರಮರ್ಕ

ಕುಂಡಮಪ್ಸರಸಂಜ್ಞಂ ಚ ಸರೋ ರುದ್ರಸ್ಯ ಪುಣ್ಯದಂ ।
ಕುಡನೇಶಂ ಚ ವಿದ್ಯಾಧ್ರಂ ಮರ್ಕಟೇಶ್ವರತೀರ್ಥಕಂ ॥ ೯೫ ॥

ಸ್ವರ್ಗದ್ವಾರಚತುಃಸಿಂಧುತೀರ್ಥಂ ಶಂಕರವಾಪಿಕಾ ।
ಸಂಕರಾರ್ಕಂ ಗಂಧವತೀತೀರ್ಥಂ ಪಾಪಪ್ರಣಾಶನಂ ॥ ೯೬ ॥

ದಶಾಶ್ವಮೇಧಿಕಾನಂಶತೀರ್ಥೇ ಚ ಹರಿಸಿದ್ಧಿದಂ ।
ಪಿಶಾಚಕಾದಿಯಾತ್ರಾ ಚ ಹನುಮತ್ಕವಚೇಶ್ವರೌ ॥ ೯೭ ॥

ಮಹಾಕಾಲೇಶಯಾತ್ರಾ ಚ ವಲ್ಮೀಕೇಶ್ವರತೀರ್ಥಕಂ ।
ಶುಕ್ರೇ ಚ ಪಂಚಮೇ ಚಾಖ್ಯೇ ಕುಶಸ್ಥಲ್ಯಾಃ ಪ್ರದಕ್ಷಿಣಾಃ ॥ ೯೮ ॥

ಅಕ್ರೂರಸಂಜ್ಞಕಂ ತ್ವೇಕಪಾದಂ ಚಂದ್ರಾರ್ಕವೈಭವಂ ।
ಕರಭೇಶಾಖ್ಯತೀರ್ಥಂ ಚ ಲಟುಕೇಶಾದಿತೀರ್ಥಕಂ ॥ ೯೯ ॥

ಮಾರ್ಕಂಡೇಶಂ ಯಜ್ಞವಾಪೀ ಸೋಮೇಶಂ ನರಕಾಂತಕಂ ।
ಕೇದಾರೇಶ್ವರರಾಮೇಶಸೌಭಾಗ್ಯೇಶನರಾರ್ಕಕಂ ॥ ೧೦೦ ॥

ಕೇಶವಾರ್ಕಂ ಶಕ್ತಿಭೇದಂ ಸ್ವರ್ಣಸಾರಮುಖಾನಿ ಚ ।
ಓಂಕಾರೇಶಾದಿತೀರ್ಥಾನಿ ಅಂಧಕಶ್ರುತಿಕೀರ್ತನಂ ॥ ೧೦೧ ॥

---

ಟೇಶ್ವರ ತೀರ್ಥಗಳು, ಸ್ವರ್ಗದ್ವಾರ ಚತುಃಸಿಂಧುತೀರ್ಥ, ಶಂಕರವಾಪಿಕಾ ಸಂಕರಾರ್ಕ, ಗಂಧವತೀ ತೀರ್ಥ ಇವುಗಳ ವರ್ಣನೆ, ದಶಾಶ್ವಮೇಧಿಕಾನಂಶ ತೀರ್ಥ, ಪಿಶಾಚಕಾದಿ ಯಾತ್ರೆ, ಹನುಮತ್ಕವಚ, ಈಶ್ವರ, ಮಹಾಕಾಲೇಶ ಯಾತ್ರೆ, ವಲ್ಮೀಕೇಶ್ವರ ತೀರ್ಥ, ಕುಶಸ್ಥಲೀ ಪ್ರದಕ್ಷಿಣೆ, ಅಕ್ರೂರ, ಏಕಪಾದ, ಚಂದ್ರ ಸೂರ್ಯರುಗಳ ವೈಭವ, ಕರಭೇಶ ತೀರ್ಥ, ಲಟುಕೇಶಾದಿ ತೀರ್ಥ, ಮಾರ್ಕಂಡೇಶ, ಯಜ್ಞವಾಪೀ, ಸೋಮೇಶ, ನರಕಾಂತಕ, ಕೇದಾರೇಶ್ವರ, ರಾಮೇಶ, ಸೌಭಾಗ್ಯೇಶ, ನರಾರ್ಕ, ಕೇಶವಾರ್ಕ, ಶಕ್ತಿಭೇದ, ಸ್ವರ್ಣಸಾರ ಮುಂತಾದುವುಗಳ ಮಹಿಮೆಯ ನಿರೂಪಣೆ, ಓಂಕಾರೇಶಾದಿ ತೀರ್ಥಗಳು.

ಕಾಲಾರಣ್ಯೇ ಲಿಂಗಸಂಖ್ಯಾ ಸ್ವರ್ಣಶೃಂಗಾಭಿಧಾನಕಂ |
ಕುಶಸ್ಥಲ್ಯಾ ಅವಂತ್ಯಾಶ್ಚೋಜ್ಜಯಿನ್ಯಾ ಅಭಿಧಾನಕಂ || ೧೦೨ ||

ಪದ್ಮಾವತೀ ಕುಮುದ್ವತ್ಯಮರಾವತಿಕನಾಮಕಂ |
ವಿಶಾಲಾಪ್ರತಿಕಲ್ಪಾಭಿಧಾನಂ ಚ ಜ್ವರಶಾಂತಿಕಂ || ೧೦೩ ||

ಶಿವನಾಮಾದಿಕಫಲಂ ನಾಗೋದ್ಗೀತಾ ಶಿವಸ್ತುತಿಃ |
ಹಿರಣ್ಯಾಕ್ಷವಧಾಖ್ಯಾನಂ ತೀರ್ಥಂ ಸುಂದರಕುಂಡಕಂ || ೧೦೪ ||

ನೀಲಗಂಗಾಪುಷ್ಕರಾಖ್ಯಂ ವಿಂಧ್ಯವಾಸನತೀರ್ಥಕಂ |
ಪುರುಷೋತ್ತಮಾಭಿಧಾನಂ ತು ತತ್ತೀರ್ಥಂ ಚಾಘನಾಶನಂ || ೧೦೫ ||

ಗೋಮತೀ ವಾಮನಂ ಕುಂಡೋ ವಿಷ್ಣೋರ್ನಾಮಸಹಸ್ರಕಂ |
ವೀರೇಶ್ವರಸರಃ ಕಾಲಭೈರವಸ್ಯ ಚ ತೀರ್ಥಕಂ || ೧೦೬ ||

ಮಹಿಮಾ ನಾಗಪಂಚಮ್ಯಾ ನೃಸಿಂಹಸ್ಯ ಜಯಂತಿಕಾ |
ಕುಟುವೇಶ್ವರಯಾತ್ರಾ ಚ ದೇವಸಾಧಕಕೀರ್ತನಂ || ೧೦೭ ||

ಕರ್ಕರಾಜಾಖ್ಯತೀರ್ಥಂ ಚ ವಿಘ್ನೇಶಾದಿಸುರೋಹನಂ |
ರುದ್ರಕುಂಡಪ್ರಭೃತಿಷು ಬಹುತೀರ್ಥನಿರೂಪಣಂ || ೧೦೮ ||

---

ಅಂಧಕಶ್ರುತಿಕೀರ್ತನೆ, ಕಾಲಾರಣ್ಯದಲ್ಲಿನ ಲಿಂಗಸಂಖ್ಯೆ, ಸ್ವರ್ಣಶೃಂಗಾಭಿಧಾನ, ಕುಶಸ್ಥಲೀ, ಅವಂತಿ, ಉಜ್ಜಯನಿಗಳ ವರ್ಣನೆ, ಪದ್ಮಾವತೀ ಕುಮುದ್ವತಿ, ಅಮರಾವತೀ, ವಿಶಾಲಾ, ಪ್ರತಿಕಲ್ಪಾ ಇವುಗಳ ವಿಚಾರ, ಶಿವನಾಮಾದಿ ಕೀರ್ತನೆಯ ಫಲ, ನಾಗೋಕ್ತ ಶಿವಸ್ತುತಿ, ಹಿರಣ್ಯಾಕ್ಷವಧಾಖ್ಯಾನ, ಸುಂದರ ಕುಂಡತೀರ್ಥ, ನೀಲಗಂಗಾಪುಷ್ಕರ ತೀರ್ಥ, ವಿಂಧ್ಯವಾಸನ ತೀರ್ಥ, ಪುರುಷೋತ್ತಮ ತೀರ್ಥ, ಗೋಮತಿ, ವಾಮನಕುಂಡ, ವಿಷ್ಣುಸಹಸ್ರನಾಮ, ವೀರೇಶ್ವರ ಸರೋವರ, ಕಾಲಭೈರವ ತೀರ್ಥ, ನಾಗಪಂಚಮೀ ಮಾಹಾತ್ಮ್ಯ, ನೃಸಿಂಹ ಜಯಂತೀ ಮಾಹಾತ್ಮ್ಯ, ಕುಟವೇಶ್ವರ ಯಾತ್ರೆ, ದೇವಸಾಧಕ ಕೀರ್ತನೆ,

ಯೋತ್ರಾಷ್ಟತೀರ್ಥಜಾ ಪುಣ್ಯಾ ರೇವಾಮಾಹಾತ್ಮ್ಯಮುಚ್ಯತೇ |
ಧರ್ಮಪುತ್ರಸ್ಯ ವೈರಾಗ್ಯೋನ್ಮಾರ್ಕಂಡೇಯೇನ ಸಂಗಮಃ　　|| ೧೦೯ ||

ಪ್ರಾಗ್ರೀಯೋನುಭವಾಖ್ಯಾನಮಮೃತಾಪರಿಕೀರ್ತನಂ |
ಕಲ್ಪೇಕಲ್ಪೇ ಪೃಥಙ್ನಾಮ ನರ್ಮದಾಯಾಃ ಪ್ರಕೀರ್ತಿತಂ　　|| ೧೧೦ ||

ಸ್ತವಮಾರ್ಷಂ ನಾರ್ಮದಂ ಚ ಕಾಲರಾತ್ರಿಕಥಾ ತತಃ |
ಮಹಾದೇವಸ್ತುತಿಃ ಪಶ್ಚಾತ್ಪೃಥಕ್ಕಲ್ಪ ಕಥಾದ್ಭುತಾ　　|| ೧೧೧ ||

ವಿಶಲ್ಯಾಖ್ಯಾನಕಂ ಪಶ್ಚಾಜ್ಜಾಲೇಶ್ವರಕಥಾ ತಥಾ |
ಗೌರೀವ್ರತಸಮಾಖ್ಯಾನಂ ತ್ರಿಪುರಜ್ವಾಲನಂ ತತಃ　　|| ೧೧೨ ||

ದೇಹಪಾತವಿಧಾನಂ ಚ ಕಾವೇರೀಸಂಗಮಸ್ತತಃ |
ದಾರುತೀರ್ಥಂ ಬ್ರಹ್ಮಾವರ್ತಂ ಯತ್ರೇಶ್ವರಕಥಾನಕಂ　　|| ೧೧೩ ||

ಅಗ್ನಿತೀರ್ಥಂ ರವಿತೀರ್ಥಂ ಮೇಘನಾದಾದಿದಾರುಕಂ |
ದೇವತೀರ್ಥಂ ನರ್ಮದೇಶಂ ಕಪಿಲಾಖ್ಯಂ ಕರಂಜಕಂ　　|| ೧೧೪ ||

---

ಕರ್ಕರಾಜತೀರ್ಥ, ವಿಷ್ಣೋರಾದಿಸುರೋಹನ, ರುದ್ರಕುಂಡಾದಿಗಳಲ್ಲಿನ ಬಹು ತೀರ್ಥಗಳ ವಿಚಾರ, ಅಷ್ಟತೀರ್ಥಯಾತ್ರೆ, ರೇವಾ ಮಾಹಾತ್ಮ್ಯ, ಧರ್ಮಪುತ್ರ ವಿರಕ್ತಮಾರ್ಕಂಡೇಯ ಸಮಾಗಮ, ಪ್ರಳಯಾನುಭವಾಖ್ಯಾನ, ಅಮೃತಾ ಪರಿಕೀರ್ತನೆ, ಪ್ರತಿಕಲ್ಪದಲ್ಲಿಯೂ ನರ್ಮದಾ ನದಿಗೆ ಪ್ರತ್ಯೇಕ ನಾಮ ಕಥನ, ನರ್ಮದಾ ನದಿಯ ಆರ್ಷಸ್ತೋತ್ರ, ಕಾಲರಾತ್ರಿಕಥೆ, ಮಹಾದೇವಸ್ತುತಿ, ಅದ್ಭುತ ಪೃಥುಕಲ್ಪಕಥೆ, ವಿಶಲ್ಯಾಖ್ಯಾನ, ಜಾಲೇಶ್ವರ ಕಥೆ, ಗೌರೀವ್ರತಾಖ್ಯಾನ, ತ್ರಿಪುರದಹನ, ದೇಹಪಾತವಿಧಾನ, ಕಾವೇರೀಸಂಗಮ, ದಾರುತೀರ್ಥ, ಬ್ರಹ್ಮಾವರ್ತ, ಅಗ್ನಿತೀರ್ಥ, ರವಿತೀರ್ಥ, ಮೇಘನಾದಾದಿದಾರುಕ, ದೇವತೀರ್ಥ

ಕುಂಡಲೇಶಂ ಪಿಪ್ಪಲಾದಂ ವಿಮಲೇಶಂ ಚ ಶೂಲಭಿತ್ ।
ಶಚೀಹರಣಮಾಖ್ಯಾನಮಭ್ರಕಸ್ಯ ವಧಸ್ತತಃ ॥ ೧೧೫ ॥

ಶೂಲಭೇದೋದ್ಭವೋ ಯತ್ರ ದಾನಧರ್ಮಾಃ ಪೃಥಗ್ವಿಧಾಃ ।
ಆಖ್ಯಾನಂ ದೀರ್ಘತಪಸ ಋಷ್ಯಶೃಂಗಕಥಾ ತತಃ ॥ ೧೧೬ ॥

ಚಿತ್ರಸೇನಕಥಾ ಪುಣ್ಯಾ ಕಾಶಿರಾಜ್ಯಸ್ಯ ಲಕ್ಷಣಂ ।
ತತೋ ದೇವಶಿಲಾಖ್ಯಾನಂ ಶಬರೀತೀರ್ಥಕಾನ್ವಿತಂ ॥ ೧೧೭ ॥

ವ್ಯಾಧಾಖ್ಯಾನಂ ತತಃ ಪುಣ್ಯಂ ಪುಷ್ಕರಿಣ್ಯರ್ಕತೀರ್ಥಕಂ ।
ಆಪಿತ್ರ್ಯೇಶ್ವರತೀರ್ಥಂ ಚ ಶಕ್ರತೀರ್ಥಂ ಕರೋಟಿಕಂ ॥ ೧೧೮ ॥

ಕುಮಾರೇಶಮಗಸ್ತ್ಯೇಶಮಾನಂದೇಶಂ ಚ ಮಾತೃಜಂ ।
ಲೋಕೇಶಂ ಧನದೇಶಂ ಚ ಮಂಗಲೇಶಂ ಚ ಕಾಮಜಂ ॥ ೧೧೯ ॥

ನಾಗೇಶಂ ಚಾಪಿ ಗೋಪಾರಂ ಗೌತಮಂ ಶಂಖಚೂಡಕಂ ।
ನಾರದೇಶಂ ನಂದಿಕೇಶಂ ವರುಣೇಶ್ವರತೀರ್ಥಕಂ ॥ ೧೨೦ ॥

---

ನರ್ಮದೇಶ, ಕಪಿಲ, ಕರಂಜಕ, ಕುಂಡಲೇಶ, ಪಿಪ್ಪಲಾದ, ವಿಮಲೇಶ ಮತ್ತು ಶೂಲಭಿತ್ ಇವುಗಳ ನಿರೂಪಣೆ, ಶಚೀಹರಣಾಖ್ಯಾನ, ಅಭ್ರಕ ವಧೆ, ಶೂಲ ಭೇದೋದ್ಭವ, ನಾನಾವಿಧದಾನಧರ್ಮಗಳು, ದೀರ್ಘತಪಸ್ಸಿನ ಉಪಾಖ್ಯಾನ, ಋಷ್ಯಶೃಂಗ ಕಥೆ, ಚಿತ್ರಸೇನ ಕಥೆ, ಕಾಶೀರಾಜ್ಯಲಕ್ಷಣ, ದೇವಶಿಲಾಖ್ಯಾನ, ಶಬರೀತೀರ್ಥವರ್ಣನೆ, ವ್ಯಾಧಾಖ್ಯಾನ, ಪುಷ್ಕರಿಣ್ಯರ್ಕತೀರ್ಥ, ಆಪಿತ್ರ್ಯೇಶ್ವರ ತೀರ್ಥ, ಶಕ್ರತೀರ್ಥ, ಕರೋಟಿಕ ಇವುಗಳ ವರ್ಣನೆ, ಕುಮಾರೇಶ, ಅಗಸ್ತ್ಯೇಶ, ಆನಂದೇಶ, ಲೋಕೇಶ, ಧನದೇಶ, ಮಂಗಲೇಶ, ನಾಗೇಶ, ಗೋಪಾರ, ಗೌತಮ, ಶಂಖಚೂಡ, ನಾರದೇಶ, ನಂದಿಕೇಶ, ವರುಣೇಶ್ವರ ಇವರ ತೀರ್ಥಗಳು.

ದಧಿಸ್ಕಂದಾದಿತೀರ್ಥಾನಿ ಹನೂಮಹೇಶ್ವರಂ ತತಃ |
ರಾಮೇಶ್ವರಾದಿತೀರ್ಥಾನಿ ಸೋಮೇಶಂ ಪಿಂಗಲೇಶ್ವರಂ || ೧೨೧ ||

ಋಣಾಮೋಕ್ಷಂ ಕಪಿಲೇಶಂ ಪೂತಿಕೇಶಂ ಜಲೇಶಯಂ |
ಚಂಡಾರ್ಕಂ ಯಮತೀರ್ಥಂ ಚ ಕಾಲ್ಹೋಡೀಶಂ ವನಾದಿಕೇ || ೧೨೨ ||

ನಾರಾಯಣಂ ಚ ಕೋಟೀಶಂ ವ್ಯಾಸತೀರ್ಥಂ ಪ್ರಭಾಸಕಂ |
ನಾಗೇಶಸಂಕರ್ಷಣಕಂ ಪ್ರಶ್ರಯೇಶ್ವರತೀರ್ಥಕಂ || ೧೨೩ ||

ಐರಂಡೀಸಂಗಮಂ ಪುಣ್ಯಂ ಸುವರ್ಣಶಿಲತೀರ್ಥಕಂ |
ಕರಂಜಂ ಕಾಮಹಂ ತೀರ್ಥಂ ಭಾಂಡೀರೋ ರೋಹಿಣೀಭವಂ || ೧೨೪ ||

ಚಕ್ರತೀರ್ಥಂ ಧೌತಪಾಪಂ ಸ್ಕಂದಮಾಂಗಿರಸಾಹ್ವಯಂ |
ಕೋಟಿತೀರ್ಥಮಯೋನ್ಯಾಖ್ಯಮಂಗಾರಾಖ್ಯಂ ತ್ರಿಲೋಚನಂ || ೧೨೫ ||

ಇಂದ್ರೇಶಂ ಕಂಬುಕೇಶಂ ಚ ಸೋಮೇಶಂ ಕೋಹನಂ ಶಕಂ |
ನಾರ್ಮದಂ ಚಾರ್ಕಮಾಗ್ನೇಯಂ ಭಾರ್ಗವೇಶ್ವರಮುತ್ತಮಂ || ೧೨೬ ||

---

ದಧಿಸ್ಕಂದಾದಿ ತೀರ್ಥಗಳು, ಹನೂಮಹೇಶ್ವರ, ರಾಮೇಶ್ವರಾದಿತೀರ್ಥಗಳು, ಸೋಮೇಶ, ಪಿಂಗಲೇಶ್ವರ, ಋಣಾಮೋಕ್ಷ, ಕಪಿಲೇಶ, ಪೂತಿಕೇಶ, ಜಲೇಶಯ, ಚಂಡಾರ್ಕ, ಯಮತೀರ್ಥ, ಕಾಲ್ಹೋಡೀಶ, ನಾರಾಯಣ, ಕೋಟೀಶ, ವ್ಯಾಸತೀರ್ಥ, ಪ್ರಭಾಸ, ನಾಗೇಶ, ಸಂಕರ್ಷಣ, ಪ್ರಶ್ರಯೇಶ್ವರ ತೀರ್ಥಗಳು, ಐರಂಡೀ ಸಂಗಮ, ಸುವರ್ಣಶಿಲತೀರ್ಥ, ಭಾಂಡೀರ, ರೋಹಿಣೀಭವ ತೀರ್ಥ, ಚಕ್ರತೀರ್ಥ, ಧೌತಪಾಪತೀರ್ಥ, ಆಂಗೀರಸ ನಾಮಕ ಸ್ಕಂದ, ಅಯೋನ್ಯಾಖ್ಯ ಕೋಟಿತೀರ್ಥ, ಅಂಗಾರಾಖ್ಯತ್ರಿಲೋಚನ, ಇಂದ್ರೇಶ, ಕಂಬುಕೇಶ, ಸೋಮೇಶ, ಕೋಹನ, ಶಕ, ನಾರ್ಮದ, ಆರ್ಕ, ಆಗ್ನೇಯ, ಭಾರ್ಗ

ಬ್ರಾಹ್ಮಂ ದೈವಂ ಚ ಮಾರ್ಗೇಶಮಾದಿವಾರಾಹಕೇಶ್ವರಂ ।
ರಾಮೇಶಮಥ ಸಿದ್ಧೇಶಮಾಹಲ್ಯಂ ಕಂಕಟೇಶ್ವರಂ ॥ ೧೨೭ ॥

ಶಾಕ್ರಂ ಸೌಮ್ಯಂ ಚ ನಾದೇಶಂ ತೋಯೇಶಂ ರುಕ್ಮಿಣೀಭವಂ ।
ಯೋಜನೇಶಂ ವರಾಹೇಶಂ ದ್ವಾದಶೀಶಿವತೀರ್ಥಕಂ ॥ ೧೨೮ ॥

ಸಿದ್ಧೇಶಂ ಮಂಗಲೇಶಂ ಚ ಲಿಂಗವಾರಾಹತೀರ್ಥಕಂ ।
ಕುಂಡೇಶಂ ಶ್ವೇತವಾರಾಹಂ ಗರ್ಭಾನೇಶಂ ರವೀಶ್ವರಂ ॥ ೧೨೯ ॥

ಶುಕ್ಲಾದೀನಿ ಚ ತೀರ್ಥಾನಿ ಹುಂಕಾರಸ್ವಾಮಿತೀರ್ಥಕಂ ।
ಸಂಗಮೇಶಂ ನಾರಕೇಶಂ ಮೋಕ್ಷಣಂ ಪಂಚಗೋಪಕಂ ॥ ೧೩೦ ॥

ನಾಗಶಾವಂ ಚ ಸಿದ್ಧೇಶಂ ಮಾರ್ಕಂಡಾಕ್ರೂರತೀರ್ಥಕೇ ॥
ಕಾಮೋದಶೂಲಾರೋಪಾಖ್ಯೇ ಮಾಂಡವ್ಯಂ ಗೋಪಕೇಶ್ವರಂ ।
ಕಪಿಲೇಶಂ ಪಿಂಗಲೇಶಂ ಭೂತೇಶಂ ಗಾಂಗಗೌತಮೇ ॥ ೧೩೧ ॥

ಅಶ್ವಮೇಧಂ ಭೃಗುಕಚ್ಛಂ ಕೇದಾರೇಶಂ ಚ ಪಾಪನುತ್ ।
ಕಲಕಲೇಶಂ ಜಾಲೇಶಂ ಶಾಲಗ್ರಾಮಂ ವರಾಹಕಂ ॥ ೧೩೨ ॥

---

ವೇಶ್ವರ, ಬ್ರಾಹ್ಮ, ದೈವ, ಮಾರ್ಗೇಶ, ಆದಿವರಾಹಕೇಶ್ವರ, ರಾಮೇಶ, ಸಿದ್ಧೇಶ, ಆಹಲ್ಯ, ಕಂಕಟೇಶ್ವರ, ಶಾಕ್ರ, ಸೌಮ್ಯ, ನಾದೇಶ, ತೋಯೇಶ, ರುಕ್ಮಿಣೀಭವ, ಯೋಜನೇಶ, ವರಾಹೇಶ, ದ್ವಾದಶೀಶಿವತೀರ್ಥಗಳು, ಸಿದ್ಧೇಶ ಮಂಗಲೇಶ ಸಿದ್ಧ ವರಾಹತೀರ್ಥಗಳು, ಕುಂಡೇಶ, ಶ್ವೇತವರಾಹ, ಗಭಾ‌ನೇಶ, ರವೀಶ್ವರ, ಶುಕ್ಲಮುಂತಾದ ತೀರ್ಥಗಳು, ಹುಂಕಾರಸ್ವಾಮಿತೀರ್ಥ, ಸಂಗಮೇಶ, ನಾರಕೇಶ, ಮೋಕ್ಷಣ, ಪಂಚಗೋಪಕ, ನಾಗಶಾವ, ಸಿದ್ಧೇಶ, ಮಾರ್ಕಂಡ, ಅಕ್ರೂರತೀರ್ಥಗಳು, ಕಾಮೋದ, ಶೂಲಾರೋಪಗಳ ಆಖ್ಯಾನ, ಮಾಂಡವ್ಯ, ಗೋಪಕೇಶ್ವರ, ಕಪಿಲೇಶ, ಪಿಂಗಲೇಶ, ಭೂತೇಶ, ಗಾಂಗ, ಗೌತಮ, ಅಶ್ವಮೇಧ, ಭೃಗಕಚ್ಛ ಕೇದಾರೇಶ, ಕಲಕಲೇಶ, ಜಾಲೇಶ, ಸಾಲ

ಚಂದ್ರಪ್ರಭಾಸಮಾದಿತ್ಯಂ ಶ್ರೀಪತ್ಯಾಖ್ಯಂ ಚ ಹಂಸಕಂ ।
ಮೂಲ್ಯಸ್ಥಾನಂ ಚ ಶೂಲೇಶಂ ದಾಗ್ರಾಯೋಚಿತ್ರದೈವಕಂ ॥ ೧೩೩ ॥

ಶಿಖೀಶಂ ಕೋಟಿತೀರ್ಥಂ ಚ ದಶಕನ್ಯಂ ಸುವರ್ಣಕಂ ।
ಋಣಮೋಕ್ಷಂ ಭಾರಭೂತಿ ಪುಂಖಾಂ ಮುಂಡಿಂ ಚ ಡಿಂಡಿಮಂ ॥ ೧೩೪ ॥

ಆಮಲೇಶಂ ಕಪಾಲೇಶಂ ಶೃಂಗೈರಂಡೀಭವಂ ತತಃ ।
ಕೋಟಿತೀರ್ಥಂ ಲೋಟಣೇಶಂ ಫಲಸ್ತುತಿರತಃಪರಂ ॥ ೧೩೫ ॥

ದೃಮಿಜಂಗಲಮಾಹಾತ್ಮ್ಯೇ ರೋಹಿತಾಶ್ವಕಥಾ ತತಃ ।
ಧುಂಧುಮಾರಸಮಾಖ್ಯಾನಂ ವಧೋಪಾಯಸ್ತತೋಽಸ್ಯ ವಾ ॥ ೧೩೬ ॥

ವಧೋ ಧುಂಧೋಸ್ತತಃ ಪಶ್ಚಾತ್ತತಶ್ಚಿತ್ರವಹೋದ್ಭವಃ ।
ಸಹಿಭಾಸ್ಯ ತತಶ್ಚಂಡೀ ಸಪ್ರಭಾ ಘೋರತೀಶ್ವರಃ ॥ ೧೩೭ ॥

ಕೇದಾರೇಶೋ ಲಕ್ಷತೀರ್ಥಂ ತತೋ ವಿಷ್ಣುಪದೀಭವಂ ।
ಮುಖಾರಂ ಚ್ಯವನಾಂಧಾಸ್ಯಂ ಬ್ರಹ್ಮಣಶ್ಚ ಸರಸ್ತತಃ ॥ ೧೩೮ ॥

---

ಗ್ರಾಮ, ವರಾಹ, ಚಂದ್ರ ಪ್ರಭಾಸ, ಆದಿತ್ಯ, ಶ್ರೀಪತಿ, ಹಂಸ, ಮೂಲ್ಯಸ್ಥಾನ, ಶೂಲೇಶ, ಚಿತ್ರದೈವಕ, ಶಿಖೀಶ, ಕೋಟಿತೀರ್ಥ, ದಶಕನ್ಯ, ಸುವರ್ಣ, ಋಣ ಮೋಕ್ಷ, ಭಾರಭೂತಿ, ಪುಂಖಾ, ಮುಂಡಿ, ಡಿಂಡಿಮ, ಆಮಲೇಶ, ಕಪಾಲೇಶ, ಶೃಂಗ, ಐರಂಡೀಭವ, ಕೋಟಿತೀರ್ಥ, ಲೋಟಣೇಶತೀರ್ಥಗಳು, ಇನ್ನು ಮುಂದೆ ಫಲಸ್ತುತಿ, ದೃಮಿಜಂಗಲಮಾಹಾತ್ಮ್ಯಗಳು, ರೋಹಿತಾಶ್ವಕಥೆ, ಧುಂಧುಮಾರ ಸಮಾಖ್ಯಾನ, ಅವನ ವಧೋಪಾಯ, ಧುಂಧುವಧೆ, ಚಿತ್ರವಹೋತ್ಪತ್ತಿ, ಚಂಡೀ, ಸಪ್ರಭಾ, ಘೋರತೀಶ್ವರ, ಕೇದಾರೇಶ, ಲಕ್ಷತೀರ್ಥ, ವಿಷ್ಣುಪದೀಭವ, ಮುಖಾರ, ಚ್ಯವನಾಂಧಾಸ್ಯ, ಬ್ರಹ್ಮಸರಸ್ಸು, ಚಕ್ರ

ಚಕ್ರಾಖ್ಯಂ ಲಲಿತಾಖ್ಯಾನಂ ತೀರ್ಥಂ ಚ ಬಹುಗೋಮಯಂ ।
ರುದ್ರಾವರ್ತಂ ಚ ಮಾರ್ಕಂಡಂ ತೀರ್ಥಂ ಪಾಪಪ್ರಣಾಶನಂ ॥ ೧೩೯ ॥

ಶ್ರವಣೇಶಂ ಶುದ್ಧಪಟಂ ದೇವಾಂಧಪ್ರೇತತೀರ್ಥಕಂ ।
ಜಿಹ್ವೋದತೀರ್ಥಂ ಸಂಭೂತಿಶಿವೋದ್ಭೇದಂ ಫಲಸ್ತುತಿಃ ॥ ೧೪೦ ॥

ಏಷ ಖಂಡೋ ಹ್ಯವಂತ್ಯಾಖ್ಯಃ ಶೃಣ್ವತಾಂ ಪಾಪನಾಶನಃ ।
ಅತಃ ಪರಂ ನಾಗರಾಖ್ಯಃ ಖಂಡಃ ಷಷ್ಠೋಽಭಿಧೀಯತೇ ॥ ೧೪೧ ॥

ಲಿಂಗೋತ್ಪತ್ತಿಸಮಾಖ್ಯಾನಂ ಹರಿಶ್ಚಂದ್ರಕಥಾ ಶುಭಾ ।
ವಿಶ್ವಾಮಿತ್ರಸ್ಯ ಮಾಹಾತ್ಮ್ಯಂ ತ್ರಿಂಶಕುಸ್ವರ್ಗತಿಸ್ತಥಾ ॥ ೧೪೨ ॥

ಹಾಟಕೇಶ್ವರಮಾಹಾತ್ಮ್ಯೇ ವೃತ್ರಾಸುರವಧಸ್ತಥಾ ।
ನಾಗಬಿಲಂ ಶಂಖತೀರ್ಥಮಚಲೇಶ್ವರವರ್ಣನಂ ॥ ೧೪೩ ॥

---

ತೀರ್ಥವೆಂಬ ತೀರ್ಥಗಳ ಮಹಿಮೆ, ಲಲಿತಾಖ್ಯಾನ, ಲಲಿತಾತೀರ್ಥ, ಬಹುಗೋಮಯ, ರುದ್ರಾವರ್ತ ಮಾರ್ಕಂಡವೆಂಬ ಪಾಪನಾಶಕ ತೀರ್ಥಗಳು, ಶ್ರವಣೇಶ, ಶುದ್ಧಪಟ, ದೇವಾಂಧಪ್ರೇತತೀರ್ಥಗಳು, ಜಿಹ್ವೋದತೀರ್ಥ, ಸಂಭೂತಿ, ಶಿವೋದ್ಭೇದ ತೀರ್ಥಗಳು, ಫಲಸ್ತುತಿ.

೧೪೧. ಈ ವಿಷಯಗಳಡಕವಾಗಿರುವ ಈ ಖಂಡಕ್ಕೆ ಅವಂತೀ ಖಂಡವೆಂದು ಹೆಸರು. ಇನ್ನು ಮುಂದೆ ನಾಗರವೆಂಬ ಆರನೆಯಖಂಡ ವಿಷಯವು ಹೇಳಲ್ಪಡುತ್ತದೆ.

## ೬. ನಾಗರಖಂಡ

೧೪೨-೧೬೭. ಲಿಂಗೋತ್ಪತ್ತಿಕಥನೆ, ಹರಿಶ್ಚಂದ್ರಕಥೆ, ವಿಶ್ವಾಮಿತ್ರ ಮಾಹಾತ್ಮ್ಯ, ತ್ರಿಶಂಕುಸ್ವರ್ಗಗಮನ, ಹಾಟಕೇಶ್ವರಮಾಹಾತ್ಮ್ಯ, ವೃತ್ರಾಸುರವಧೆ, ನಾಗಬಿಲ, ಶಂಖತೀರ್ಥ, ಅಚಲೇಶ್ವರವರ್ಣನೆ, ಆಶ್ಚರ್ಯಕರವಾದ

ಚಮತ್ಕಾರಪುರಾಖ್ಯಾನಂ ಚಮತ್ಕಾರಕರಂ ಪರಂ ।
ಗಯಶೀರ್ಷಂ ಬಾಲಶಾಂಖ್ಯಂ ವಾಲಮಂಡಂ ಮೃಗಾಹ್ವಯಂ ॥ ೧೪೪ ॥

ವಿಷ್ಣುಪಾದಂ ಚ ಗೋಕರ್ಣಂ ಯುಗರೂಪಂ ಸಮಾತ್ರಯಃ ।
ಸಿದ್ಧೇಶ್ವರಂ ನಾಗಸರಃ ಸಪ್ತಾರ್ಷೇಯಂ ಹ್ಯಗಸ್ತ್ಯಕಂ ॥ ೧೪೫ ॥

ಭ್ರೂಣಗರ್ತಂ ನಲೇಶಂ ಚ ಭೈಷ್ಮಂ ವೈಡುರಮರ್ಕಕಂ ।
ಶಾರ್ಮಿಷ್ಠಂ ಸೋಮನಾಥಂ ಚ ದೌರ್ಗ-ಮಾತರ್ಜಕೇಶ್ವರಂ ॥ ೧೪೬ ॥

ಜಾಮದಗ್ನ್ಯವಧಾಖ್ಯಾನಂ ನೈಃಕ್ಷತ್ರಿಯಕಥಾನಕಂ ।
ರಾಮಹ್ರದಂ ನಾಗಪುರಂ ಷಡ್ಲಿಂಗಂ ಚೈವ ಯಜ್ಞಭೂಃ ॥ ೧೪೭ ॥

ಮುಂಡೀರಾದಿತ್ರಿಕಾರ್ಕಂ ಚ ಸತೀಪರಿಣಯಾಹ್ವಯಂ ।
ರುದ್ರಶೀರ್ಷಂ ಚ ಯೋಗೀಶಂ ವಾಲಖಿಲ್ಯಂ ಚ ಗಾರುಡಂ ॥ ೧೪೮ ॥

ಲಕ್ಷ್ಮೀಶಾಪಃ ಸಪ್ತವಿಂಶಸೋಮಪ್ರಸಾದಮೇವ ಚ ।
ಅಂಬಾಬದ್ಧಂ ಪಾಂಡುಕಾಖ್ಯಮಾಗ್ನೇಯಂ ಬ್ರಹ್ಮಕುಂಡಕಂ ॥ ೧೪೯ ॥

---

ಚಮತ್ಕಾರಪುರಾಖ್ಯಾನ, ಗಯಶೀರ್ಷ, ಬಾಲಶಾಂಖ್ಯ, ವಾಲಮಂಡ, ಮೃಗಾಹ್ವಯ, ವಿಷ್ಣುಪಾದ, ಗೋಕರ್ಣ, ಯುಗರೂಪ, ಸಿದ್ಧೇಶ್ವರ, ನಾಗಸರ, ಸಪ್ತಾರ್ಷೇಯ, ಅಗಸ್ತ್ಯ, ಭ್ರೂಣಗರ್ತ, ನಲೇಶ, ಭೈಷ್ಮವೈಡುರಮರ್ಕಕ, ಶಾರ್ಮಿಷ್ಠ, ಸೋಮನಾಥ, ದೌರ್ಗ, ಆತರ್ಜಕೇಶ್ವರ ಇವುಗಳ ವರ್ಣನೆ, ಜಾಮದಗ್ನ್ಯವಧಾಖ್ಯಾನ, ನೈಃಕ್ಷತ್ರಿಯಕಥೆ, ರಾಮಹ್ರದ, ನಾಗಪುರ, ಷಡ್ಲಿಂಗ, ಯಜ್ಞಭೂಮಿ, ಮುಂಡೀರಾದಿತ್ರಿಕಾರ್ಕ, ಸತೀಪರಿಣಯ, ರುದ್ರಶೀರ್ಷ, ಯೋಗೇಶ, ವಾಲಖಿಲ್ಯ, ಗಾರುಡ, ಲಕ್ಷ್ಮೀಶಾಪ, ಸಪ್ತವಿಂಶಸೋಮಪ್ರಸಾದ, ಅಂಬಾಬದ್ಧ ಪಾಂಡುಕಾಖ್ಯ, ಆಗ್ನೇಯ, ಬ್ರಹ್ಮಕುಂಡ, ಗೋಮುಖ, ಲೋಹಯಷ್ಟಿ,

ಗೋಮುಖಂ ಲೋಹಯಷ್ಟ್ಯಾಖ್ಯಮಜಾಪಾಲೇಶ್ವರೀ ತಥಾ ।
ಶನೈಶ್ಚರಂ ರಾಜವಾಪೀ ರಾಮೇಶೋ ಲಕ್ಷ್ಮಣೇಶ್ವರಃ ॥ ೧೫೦ ॥

ಕುಶೇಶಾಖ್ಯಂ ಲವೇಶಾಖ್ಯಂ ಲಿಂಗಂ ಸರ್ವೋತ್ತಮೋತ್ತಮಂ ।
ಅಷ್ಟಷಷ್ಟಿಸಮಾಖ್ಯಾನಂ ದಮಯಂತ್ಯಾಸ್ತ್ರಿಜಾತಕಂ ॥ ೧೫೧ ॥

ತತೋ ವಾ ರೇವತೀವಾಪೀಭಕ್ತಿಕಾತೀರ್ಥಸಂಭವಃ ।
ಕ್ಷೇಮಂಕರೀ ಚ ಕೇದಾರಂ ಶುಕ್ಲತೀರ್ಥಮುಖಾರಕಂ ॥ ೧೫೨ ॥

ಸತ್ಯಸಂಧೇಶ್ವರಾಖ್ಯಾನಂ ತಥಾ ಕರ್ಣೋತ್ಪಲಾಕಥಾ ।
ಅಟೇಶ್ವರಂ ಯಾಜ್ಞವಲ್ಕ್ಯಂ ಗೌರ್ಯಂ ಗಾಣೇಶಮೇವ ಚ ॥ ೧೫೩ ॥

ತತೋ ವಾಸ್ತುಪದಾಖ್ಯಾನಮಜಾಗೃಹಕಥಾನಕಂ ।
ಸೌಭಾಗ್ಯಾಂಧುಶ್ಚ ಶೂಲೇಶಂ ಧರ್ಮರಾಜಕಥಾನಕಂ ॥ ೧೫೪ ॥

ಮಿಷ್ಟಾನ್ನದೇಶ್ವರಾಖ್ಯಾನಂ ಗಾಣಾಪತ್ಯತ್ರಯಂ ತತಃ ।
ಜಾಬಾಲಿಚರಿತಂ ಚೈವ ಮಕರೇಶಕಥಾ ತತಃ ॥ ೧೫೫ ॥

---

ಅಜಾಪಾಲೇಶ್ವರೀ, ಶನೈಶ್ಚರ, ರಾಜವಾಪೀ, ರಾಮೇಶ, ಲಕ್ಷ್ಮಣೇಶ್ವರ ಇವುಗಳ ವೃತ್ತಾಂತ, ಕುಶೇಶಲಿಂಗ, ಲವೇಶಲಿಂಗ, ಅಷ್ಟಷಷ್ಟಿಸಮಾಖ್ಯಾನ, ಗಮಯಂತೀತ್ರಿಜಾತಕ, ರೇವತೀವಾಪಿ ಮತ್ತು ಭಕ್ತಿಕಾತೀರ್ಥಗಳ ಸಂಭವ, ಕ್ಷೇಮಂಕರೀಕೇದಾರ, ಶುಕ್ಲತೀರ್ಥ, ಮುಖಾರಕ, ಸತ್ಯಸಂಧೇಶ್ವರ ಇವುಗಳ ಚರಿತ್ರೆಗಳು, ಕರ್ಣೋತ್ಪಲಾಕಥೆ, ಅಟೇಶ್ವರ, ಯಾಜ್ಞವಲ್ಕ್ಯ, ಗೌರ್ಯ, ಗಾಣೇಶ ಇವುಗಳ ಕಥೆ, ವಾಸ್ತುಪದಾಖ್ಯಾನ, ಅಜಾಗೃಹಕಥೆ, ಸೌಭಾಗ್ಯಾಂಧು, ಶೂಲೇಶ, ಧರ್ಮರಾಜರುಗಳ ಕಥೆ, ಮಿಷ್ಟಾನ್ನದೇಶ್ವರಾಖ್ಯಾನ, ಗಾಣಾಪತ್ಯತ್ರಯಕಥನ, ಜಾಬಾಲಿ ಚರಿತ್ರೆ, ಮಕರೇಶ ಕಥೆ, ಕಾಲೇಶ್ವರ್ಯಂಧಕಾಖ್ಯಾನ, ಅಪ್ಸರಸ

ಕಾಲೇಶ್ವರ್ಯಂಧಕಾಖ್ಯಾನಂ ಕುಂಡಮಾಪ್ಸರಸಂ ತಥಾ ।
ಪುಷ್ಪಾದಿತ್ಯಂ ರೋಹಿತಾಶ್ವಂ ನಾಗರೋತ್ಪತ್ತಿಕೀರ್ತನಂ ॥ ೧೫೬ ॥

ಭಾರ್ಗವಂ ಚರಿತಂ ಚೈವ ವೈಶ್ವಾಮಿತ್ರಂ ತತಃ ಪರಂ ।
ಸಾರಸ್ವತಂ ಪೈಪ್ಪಲಾದಂ ಕಂಸಾರೀಶಂ ಚ ಪಿಂಡಕಂ ॥ ೧೫೭ ॥

ಬ್ರಹ್ಮಣೋ ಯಜ್ಞಚರಿತಂ ಸಾವಿತ್ರ್ಯಾಖ್ಯಾನಸಂಯುತಂ ।
ರೈವತಂ ಭಾರ್ತಯಜ್ಞಾಖ್ಯಂ ಮುಖ್ಯತೀರ್ಥನಿರೀಕ್ಷಣಂ ॥ ೧೫೮ ॥

ಕೌರವಂ ಹಾಟಕೇಶಾಖ್ಯಂ ಪ್ರಭಾಸಂ ಕ್ಷೇತ್ರಕತ್ರಯಂ
ಪೌಷ್ಕರಂ ನಿಮಿಷಂ ಧಾರ್ಮಮರಣ್ಯತ್ರಿತಯಂ ಸ್ಮೃತಂ ॥ ೧೫೯ ॥

ವಾರಾಣಸೀ ದ್ವಾರಕಾಖ್ಯಂ ಮನ್ವಾಖ್ಯೇತಿ ಪುರೀತ್ರಯಂ ।
ವೃಂದಾವನಂ ಖಾಂಡವಾಖ್ಯಮದ್ವೈಕಾಖ್ಯಂ ವನತ್ರಯಂ ॥ ೧೬೦ ॥

ಕಲ್ಪಃ ಶಾಲಸ್ತಥಾ ನಂದಿಗ್ರಾಮತ್ರಯಮನುತ್ತಮಂ ।
ಅಸಿಶುಕ್ಲಪಿತೃಸಂಜ್ಞಂ ತೀರ್ಥತ್ರಯಮುದಾಹೃತಂ ॥ ೧೬೧ ॥

---

ಕುಂಡ, ಪುಷ್ಯಾದಿತ್ಯ, ರೋಹಿತಾಶ್ವ, ನಾಗರೋತ್ಪತ್ತಿಗಳ ವಿಚಾರ, ಭಾರ್ಗವ ಚರಿತೆ, ವಿಶ್ವಾಮಿತ್ರಚರಿತೆ, ಸರಸ್ವತೀ ಪಿಪ್ಪಲಾದ ಕಂಸಾರೀಶರ ಚರಿತ್ರೆ, ಬ್ರಹ್ಮ ಯಜ್ಞಚರಿತ್ರೆ, ಸಾವಿತ್ರ್ಯಾಖ್ಯಾನ, ರೈವತಾಖ್ಯಾನ, ಭರತಯಜ್ಞಾಖ್ಯಾನ, ಮುಖ್ಯತೀರ್ಥ ನಿರೀಕ್ಷಣೆ, ಕೌರವ ಹಾಟಕೇಶ ಪ್ರಭಾಸಗಳೆಂಬ ಮೂರು ಕ್ಷೇತ್ರಗಳ ವರ್ಣನೆ, ಪೌಷ್ಕರ, ಧಾರ್ಮ, ನಿಮಿಷವೆಂಬ ಅರಣ್ಯತ್ರಯ ವಿಷಯ, ವಾರಾಣಸೀ ದ್ವಾರಕಾ ಮನು ಎಂಬ ಪುರೀತ್ರಯ ವಿಷಯ, ವೃಂದಾವನ, ಖಾಂಡವ ಅದ್ವೈತವೆಂಬ ವನತ್ರಯ, ಕಲ್ಪ, ಶಾಲ, ನಂದಿ ಎಂಬ ಮೂರು ಉತ್ತಮ ಗ್ರಾಮಗಳು, ಅಸಿ ಶುಕ್ಲ ಪಿತೃ ಎಂಬ ಮೂರು ತೀರ್ಥಗಳು, ಶ್ರೀ,

ಶ್ರ್ಯೈರ್ಬುದಾ ರೈವತಶ್ಚೈವ ಪರ್ವತತ್ರಯಮುತ್ತಮಂ ।
ನದೀನಾಂ ತ್ರಿತಯಂ ಗಂಗಾ ನರ್ಮದಾ ಚ ಸರಸ್ವತೀ ॥ ೧೬೨ ॥

ಸಾರ್ಧಕೋಟಿತ್ರಯಫಲಮೇಕಂ ಚೈಷು ಪ್ರಕೀರ್ತಿತಂ ।
ಕಪಿಕಾ ಶಂಖತೀರ್ಥಂ ಚಾಮರಕಂ ಬಾಲಮುಂಡನಂ ॥ ೧೬೩ ॥

ಹಾಟಕೇಶಕ್ಷೇತ್ರಫಲಪ್ರದಂ ಪ್ರೋಕ್ತಂ ಚತುಷ್ಟಯಂ ।
ಸಾಂಬಾದಿತ್ಯಂ ಶ್ರಾದ್ಧಕಲ್ಪಂ ಯೌಧಿಷ್ಠಿರಮಥಾಂಧಕಂ ॥ ೧೬೪ ॥

ಜಲಶಾಯಿ ಚತುರ್ಮಾಸಮಶೂನ್ಯಶಯನವ್ರತಂ ।
ಮಂಕಣೇಶಂ ಶಿವರಾತ್ರಿಸ್ತುಲಾಪುರುಷದಾನಕಂ ॥ ೧೬೫ ॥

ಪೃಥ್ವೀದಾನಂ ವಾನಕೇಶಂ ಕಪಾಲಮೋಚನೇಶ್ವರಂ ।
ಪಾಪಪಿಂಡಂ ಮಾಸಲಿಂಗಂ ಯುಗಮಾನಾದಿಕೀರ್ತನಂ ॥ ೧೬೬ ॥

ನಿಂಬೇಶಶಾಕಂಬರ್ಯಾಖ್ಯಾ ರುದ್ರೈಕಾದಶಕೀರ್ತನಂ ।
ದಾನಮಾಹಾತ್ಮ್ಯಕಥನಂ ದ್ವಾದಶಾದಿತ್ಯಕೀರ್ತನಂ ॥ ೧೬೭ ॥

---

ಅರ್ಬುದ, ರೈವತ ಎಂಬ ಮೂರು ಪರ್ವತಗಳು, ಗಂಗಾ ನರ್ಮದಾ ಸರಸ್ವತೀ ಎಂಬ ಮೂರು ಉತ್ತಮ ನದಿಗಳು, ಇವುಗಳಲ್ಲಿ ಒಂದೊಂದು ಮೂರುವರೆ ಕೋಟಿಫಲವುಳ್ಳದು ಮುಂತಾದ ಮಹಿಮೆ, ಕಪಿಕಾ, ಶಂಖತೀರ್ಥ, ಚಾಮರಕ, ಬಾಲಮುಂಡನ ಈ ನಾಲ್ಕು ಹಾಟಕೇಶಕ್ಷೇತ್ರಫಲಪ್ರದವೆಂದು ಅವುಗಳ ಮಹಿಮೆ, ಸಾಂಬಾದಿತ್ಯ, ಶ್ರಾದ್ಧಕಲ್ಪ, ಯೌಧಿಷ್ಠಿರ ಅಂಧಕಗಳ ವಿಷಯ, ಚಾತುರ್ಮಾಸ್ಯ ಶಯನವ್ರತವಿಧಾನ, ಮಂಕಣೇಶ, ಶಿವರಾತ್ರಿ, ತುಲಾಪುರುಷದಾನ, ಪೃಥ್ವೀ ದಾನ, ವಾನಕೇಶ, ಕಪಾಲ ಮೋಚನೇಶ್ವರ, ಪಾಪಪಿಂಡ, ಮಾಸಲಿಂಗ, ಯುಗಮಾನ ಮುಂತಾದುವುಗಳ ಕೀರ್ತನೆ, ನಿಂಬೇಶಶಾಕಾಂಬರ್ಯಾಖ್ಯಾನ, ರುದ್ರೈಕಾದಶಕೀರ್ತನೆ, ದಾನಮಾಹಾತ್ಮ್ಯ, ದ್ವಾದಶಾದಿತ್ಯರು.

ಇತ್ಯೇಷ ನಾಗರಃ ಖಂಡಃ ಪ್ರಭಾಸಾಖ್ಯೋಽಧುನೋಚ್ಯತೇ ।
ಸೋಮೇಶೋ ಯತ್ರ ವಿಶ್ವೇಶೋಽರ್ಕಸ್ಥಲಂ ಪುಣ್ಯದಂ ಮಹತ್ ॥೧೬೮॥

ಸಿದ್ಧೇಶ್ವರಾದಿಕಾಖ್ಯಾನಂ ಪೃಥಗತ್ರ ಪ್ರಕೀರ್ತಿತಂ ।
ಅಗ್ನಿತೀರ್ಥಂ ಕಪರ್ದೀಶಂ ಕೇದಾರೇಶಂ ಗತಿಪ್ರದಂ ॥ ೧೬೯ ॥

ಭೀಮಭೈರವಚಂಡೀಶಭಾಸ್ಕರಾಂಗಾರಕೇಶ್ವರಃ ।
ಬುಧೇಜ್ಯಭೃಗುಸೌರಾಗುಶಿಖೀಶಾ ಹರವಿಗ್ರಹಾಃ ॥ ೧೭೦ ॥

ಸಿದ್ಧೇಶ್ವರಾದ್ಯಾಃ ಪಂಚಾನ್ಯೇ ರುದ್ರಾಸ್ತತ್ರ ವ್ಯವಸ್ಥಿತಾಃ ।
ವರಾರೋಹಾ ಹ್ಯಜಾ ಪಾಲಾ ಮಂಗಲಾ ಲಲಿತೇಶ್ವರೀ ॥ ೧೭೧ ॥

ಲಕ್ಷ್ಮೀಶೋ ವಾಡವೇಶಶ್ಚೋರ್ವೀಶಃ ಕಾಮೇಶ್ವರಸ್ತಥಾ ।
ಗೌರೀಶವರುಣೇಶಾಖ್ಯಂ ದುರ್ವಾಸೇಶಂ ಗಣೇಶ್ವರಂ ॥ ೧೭೨ ॥

ಕುಮಾರೇಶಂ ಚಂಡಕಲ್ಪಂ ಶಕುಲೀಶ್ವರಸಂಜ್ಞಕಂ ।
ತತಃ ಪ್ರೋಕ್ತೋಽಥ ಕೋಟೀಶಬಾಲಬ್ರಹ್ಮಾದಿಸತ್ಕಥಾ ॥ ೧೭೩ ॥

---

೧೬೮-೨೧೧. ಈ ವಿಷಯಗಳನ್ನೊಳಗೊಂಡಿರುವುದು ನಾಗರಖಂಡವು. ಈಗ ಪ್ರಭಾಸಖಂಡದ ವಿಷಯವನ್ನು ಹೇಳುವೆನು.

### ೭. ಪ್ರಭಾಸಖಂಡ

ಸೋಮೇಶ, ವಿಶ್ವೇಶ, ಅರ್ಕಸ್ಥಳವೆಂಬ ಪುಣ್ಯಕ್ಷೇತ್ರ, ಸಿದ್ಧೇಶ್ವರ ಇವುಗಳ ಉಪಾಖ್ಯಾನ, ಅಗ್ನಿತೀರ್ಥ, ಕಪರ್ದೀಶ, ಗತಿದಾಯಕವಾದ ಕೇದಾರೇಶ, ಭೀಮ, ಭೈರವ, ಚಂಡೀಶ, ಭಾಸ್ಕರ, ಅಂಗಾರಕೇಶ್ವರ, ಬುಧ ಭೃಗು ಮುಂತಾದ ಹರವಿಗ್ರಹಗಳು, ಸಿದ್ಧೇಶ್ವರಾದಿ ರುದ್ರಪಂಚಕ, ವರಾರೋಹಾ, ಅಜಾ, ಪಾಲಾ, ಮಂಗಳಾ, ಲಲಿತೇಶ್ವರೀ, ಲಕ್ಷ್ಮೀಶ, ವಾಡವೇಶ, ಉರೀಶ, ಕಾಮೇಶ್ವರ, ಗೌರೀಶ, ವರುಣೇಶ, ದುರ್ವಾಸೇಶ, ಗಣೇಶ್ವರ, ಕುಮಾರೇಶ, ಚಂಡಕಲ್ಪ, ಶಕುಲೀಶ್ವರ, ಕೋಟೀಶ, ಬಾಲಬ್ರಹ್ಮ ಮುಂತಾದವುಗಳ ಸತ್ಕಥೆ

ನರಕೇಶಸಂವರ್ತೇಶನಿಧೀಶ್ವರಕಥಾ ತತಃ |
ಬಲಭದ್ರೇಶ್ವರಸ್ಯಾಥ ಗಂಗಾಯಾ ಗಣಪಸ್ಯ ಚ || ೧೭೪ ||

ಜಾಂಬವತ್ಯಾಖ್ಯಸರಿತಃ ಪಾಂಡುಕೂಪಸ್ಯ ಸತ್ಕಥಾ |
ಶತಮೇಧಲಕ್ಷಮೇಧಕೋಟಿಮೇಧಕಥಾ ತಥಾ || ೧೭೫ ||

ದುರ್ವಾಸಾರ್ಕಘಟಸ್ಥಾನ ಹಿರಣ್ಯಾಸಂಗಮೋತ್ಕಥಾ |
ನಗರಾರ್ಕಸ್ಯ ಕೃಷ್ಣಸ್ಯ ಸಂಕರ್ಷಣಸಮುದ್ರಯೋಃ || ೧೭೬ ||

ಕುಮಾರ್ಯಾಃ ಕ್ಷೇತ್ರಪಾಲಸ್ಯ ಬ್ರಹ್ಮೇಶಸ್ಯ ಕಥಾ ಪೃಥಕ್ |
ಪಿಂಗಲಾಸಂಗಮೇಶಸ್ಯ ಶಂಕರಾರ್ಕಘಟೇಶಯೋಃ || ೧೭೭ ||

ಋಷಿತೀರ್ಥಸ್ಯ ನಂದಾರ್ಕತ್ರಿತಕೂಪಸ್ಯ ಕೀರ್ತನಂ |
ಶಶೋಪಾನಸ್ಯ ಪರ್ಣಾರ್ಕನ್ಯಂಕುಮತ್ಯೋಃ ಕಥಾದ್ಭುತಾ || ೧೭೮ ||

ವಾರಾಹಸ್ವಾಮಿವೃತ್ತಾಂತಂ ಛಾಯಾಲಿಂಗಾಖ್ಯಗುಲ್ಫಯೋಃ |
ಕಥಾ ಕನಕನಂದಾಯಾಃ ಕುಂತೀಗಂಗೇಶಯೋಸ್ತಥಾ || ೧೭೯ ||

---

ನರಕೇಶ, ಸಂವರ್ತೇಶ, ನಿಧೀಶ್ವರ, ಬಲಭದ್ರೇಶ್ವರ, ಗಂಗಾ ಗಣಪಗಳ ಕಥೆ, ಜಾಂಬುವತ್ಯಾಖ್ಯನದೀಕಥೆ, ಪಾಂಡುಕೂಪಕಥೆ, ಶತಮೇಧ, ಲಕ್ಷಮೇಧ, ಕೋಟಿಮೇಧಕಥೆಗಳು, ದುರ್ವಾಸಾರ್ಕ, ಘಟಸ್ಥಾನ, ಹಿರಣ್ಯಾಸಂಗಮಗಳಕಥೆ ನಗರಾರ್ಕ, ಕೃಷ್ಣ, ಸಂಕರ್ಷಣ, ಸಮುದ್ರ, ಕುಮಾರೀ, ಕ್ಷೇತ್ರಪಾಲ, ಬ್ರಹ್ಮೇಶ, ಇವರ ಪ್ರತ್ಯೇಕ ಕಥೆಗಳು, ಪಿಂಗಲಾಸಂಗಮೇಶ, ಶಂಕರಾರ್ಕ, ಘಟೇಶ, ಋಷಿತೀರ್ಥ, ನಂದಾರ್ಕತ್ರಿತಕೂಪಗಳನಿರ್ದೇಶ, ಶಶೋಪಾನ, ಪರ್ಣಾರ್ಕ ನ್ಯಂಕುಮತಿಗಳ ಅದ್ಭುತಕಥೆ, ವರಾಹಸ್ವಾಮಿ ವೃತ್ತಾಂತ, ಛಾಯಾ ಲಿಂಗ, ಗುಲ್ಫಗಳಕಥೆ, ಕನಕನಂದಾಕಥೆ, ಕುಂತೀ ಗಂಗೇಶಗಳ ಕಥೆ, ಚಮ

ಚಮಸೋದ್ಭೇದವಿದುರತ್ರಿಲೋಕೇಶಕಥಾ ತತಃ ।
ಮಂಕಣೇಶತ್ರೈಪುರೇಶಷಂಡತೀರ್ಥಕಥಾಸ್ತಥಾ ॥ ೧೮೦ ॥

ಸೂರ್ಯಪ್ರಾಚೀತ್ರೀಕ್ಷಣಯೋರುಮಾನಾಥಕಥಾ ತಥಾ ।
ಭೂದ್ವಾರಶೂಲಸ್ಥಲಯೋಶ್ಚ್ಯವನಾರ್ಕೇಶಯೋಸ್ತಥಾ ॥ ೧೮೧ ॥

ಅಜಾಪಾಲೇಶಬಾಲಾರ್ಕಕುಬೇರಸ್ಥಲಜಾ ಕಥಾ ।
ಋಷಿತೋಯಾಕಥಾ ಪುಣ್ಯಾ ಸಂಗಾಲೇಶ್ವರಕೀರ್ತನಂ ॥ ೧೮೨ ॥

ನಾರದಾದಿತ್ಯಕಥನಂ ನಾರಾಯಣನಿರೂಪಣಂ ।
ತಪ್ತಕುಂಡಸ್ಯ ಮಾಹಾತ್ಮ್ಯಂ ಮೂಲಚಂಡೀಶವರ್ಣನಂ ॥ ೧೮೩ ॥

ಚತುರ್ವಕ್ತ್ರಗಣಾಧ್ಯಕ್ಷಕಲಂಬೇಶ್ವರಯೋಃ ಕಥಾ ।
ಗೋಪಾಲಸ್ವಾಮಿವಕುಲಸ್ವಾಮಿನೋರ್ಮರುತಾಂ ಕಥಾ ॥ ೧೮೪ ॥

ಕ್ಷೇಮಾರ್ಕೋನ್ನತವಿಘ್ನೇಶಜಲಸ್ವಾಮಿಕಥಾ ತತಃ ।
ಕಾಲಮೇಘಸ್ಯ ರುಕ್ಮಿಣ್ಯಾ ದುರ್ವಾಸೇಶ್ವರಭದ್ರಯೋಃ ॥ ೧೮೫ ॥

---

ಸೋದ್ಭೇದ, ವಿದುರ, ತ್ರಿಲೋಕೇಶ ಕಥೆಗಳು, ಮಂಕಣೇಶ, ತ್ರೈಪುರೇಶ, ಷಂಡತೀರ್ಥಕಥೆಗಳು, ಸೂರ್ಯಪ್ರಾಚೀ, ತ್ರಿಕ್ಷಣ, ಉಮಾನಾಥಕಥೆಗಳು, ಭೂದ್ವಾರ, ಶೂಲಸ್ಥಲ, ಚ್ಯವನ, ಅರ್ಕೇಶಗಳ ಕಥೆ, ಅಜಾಪಾಲೇಶ, ಬಾಲಾರ್ಕ, ಕುಬೇರಸ್ಥಲಕಥೆ, ಋಷಿತೋಯಾ ಕಥೆ, ಸಂಗಾಲೇಶ್ವರ ಕೀರ್ತನೆ, ನಾರದಾದಿತ್ಯಕಥನ, ನಾರಾಯಣನಿರೂಪಣೆ, ತಪ್ತಕುಂಡ ಮಾಹಾತ್ಮ್ಯ, ಮೂಲಚಂಡೀಶ ವರ್ಣನೆ, ಚತುರ್ವಕ್ತ್ರಗಣಾಧ್ಯಕ್ಷಕಲಂಬೇಶ್ವರರಕಥೆ, ಗೋಪಾಲಸ್ವಾಮಿ, ವಕುಲಸ್ವಾಮಿ, ಮರುತ್ತುಗಳ ಕಥೆ, ಕ್ಷೇಮಾರ್ಕ, ಉನ್ನತ

ಶಂಖಾವರ್ತಮೋಕ್ಷತೀರ್ಥಗೋಷ್ಪದಾಚ್ಯುತಪದ್ಮನಾಂ ।
ಜಾಲೇಶ್ವರಸ್ಯ ಹುಂಕಾರೇಶ್ವರಚಂಡೀಶಯೋಃ ಕಥಾ ॥ ೧೮೬ ॥

ಆಶಾಪುರಸ್ಥವಿಘ್ನೇಶಕಲಾಕುಂಡಕಥಾದ್ಭುತಾ ।
ಕಪಿಲೇಶಸ್ಯ ಚ ಕಥಾ ಜರದ್ಗವಶಿವಸ್ಯ ಚ ॥ ೧೮೭ ॥

ನಲುಕಕೋಟೀಶ್ವರಯೋರ್ಹಾಟಕೇಶ್ವರಜಾ ಕಥಾ ।
ನಾರದೇಶಯಂತ್ರಭೂಷಾದುರ್ಗಕೂಟಗಣೇಶಜಾ ॥ ೧೮೮ ॥

ಸುಪರ್ಣೈಲಾಖ್ಯಭೈರವ್ಯೋರ್ಭಲ್ಲತೀರ್ಥಭವಾ ಕಥಾ ।
ಕೀರ್ತನಂ ಕರ್ದಮಾಲಸ್ಯ ಗುಪ್ತಸೋಮೇಶ್ವರಸ್ಯ ಚ ॥ ೧೮೯ ॥

ಬಹುಸ್ವರ್ಣೇಶಶೃಂಗೇಶಕೋಟೀಶ್ವರಕಥಾ ತತಃ ।
ಮಾರ್ಕಂಡೇಶ್ವರಕೋಟೀಶದಾಮೋದರಗೃಹೋತ್ಕಥಾ ॥ ೧೯೦ ॥

ಸ್ವರ್ಣರೇಖಾ ಬ್ರಹ್ಮಕುಂಡಂ ಕುಂತೀಭೀಮೇಶ್ವರೌ ತಥಾ ।
ಮೃಗೀಕುಂಡಂ ಚ ಸರ್ವಸ್ವಂ ಕ್ಷೇತ್ರೇ ವಸ್ತ್ರಾಪಥೇ ಸ್ಮೃತಂ ॥ ೧೯೧ ॥

---

ವಿಘ್ನೇಶ, ಜಲಸ್ವಾಮಿಕಥೆ, ಕಾಲಮೇಘ, ರುಕ್ಮಿಣೀ, ದುರ್ವಾಸೇಶ್ವರ ಭದ್ರರುಗಳ ಕಥೆ, ಶಂಖಾವರ್ತ, ಮೋಕ್ಷತೀರ್ಥ, ಗೋಷ್ಪದ, ಅಚ್ಯುತಪದ್ಮಗಳ ಕಥೆ, ಜಾಲೇಶ್ವರ, ಹುಂಕಾರೇಶ್ವರ, ಚಂಡೀಶ್ವರರಕಥೆ, ಆಶಾಪುರಸ್ಥವಿಘ್ನೇಶ ಕಲಾಕುಂಡಕಥೆ, ಕಪಿಲೇಶಕಥೆ, ಜರದ್ಗವಶಿವಕಥೆ, ನಲುಕ, ಕೋಟೀಶ್ವರ, ಹಾಟಕೇಶ್ವರರ ಕಥೆ, ನಾರದೇಶಯಂತ್ರಭೂಷಾದುರ್ಗಕೂಟಗಣೇಶ ಕಥೆ, ಸುಪರ್ಣೈಲಾ, ಭೈರವಿಗಳ ಕಥೆ, ಭಲ್ಲತೀರ್ಥಕಥೆ, ಕರ್ದಮಾಲಕೀರ್ತನೆ, ಗುಪ್ತಸೋಮೇಶ್ವರಕೀರ್ತನೆ, ಬಹುಸ್ವರ್ಣೇಶ, ಶೃಂಗೇಶ, ಕೋಟೀಶ್ವರರಕಥೆ, ಮಾರ್ಕಂಡೇಶ್ವರ, ಕೋಟೀಶ, ದಾಮೋದರಗೃಹಕಥೆಗಳು, ವಸ್ತ್ರಾಪಥಕ್ಷೇತ್ರದಲ್ಲಿನ ಸ್ವರ್ಣರೇಖಾ, ಬ್ರಹ್ಮಕುಂಡ, ಕುಂತೀ ಭೀಮೇಶ್ವರ, ಮೃಗೀಕುಂಡಗಳ

ದುರ್ಗಾಭಿಲ್ಲೇಶಗಂಗೇಶರೈವತಾನಾಂ ಕಥಾದ್ಭುತಾ |
ತತೋಽರ್ಬುದೇಶ್ವರಕಥಾ ಅಚಲೇಶ್ವರಕೀರ್ತನಂ || ೧೯೨ ||

ನಾಗತೀರ್ಥಸ್ಯ ಚ ಕಥಾ ವಸಿಷ್ಠಾಶ್ರಮವರ್ಣನಂ |
ಭದ್ರಕರ್ಣಸ್ಯ ಮಾಹಾತ್ಮ್ಯಂ ತ್ರಿನೇತ್ರಸ್ಯ ತತಃ ಪರಂ || ೧೯೩ ||

ಕೇದಾರಸ್ಯ ಚ ಮಾಹಾತ್ಮ್ಯಂ ತೀರ್ಥಾಗಮನಕೀರ್ತನಂ |
ಕೋಟೀಶ್ವರರೂಪತೀರ್ಥಹೃಷೀಕೇಶಕಥಾ ತತಃ || ೧೯೪ ||

ಸಿದ್ಧೇಶಶುಕ್ರೇಶ್ವರಯೋರ್ಮಣಿಕರ್ಣೀಶಕೀರ್ತನಂ |
ಪಂಗುತೀರ್ಥಯಮತೀರ್ಥವಾರಾಹತೀರ್ಥವರ್ಣನಂ || ೧೯೫ ||

ಚಂದ್ರಪ್ರಭಾಸಪಿಂಡೋದಶ್ರೀಮಾತಾಶುಕ್ಲತೀರ್ಥಜಂ |
ಕಾತ್ಯಾಯಿನ್ಯಾಶ್ಚ ಮಾಹಾತ್ಮ್ಯಂ ತತಃ ಪಿಂಡಾರಕಸ್ಯ ಚ || ೧೯೬ ||

ತತಃ ಕನಖಲಸ್ಯಾಥ ಚಕ್ರಮಾನುಷತೀರ್ಥಯೋಃ |
ಕಪಿಲಾಗ್ನಿತೀರ್ಥಕಥಾ ತಥಾ ರಕ್ತಾನುಬಂಧಜಾ || ೧೯೭ ||

---

ವಿಷಯ, ದುರ್ಗಾಭಿಲ್ಲೇಶ, ಗಂಗೇಶ, ರೈವತರ ಅದ್ಭುತಕಥೆ, ಅರ್ಬುದೇಶ್ವರ ಕಥೆ, ಅಚಲೇಶ್ವರ ಕೀರ್ತನೆ, ನಾಗತೀರ್ಥಕಥೆ, ವಸಿಷ್ಠಾಶ್ರಮವರ್ಣನೆ, ಭದ್ರ ಕರ್ಣಮಾಹಾತ್ಮ್ಯ, ತ್ರಿನೇತ್ರಮಾಹಾತ್ಮ್ಯ, ಕೇದಾರಮಾಹಾತ್ಮ್ಯ, ತೀರ್ಥಾ ಗಮನ ಕೀರ್ತನೆ, ಕೋಟೀಶ್ವರ, ರೂಪತೀರ್ಥ, ಹೃಷೀಕೇಶಕಥೆಗಳು, ಸಿದ್ಧೇಶ, ಶುಕ್ರೇಶ್ವರರ ಕಥೆ, ಮಣಿಕರ್ಣೀಶ ಕೀರ್ತನೆ, ಪಂಗುತೀರ್ಥ, ಯಮತೀರ್ಥ, ವರಾಹತೀರ್ಥಗಳ ವರ್ಣನೆ, ಚಂದ್ರ, ಪ್ರಭಾಸ, ಪಿಂಡೋದ, ಶ್ರೀ, ಮಾತಾ, ಶುಕ್ಲ ತೀರ್ಥಗಳ ಮಾಹಾತ್ಮ್ಯ, ಕಾತ್ಯಾಯನೀ ಪಿಂಡಾರಕರಮಾಹಾತ್ಮ್ಯ, ಕನಖಲ, ಚಕ್ರ, ಮಾನುಷ ತೀರ್ಥಗಳ ಕಥೆ, ಕಪಿಲಾಗ್ನಿತೀರ್ಥಗಳ ಕಥೆ,

ಗಣೇಶಪಾರ್ಥೇಶ್ವರಯೋರ್ಯಾತ್ರಾಯಾಮುಜ್ವಲಸ್ಯ ಚ ।
ಚಂಡೀಸ್ಥಾನನಾಗೋದ್ಭವಶಿವಕುಂಡಮಹೇಶಜಾ ॥ ೧೯೮ ॥

ಕಾಮೇಶ್ವರಸ್ಯ ಮಾರ್ಕಂಡೇಯೋತ್ಪತ್ತೇಶ್ಚ ಕಥಾ ತತಃ ।
ಉದ್ದಾಲಕೇಶಸಿದ್ಧೇಶಗತತೀರ್ಥಕಥಾಃ ಪೃಥಕ್ ॥ ೧೯೯ ॥

ಶ್ರೀದೇವಮಾತೋತ್ಪತ್ತಿಶ್ಚ ವ್ಯಾಸಗೌತಮತೀರ್ಥಯೋಃ ।
ಕುಲಸಂತಾರಮಾಹಾತ್ಮ್ಯಂ ರಾಮಕೋಟ್ಯಾಹ್ವತೀರ್ಥಯೋಃ ॥ ೨೦೦ ॥

ಚಂದ್ರೋದ್ಭೇದೇಶಾನಶೃಂಗಬ್ರಹ್ಮಸ್ಥಾನೋದ್ಭವೋದ್ಭುತಂ ।
ತ್ರಿಪುಷ್ಕರರುದ್ರಹ್ರದಗುಹೇಶ್ವರಕಥಾ ಶುಭಾ ॥ ೨೦೧ ॥

ಅವಿಮುಕ್ತಸ್ಯ ಮಾಹಾತ್ಮ್ಯಮುಮಾಮಾಹೇಶ್ವರಸ್ಯ ಚ ।
ಮಹೌಜಸಃ ಪ್ರಭಾವಶ್ಚ ಜಂಬೂತೀರ್ಥಸ್ಯ ವರ್ಣನಂ ॥ ೨೦೨ ॥

ಗಂಗಾಧರಮಿಶ್ರಕಯೋಃ ಕಥಾ ಪಾಥ ಫಲಸ್ತುತಿಃ ।
ದ್ವಾರಕಾಯಾಶ್ಚ ಮಹಾತ್ಮ್ಯೇ ಚಂದ್ರಶರ್ಮಕಥಾನಕಂ ॥ ೨೦೩ ॥

---

ರಕ್ತಾನುಬಂಧಜಕಥೆ, ಗಣೇಶಪಾರ್ಥೇಶ್ವರರ ಯಾತ್ರೆ, ಉಜ್ವಲ ಚಂಡೀಸ್ಥಾನ, ನಾಗೋದ್ಭವ, ಶಿವಕುಂಡ, ಮಹೇಶ, ಕಾಮೇಶ್ವರ, ಮಾರ್ಕಂಡೇಯೋತ್ಪತ್ತಿ, ಇವುಗಳ ಕಥೆ, ಉದ್ದಾಲಕೇಶ ಸಿದ್ಧೇಶಗಳಲ್ಲಿನ ತೀರ್ಥಕಥೆಗಳು, ಶ್ರೀದೇವ ಮಾತೋತ್ಪತ್ತಿ, ವ್ಯಾಸ, ಗೌತಮತೀರ್ಥಗಳ ಕುಲಸಂತಾರಮಾಹಾತ್ಮ್ಯ, ರಾಮಕೋಟಿತೀರ್ಥಗಳ ಮಾಹಾತ್ಮ್ಯ, ಚಂದ್ರೋದ್ಭೇದ, ಈಶಾನಶೃಂಗ, ಬ್ರಹ್ಮಸ್ಥಾನಗಳ ಉದ್ಭವ, ತ್ರಿಪುಷ್ಕರ, ರುದ್ರ ಬ್ರಹ್ಮ ಗುಹೇಶ್ವರಕಥೆ, ಅವಿ ಮುಕ್ತ ಮಾಹೇಶ್ವರರ ಮಾಹಾತ್ಮ್ಯ, ಮಹೌಜಸಪ್ರಭಾವ, ಜಂಬೂತೀರ್ಥ ವರ್ಣನೆ, ಗಂಗಾಧರ, ಮಿಶ್ರರಕಥೆ, ಫಲಸ್ತುತಿ, ದ್ವಾರಕಾಮಾಹಾತ್ಮ್ಯ, ಚಂದ್ರ

ಜಾಗರಾದ್ಯರ್ಚನಾದ್ಯಾಖ್ಯಾ ವ್ರತೇನೋಕಾದಶೀಭವಂ ।
ಮಹಾದ್ವಾದಶಿಕಾಖ್ಯಾನಂ ಪ್ರಹ್ಲಾದರ್ಷಿಸಮಾಗಮಃ　　॥ ೨೦೪ ॥

ದುರ್ವಾಸಸ್ಯ ಹ್ಯುಪಾಖ್ಯಾನಂ ಯಾತ್ರೋಪಕ್ರಮಕೀರ್ತನಂ ।
ಗೋಮತ್ಯುತ್ಪತ್ತಿಕಥನಂ ತಸ್ಯಾಂ ಸ್ನಾನಾದಿಜಂ ಫಲಂ　　॥ ೨೦೫ ॥

ಚಕ್ರತೀರ್ಥಸ್ಯ ಮಾಹಾತ್ಮ್ಯಂ ಗೋಮತ್ಯುದಧಿಸಂಗಮಃ ।
ಸನಕಾದಿಹ್ರದಾಖ್ಯಾನಂ ನೃಗತೀರ್ಥಸ್ಯ ಕಥಾ ತತಃ　　॥ ೨೦೬ ॥

ಗೋಪ್ರಚಾರಕಥಾ ಪುಣ್ಯಾ ಗೋಪೀನಾಂ ದ್ವಾರಕಾಗಮಃ ।
ಗೋಪೀಸರಃಸಮಾಖ್ಯಾನಂ ಬ್ರಹ್ಮತೀರ್ಥಾದಿಕೀರ್ತನಂ　　॥ ೨೦೭ ॥

ಪಂಚನದ್ಯಾಗಮಾಖ್ಯಾನಂ ನಾನಾಖ್ಯಾನಸಮನ್ವಿತಂ ।
ಶಿವಲಿಂಗಗದಾತೀರ್ಥಕೃಷ್ಣಪೂಜಾದಿಕೀರ್ತನಂ　　॥ ೨೦೮ ॥

ತ್ರಿವಿಕ್ರಮಸ್ಯ ಮೂರ್ತ್ಯಾಖ್ಯಾ ದುರ್ವಾಸಃ ಕೃಷ್ಣಸಂಕಥಾ ।
ಕುಶದೈತ್ಯವಧೋಚ್ಚಾರವಿಶೇಷಾರ್ಚನಜಂ ಫಲಂ　　॥ ೨೦೯ ॥

---

ಶರ್ಮಕಥೆ, ಜಾಗರಾದ್ಯರ್ಚನಾಖ್ಯಾನ, ಏಕಾದಶೀವ್ರತ ಮಹಾದ್ವಾದಶಿಕಾಖ್ಯಾನ, ಪ್ರಹ್ಲಾದ ಋಷಿಸಮಾಗಮ, ದುರ್ವಾಸೋಪಾಖ್ಯಾನ, ಯಾತ್ರೋಪಕ್ರಮ ಕೀರ್ತನೆ, ಗೋಮತ್ಯುತ್ಪತ್ತಿಕಥನ, ಗೋಮತೀ ಸ್ನಾನಾದಿ ಫಲ, ಚಕ್ರತೀರ್ಥ ಮಾಹಾತ್ಮ್ಯ, ಗೋಮತೀ ಸಮುದ್ರ ಸಂಗಮ, ಸನಕಾದಿ ಹ್ರದಾಖ್ಯಾನ, ನೃಗ ತೀರ್ಥಕಥೆ, ಗೋಪ್ರಚಾರಕಥೆ, ಗೋಪಿಕಾಸ್ತ್ರೀಯರ ದ್ವಾರಕಾಗಮನ, ಗೋಪೀ ಸರಸ್ಸಮಾಖ್ಯಾನ, ಬ್ರಹ್ಮತೀರ್ಥಾದಿ ಕೀರ್ತನೆ, ಪಂಚನದ್ಯಾಗಮಾಖ್ಯಾನ, ನಾನಾಖ್ಯಾನಗಳು, ಶಿವಲಿಂಗ, ಗದಾತೀರ್ಥ ಕೃಷ್ಣಪೂಜಾದಿಗಳ ಕೀರ್ತನೆ, ತ್ರಿವಿಕ್ರಮಮೂರ್ತ್ಯಾಖ್ಯಾನ, ದುರ್ವಾಸಕೃಷ್ಣಸಂವಾದ, ಕುಶದೈತ್ಯ ವಧೆ,

**ಗೋಮತ್ಯಾಂ ದ್ವಾರಕಾಯಾಂ ಚ ತೀರ್ಥಾಗಮನಕೀರ್ತನಂ |**
**ಕೃಷ್ಣಮಂದಿರಸಂಪ್ರೇಕ್ಷಾ ದ್ವಾರವತ್ಯಭಿಷೇಚನಂ || ೨೧೦ ||**

**ತತ್ರ ತೀರ್ಥಾವಾಸಕಥಾ ದ್ವಾರಕಾಪುಣ್ಯಕೀರ್ತನಂ |**
**ಇತ್ಯೇಷ ಸಪ್ತಮಃ ಪ್ರೋಕ್ತಃ ಖಂಡಃ ಪ್ರಾಭಾಸಿಕೋ ದ್ವಿಜಾಃ || ೨೧೧ ||**

**ಸ್ಕಾಂದೇ ಸರ್ವೋತ್ತರಕಥೇ ಶಿವಮಾಹಾತ್ಮ್ಯವರ್ಣನೇ |**
**ಲಿಖಿತ್ವೈತತ್ತು ಯೋ ದದ್ಯಾದ್ಧೇಮಶೂಲಸಮನ್ವಿತಂ || ೨೧೨ ||**

**ಮಾಘ್ಯಾಂ ಸತ್ಕೃತ್ಯ ವಿಪ್ರಾಯ ಸ ಶೈವೇ ಮೋದತೇ ಪದೇ || ೨೧೩ ||**

**ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ವರಾಹಪುರಾಣಾನುಕ್ರಮಣೀವರ್ಣನಂ ನಾಮ ಚತುರಧಿಕಶತತಮೋಽಧ್ಯಾಯಃ**

---

ಗೋಮತೀ ದ್ವಾರಕೆಗಳಲ್ಲಿ ತೀರ್ಥಾಗಮನ ಕೀರ್ತನೆ, ಕೃಷ್ಣಮಂದಿರ ಸಂಪ್ರೇಕ್ಷಣೆ, ದ್ವಾರವತ್ಯಭಿಷೇಚನ, ತೀರ್ಥಾವಾಸಕಥೆ, ದ್ವಾರಕಾಪುಣ್ಯಕೀರ್ತನೆ ಈ ವಿಷಯಗಳು ಅಡಕವಾಗಿರುವುದೇ ಏಳನೆಯದಾದ ಪ್ರಭಾಸಖಂಡವು.

೨೧೨-೨೧೩. ಈ ಸ್ಕಾಂದಪುರಾಣವು ಉತ್ಕೃಷ್ಟಕಥೆಗಳನ್ನೊಳಗೊಂಡು ಶಿವಮಾಹಾತ್ಮ್ಯವರ್ಣನಪರವಾಗಿದೆ.

ಈ ಪುರಾಣವನ್ನು ಬರೆದು ಅದನ್ನು ಸುವರ್ಣಲಿಂಗ ಸಹಿತವಾಗಿ ಮಾಘ ಶುಕ್ಲ ಪೂರ್ಣಿಮೆಯ ದಿನದಲ್ಲಿ ಬ್ರಾಹ್ಮಣನಿಗೆ ಸತ್ಕಾರಪೂರ್ವಕವಾಗಿ ದಾನ ಮಾಡುವವನು ಶಿವಸ್ಥಾನವನ್ನು ಹೊಂದಿ ಸುಖಭಾಗಿಯಾಗುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ಸ್ಕಾಂದಪುರಾಣವಿಷಯಾನುಕ್ರಮಣಿಕೆಯ ವರ್ಣನೆ ಯೆಂಬ ನೂರುನಾಲ್ಕನೆಯ ಅಧ್ಯಾಯವು ಮುಗಿದುದು.

## ಪಂಚಾಧಿಕಶತತಮೋಽಧ್ಯಾಯಃ

### ಬ್ರಹ್ಮೋವಾಚ

ಶೃಣು ವತ್ಸ ಪ್ರವಕ್ಷ್ಯಾಮಿ ಪುರಾಣಂ ವಾಮನಾಭಿಧಂ ।
ತ್ರಿವಿಕ್ರಮಚರಿತ್ರಾಢ್ಯಂ ದಶಸಾಹಸ್ರಸಂಖ್ಯಕಂ ॥ ೧ ॥

ಕೂರ್ಮಕಲ್ಪಸಮಾಖ್ಯಾನಂ ವರ್ಗತ್ರಯಕಥಾನಕಂ ।
ಭಾಗದ್ವಯಸಮಾಯುಕ್ತಂ ವಕ್ತೃಶ್ರೋತೃಶುಭಾವಹಂ ॥ ೨ ॥

ಪುರಾಣಪ್ರಶ್ನಃ ಪ್ರಥಮಂ ಬ್ರಹ್ಮಶೀರ್ಷಚ್ಛಿದಾ ತತಃ ।
ಕಪಾಲಮೋಚನಾಖ್ಯಾನಂ ದಕ್ಷಯಜ್ಞವಿಹಿಂಸನಂ ॥ ೩ ॥

ಹರಸ್ಯ ಕಾಲರೂಪಾಖ್ಯಾ ಕಾಮಸ್ಯ ದಹನಂ ತತಃ ।
ಪ್ರಹ್ಲಾದನಾರಾಯಣಯೋರ್ಯುದ್ಧಂ ದೇವಾಸುರಾಹವಃ ॥ ೪ ॥

---

### ನೂರುಐದನೆಯ ಅಧ್ಯಾಯ

೧. ಬ್ರಹ್ಮನು ಹೇಳಿದನು:—ವತ್ಸ! ತ್ರಿವಿಕ್ರಮಚರಿತ್ರೆಯನ್ನೊಳಗೊಂಡಿರುವ, ಹತ್ತುಸಾವಿರಗ್ರಂಥಗಳುಳ್ಳ ವಾಮನಪುರಾಣವನ್ನು ಹೇಳುವೆನು ಕೇಳು.

೨. ಈ ಪುರಾಣವು ಕೂರ್ಮಕಲ್ಪಸಮಾಖ್ಯಾನವು. ಇದರಲ್ಲಿ ವರ್ಗತ್ರಯಕಥೆಗಳಡಗಿವೆ. ಇದು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟು ವಕ್ತೃಶ್ರೋತೃಗಳಿಗೆ ಶ್ರೇಯಸ್ಕರವಾಗಿದೆ.

### ವಾಮನಪುರಾಣ. ಪೂರ್ವಭಾಗ

೩-೧೦. ಪುರಾಣ ಪ್ರಶ್ನೆ, ಬ್ರಹ್ಮಶೀರ್ಷಭೇದನೆ, ಕಪಾಲಮೋಚನಾಖ್ಯಾನ, ದಕ್ಷಯಜ್ಞವಿಧ್ವಂಸನೆ, ಹರನ ಕಾಲರೂಪ, ಕಾಮದಹನ, ಪ್ರಹ್ಲಾದ

ಸುರೇಶ್ಯರ್ಕಸಮಾಖ್ಯಾನಂ ತತೋ ಭುವನಕೋಶಕಂ ।
ತತಃ ಕಾಮ್ಯವ್ರತಾಖ್ಯಾನಂ ಶ್ರೀದುರ್ಗಾಚರಿತಂ ತತಃ ॥ ೫ ॥

ತತೋಂಧಕವಧಾಖ್ಯಾನಂ ನಾವ್ಯೋಪಾಖ್ಯಾನಕಂ ತತಃ ।
ಜಾಬಾಲಚರಿತಂ ಪಶ್ಚಾದರಜಾಯಾಃ ಕಥಾದ್ಭುತಾಃ ॥ ೬ ॥

ಅಂಧಕೇಶ್ವರಯೋರ್ಯುದ್ಧಂ ಗಣತ್ವಂ ಚಾಂಧಕಸ್ಯ ಚ ।
ಮರುತಾಂ ಜನ್ಮಕಥನಂ ಬಲೇಶ್ಚ ಚರಿತಂ ತತಃ ॥ ೭ ॥

ತತಸ್ತು ಲಕ್ಷ್ಮ್ಯಾಶ್ಚರಿತಂ ತ್ರೈವಿಕ್ರಮಮತಃಪರಂ ।
ಪ್ರಹ್ಲಾದತೀರ್ಥಯಾತ್ರಾಯಾಂ ಪ್ರೋಚ್ಯಂತೇಥ ಕಥಾಃ ಶುಭಾಃ ॥ ೮ ॥

ತತಶ್ಚ ಧುಂಧುಚರಿತಂ ಪ್ರೇತೋಪಾಖ್ಯಾನಕಂ ತತಃ ।
ನಕ್ಷತ್ರಪುರುಷಾಖ್ಯಾನಂ ಶ್ರೀದಾಮಚರಿತಂ ತತಃ ॥ ೯ ॥

ತ್ರಿವಿಕ್ರಮಚರಿತ್ರಾಂತೇ ಬ್ರಹ್ಮಪ್ರೋಕ್ತಃ ಸ್ತವೋತ್ತಮಃ ।
ಪ್ರಹ್ಲಾದಬಲಿಸಂವಾದೇ ಸುತಲೇ ಹರಿಶಂಸನಂ ॥ ೧೦ ॥

ಇತ್ಯೇವಂ ಪೂರ್ವಭಾಗಸ್ಯ ಪುರಾಣಸ್ಯ ತವೋದಿತಃ ।
ಶೃಣ್ವತೋಸ್ಯೋತ್ತರಂ ಭಾಗಂ ಬೃಹದ್ವಾಮನ ಸಂಜ್ಞಕಂ ॥ ೧೧ ॥

---

ನಾರಾಯಣ ಯುದ್ಧ, ದೇವಾಸುರ ಯುದ್ಧ, ಸಕೇಶ್ಯರ್ಕಸಮಾಖ್ಯಾನ, ಭುವನ ಕೋಶ, ಕಾಮ್ಯವ್ರತಾಖ್ಯಾನ, ದುರ್ಗಾಚರಿತ್ರೆ, ಅಂಧಕವಧೋಪಾಖ್ಯಾನ, ಜಾಬಾಲಿಚರಿತ್ರೆ, ಅರಜಾಕಥೆಗಳು, ಅಂಧಕೇಶ್ವರರ ಯುದ್ಧ, ಅಂಧಕಗಣತ್ವ, ಮರುತ್ತಗಳ ಜನ್ಮ, ಬಲಿಚರಿತ್ರೆ, ಲಕ್ಷ್ಮೀಚರಿತ್ರೆ, ತ್ರಿವಿಕ್ರಮಚರಿತ್ರೆ, ಪ್ರಹ್ಲಾದ ತೀರ್ಥಯಾತ್ರೆ, ಶುಭಕಥೆಗಳು, ಧುಂಧುಚರಿತ್ರೆ, ಪ್ರೇತೋಪಾಖ್ಯಾನ, ನಕ್ಷತ್ರ ಪುರುಷೋಪಾಖ್ಯಾನ, ಶ್ರೀರಾಮಚರಿತ್ರೆ, ತ್ರಿವಿಕ್ರಮಚರಿತ್ರಾಂತ್ಯದಲ್ಲಿ ಬ್ರಹ್ಮ ಪ್ರೋಕ್ತ ಸ್ತೋತ್ರ, ಪ್ರಹ್ಲಾದಬಲಿಸಂವಾದ, ಸುತಲದಲ್ಲಿ ಹರಿಪ್ರಶಂಸೆ.

೧೧. ಈರೀತಿ ಪೂರ್ವಭಾಗದ ವಿಷಯಗಳು ನಿನಗೆ ಉಕ್ತವಾಗಿವೆ. ಬೃಹದ್ವಾಮನ ನಾಮಕವಾದ ಈ ಪುರಾಣದ ಉತ್ತರಭಾಗದ ವಿಷಯವನ್ನು ಹೇಳುವೆನು. ಕೇಳು.

ಮಾಹೇಶ್ವರೀ ಭಾಗವತೀ ಸೌರೀ ಗಾಣೇಶ್ವರೀ ತಥಾ ।
ಚತಸ್ರಃ ಸಂಹಿತಾಶ್ಚಾತ್ರ ಪೃಥಕ್ ಸಾಹಸ್ರಸಂಖ್ಯಯಾ ॥ ೧೨ ॥

ಮಾಹೇಶ್ವರ್ಯಾಂ ತು ಕೃಷ್ಣಸ್ಯ ತದ್ಭಕ್ತಾನಾಂ ಚ ಕೀರ್ತನಂ ।
ಭಾಗವತ್ಯಾಂ ಜಗನ್ಮಾತುರವತಾರಕಥಾದ್ಭುತಾ ॥ ೧೩ ॥

ಸೌರ್ಯಾಂ ಸೂರ್ಯಸ್ಯ ಮಹಿಮಾ ಗದಿತಃ ಪಾಪನಾಶನಃ ।
ಗಾಣೇಶ್ವರ್ಯಾಂ ಗಣೇಶಸ್ಯ ಚರಿತಂ ಚ ಮಹೇಶಿತುಃ ॥ ೧೪ ॥

ಇತ್ಯೇತದ್ವಾಮನಂ ನಾಮ ಪುರಾಣಂ ಸುವಿಚಿತ್ರಕಂ ।
ಪುಲಸ್ತ್ಯೇನ ಸಮಾಖ್ಯಾತಂ ನಾರದಾಯ ಮಹಾತ್ಮನೇ ॥ ೧೫ ॥

ತತೋ ನಾರದತಃ ಪ್ರಾಪ್ತಂ ವ್ಯಾಸೇನ ಸುಮಹಾತ್ಮನಾ ।
ವ್ಯಾಸಾತ್ತು ಲಬ್ಧವಾಂಶ್ಚೈತತ್ ತಚ್ಛಿಷ್ಯೋ ರೋಮಹರ್ಷಣಃ ॥ ೧೬ ॥

---

## ಉತ್ತರಭಾಗ

೧೨-೧೫. ಮಾಹೇಶ್ವರೀ, ಭಾಗವತೀ, ಸೌರೀ, ಗಾಣೇಶ್ವರೀ, ಎಂಬುದಾಗಿ ನಾಲ್ಕುಸಂಹಿತೆಗಳು. ಇವುಗಳಲ್ಲಿ ಒಂದೊಂದರಲ್ಲಿಯೂ ಒಂದು ಸಾವಿರ ಗ್ರಂಥಗಳಿವೆ.

ಮಾಹೇಶ್ವರೀ ಸಂಹಿತೆಯಲ್ಲಿ—ಕೃಷ್ಣ, ಅವನಭಕ್ತಕೀರ್ತನೆ. ಭಾಗವತೀ ಸಂಹಿತೆಯಲ್ಲಿ—ಅದ್ಭುತವಾದ ಜಗನ್ಮಾತೆಯ ಅವತಾರಕಥೆ. ಸೌರೀ ಸಂಹಿತೆಯಲ್ಲಿ—ಪಾಪನಾಶಕವಾದ ಸೂರ್ಯ ಮಹಿಮೆ. ಗಾಣೇಶ್ವರೀ ಸಂಹಿತೆಯಲ್ಲಿ—ಗಣೇಶ ಚರಿತ್ರೆ.

ಈ ವಿಷಯಗಳು ಅಡಕವಾಗಿರುವ, ವಿಚಿತ್ರವಾದ ವಾಮನ ಪುರಾಣವು ಪುಲಸ್ತ್ಯನಿಂದ ಮಹಾತ್ಮನಾದ ನಾರದನಿಗೆ ಹೇಳಲ್ಪಟ್ಟಿತು

೧೬-೨೦. ಇದು ಆ ನಾರದರಿಂದ ಮಹಾತ್ಮರಾದ ವ್ಯಾಸರಿಗೆ ಲಭಿಸಿತು.

ಸ ಚಾಖ್ಯಾಸ್ಯತಿ ವಿಪ್ರೇಭ್ಯೋ ನೈಮಿಷೀಯೇಭ್ಯ ಏವ ಚ ।
ಏವಂ ಪರಂಪರಾಪ್ರಾಪ್ತಂ ಪುರಾಣಂ ವಾಮನಂ ಶುಭಂ ॥ ೧೭ ॥

ಯೇ ಪಠಂತಿ ಚ ಶೃಣ್ವಂತಿ ತೇಪಿ ಯಾಂತಿ ಪರಾಂ ಗತಿಂ ।
ಲಿಖಿತ್ವೈತತ್ಪುರಾಣಂ ತು ಯಃ ಶರದ್ಯರ್ಪಯೇತ್ಸುಧೀಃ ॥ ೧೮ ॥

ವಿಪ್ರಾಯ ವೇದವಿದುಷೇ ಘೃತಧೇನುಸಮನ್ವಿತಂ ।
ಸ ಸಮುದ್ಧೃತ್ಯ ನರಕಾನ್ನಯೇತ್ಸ್ವರ್ಗಂ ಪಿತೄನ್ ಸ್ವಕಾನ್ ॥ ೧೯ ॥

ದೇಹಾಂತೇ ಭುಕ್ತಭೋಗೋಽಸೌ ಯಾತಿ ವಿಷ್ಣೋಃ ಪರಂ ಪದಂ ॥ ೨೦ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ವಾಮನಪುರಾಣವಿಷಯಾನುಕ್ರಮಣೀವರ್ಣನಂ ನಾಮ ಪಂಚಾಧಿಕಶತತಮೋಽಧ್ಯಾಯಃ

---

ಅವರಿಂದ ಅವರ ಶಿಷ್ಯರಾದ ರೋಮಹರ್ಷಣರಿಗೆ ಉಪದೇಶಿಸಲ್ಪಟ್ಟಿತು. ಆ ರೋಮಹರ್ಷಣನು ನೈಮಿಷಾರಣ್ಯವಾಸಿಗಳಾದ ಬ್ರಾಹ್ಮಣರಿಗೆ ಹೇಳಿದನು.

ಈ ರೀತಿ ಪರಂಪರಾಪ್ರಾಪ್ತವಾದ, ಶ್ರೇಯಸ್ಕರವಾದ ಈ ವಾಮನ ಪುರಾಣವನ್ನು ಪಠನಶ್ರವಣಮಾಡುವವರೂ ಸಹ ಉತ್ತಮಗತಿಯನ್ನು ಹೊಂದುವರು.

ಈ ಪುರಾಣವನ್ನು ಬರೆದು ಅದನ್ನು ಶರತ್ಕಾಲದಲ್ಲಿ ವೇದವೇತ್ತೃವಾದ ಬ್ರಾಹ್ಮಣನಿಗೆ ಘೃತ ಗೋವಿನೊಡನೆ ದಾನ ಮಾಡುವ ಪುರುಷನು ತನ್ನ ಪಿತೃಗಳನ್ನು ನರಕದಿಂದ ಉದ್ಧರಿಸಿ ಸ್ವರ್ಗಕ್ಕೆ ಒಯ್ಯುವನು. ಅವನೂ ಸಹ ಬದುಕಿರುವವರೆಗೂ ಇಲ್ಲಿ ನಾನಾ ಭೋಗಗಳನ್ನನುಭವಿಸಿ ಅನಂತರ ವಿಷ್ಣುಪದವನ್ನು ಸೇರುವನು.

ಇಂತು ಶ್ರೀ ನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ಚತುರ್ಥಪಾದದಲ್ಲಿ ವಾಮನಪುರಾಣವಿಷಯಾನು ಕ್ರಮಣಿಕೆಯ ವರ್ಣನವೆಂಬ ನೂರೈದನೆಯ ಅಧ್ಯಾಯವು ಮುಗಿದುದು.

# ಷಡುತ್ತರಶತತಮೋಽಧ್ಯಾಯಃ

## ಬ್ರಹ್ಮೋವಾಚ

ಶೃಣು ವತ್ಸ ಮರೀಚೇ ತ್ವಂ ಪುರಾಣಂ ಕೂರ್ಮಸಂಜ್ಞಿತಂ ।
ಲಕ್ಷ್ಮೀಕಲ್ಪಾನುಚರಿತಂ ಯತ್ರ ಕೂರ್ಮವಪುರ್ಹರಿಃ ॥ ೧ ॥

ಧರ್ಮಾರ್ಥಕಾಮಮೋಕ್ಷಾಣಾಂ ಮಾಹಾತ್ಮ್ಯಂ ಚ ಪೃಥಕ್ಪೃಥಕ್ ।
ಇಂದ್ರದ್ಯುಮ್ನಪ್ರಸಂಗೇನ ಪ್ರಾಹರ್ಷಿಭ್ಯೋ ದಯಾನ್ವಿತಃ ॥ ೨ ॥

ತತ್ಸಪ್ತದಶಸಾಹಸ್ರಂ ಸುಚತುಃಸಂಹಿತಂ ಶುಭಂ ।
ಯತ್ರ ಬ್ರಾಹ್ಮಾಃ ಪುರಾ ಪ್ರೋಕ್ತಾ ಧರ್ಮಾ ನಾನಾವಿಧಾ ಮುನೇ ॥ ೩ ॥

ನಾನಾಕಥಾಪ್ರಸಂಗೇನ ನೃಣಾಂ ಸದ್ಗತಿದಾಯಕಾಃ ।
ತತ್ರ ಪೂರ್ವವಿಭಾಗೇ ತು ಪುರಾಣೋಪಕ್ರಮಃ ಪುರಾ ॥ ೪ ॥

---

## ನೂರಾರನೆಯ ಅಧ್ಯಾಯವು

೧-೨. ಬ್ರಹ್ಮನು ಹೇಳಿದನು:—ವತ್ಸ! ಮರೀಚಿ, ಕೂರ್ಮರೂಪಿಯಾದ ಹರಿಯು ದಯೆಯಿಟ್ಟು ಧರ್ಮ, ಅರ್ಥ, ಕಾಮ. ಮೋಕ್ಷಗಳ ಮಾಹಾತ್ಮ್ಯಯನ್ನು ಪ್ರತ್ಯೇಕ ಪ್ರತ್ಯೇಕವಾಗಿ ಇಂದ್ರದ್ಯುಮ್ನಪ್ರಸಂಗದಿಂದ ಋಷಿಗಳಿಗೆ ಹೇಳಿರುವ, ಲಕ್ಷ್ಮೀಕಲ್ಪಚರಿತ್ರರೂಪವಾದ ಕೂರ್ಮಪುರಾಣವನ್ನು ಹೇಳುವೆನು ಕೇಳು.

೩-೪. ಆ ಪುರಾಣವು ಹದಿನೇಳು ಸಾವಿರ ಗ್ರಂಥಗರ್ಭಿತವಾದ ನಾಲ್ಕು ಸಂಹಿತೆಗಳಿಂದ ಕೂಡಿದೆ. ಅದರಲ್ಲಿ ಮನುಷ್ಯರಿಗೆ ಸದ್ಗತಿದಾಯಕಗಳಾದ ನಾನಾವಿಧಬ್ರಾಹ್ಮಧರ್ಮಗಳು ನಾನಾಕಥಾಪ್ರಸಂಗದಿಂದ ಉಕ್ತವಾಗಿವೆ.

ಲಕ್ಷ್ಮೀಂದ್ರದ್ಯುಮ್ನಸಂವಾದಃ ಕೂರ್ಮರ್ಷಿಗಣಸಂಕಥಾ ।
ವರ್ಣಾಶ್ರಮಾಚಾರಕಥಾ ಜಗದುತ್ಪತ್ತಿಕೀರ್ತನಂ ॥ ೫ ॥

ಕಾಲಸಂಖ್ಯಾ ಸಮಾಸೇನ ಲಯಾಂತೇ ಸ್ತವನಂ ವಿಭೋಃ ।
ತತಃ ಸಂಕ್ಷೇಪತಃ ಸರ್ಗಃ ಶಾಂಕರಂ ಚರಿತಂ ತಥಾ ॥ ೬ ॥

ಸಹಸ್ರನಾಮ ಪಾರ್ವತ್ಯಾ ಯೋಗಸ್ಯ ಚ ನಿರೂಪಣಂ ।
ಯುಗಧರ್ಮಾನುಕಥನಂ ವ್ಯಾಸಜೈಮಿನಿಕೀ ತಥಾ ॥ ೭ ॥

ವಾರಾಣಸ್ಯಾಶ್ಚ ಮಾಹಾತ್ಮ್ಯಂ ಪ್ರಯಾಗಸ್ಯ ತತಃ ಪರಂ ।
ತ್ರೈಲೋಕ್ಯವರ್ಣನಂ ಚೈವ ವೇದಶಾಖಾನಿರೂಪಣಂ ॥ ೮ ॥

ಉತ್ತರೇಸ್ಯಾ ವಿಭಾಗೇ ತು ಪುರಾ ಗೀತೈಶ್ವರೀ ತತಃ ।
ವ್ಯಾಸಗೀತಾ ತತಃ ಪ್ರೋಕ್ತಾ ನಾನಾಧರ್ಮಪ್ರಬೋಧಿನೀ ॥ ೯ ॥

---

## ಕೂರ್ಮಪುರಾಣ. ಪೂರ್ವಭಾಗ

೪-೨೧. ಲಕ್ಷ್ಮೀಂದ್ರದ್ಯುಮ್ನಸಂವಾದ, ಕೂರ್ಮಋಷಿಗಣಸಂಭಾಷಣೆ, ವರ್ಣಾಶ್ರಮಾಚಾರಕಥೆ, ಜಗದುತ್ಪತ್ತಿಕಥನ, ಸಂಕ್ಷೇಪವಾಗಿ ಕಾಲಸಂಖ್ಯೆ, ಪ್ರಳಯಾಂತ್ಯದಲ್ಲಿ ಸ್ವಾಮಿಯ ಸ್ತೋತ್ರ, ಸಂಕ್ಷೇಪವಾಗಿ ಸೃಷ್ಟಿಯ ವರ್ಣನೆ, ಶಂಕರಚರಿತ್ರೆ, ಪಾರ್ವತೀಸಹಸ್ರನಾಮ, ಯೋಗಧರ್ಮನಿರೂಪಣೆ, ಯುಗಧರ್ಮ ಕಥನ, ವ್ಯಾಸಜೈಮಿನಿಸಂವಾದ, ವಾರಾಣಸೀಪ್ರಯಾಗಗಳ ಮಾಹಾತ್ಮ್ಯ, ತ್ರೈಲೋಕ್ಯವರ್ಣನೆ, ವೇದಶಾಖಾನಿರೂಪಣೆ.

## ಉತ್ತರಭಾಗ

ಬ್ರಾಹ್ಮೀಸಂಹಿತೆ—ಈಶ್ವರಗೀತಾ, ನಾನಾಧರ್ಮಬೋಧಕ ವ್ಯಾಸಗೀತೆ, ಪ್ರತ್ಯೇಕಪ್ರತ್ಯೇಕವಾಗಿ ನಾನಾವಿಧತೀರ್ಥಮಾಹಾತ್ಮ್ಯಗಳು, ಪ್ರತಿ ಸರ್ಗ ಕಥನ.

ನಾನಾವಿಧಾನಾಂ ತೀರ್ಥಾನಾಂ ಮಾಹಾತ್ಮ್ಯಂ ಚ ಪೃಥಕ್‌ಪೃಥಕ್ ।
ಪ್ರತಿಸರ್ಗಪ್ರಕಥನಂ ಬ್ರಾಹ್ಮೀಯಂ ಸಂಹಿತಾ ಸ್ಮೃತಾ ॥ ೧೦ ॥

ಅತಃ ಪರಂ ಭಾಗವತೀಸಂಹಿತಾರ್ಥನಿರೂಪಣಂ ।
ಕಥಿತಾ ಯತ್ರ ವರ್ಣಾನಾಂ ಪೃಥಗ್ವೃತ್ತಿರುದಾಹೃತಾ ॥ ೧೧ ॥

ಪಾದೇಸ್ಯಾಃ ಪ್ರಥಮೇ ಪ್ರೋಕ್ತಾ ಬ್ರಾಹ್ಮಣಾನಾಂ ವ್ಯವಸ್ಥಿತಿಃ ।
ಸದಾಚಾರಾತ್ಮಿಕಾ ವತ್ಸ ಭೋಗಸೌಖ್ಯವಿವರ್ಧಿನೀ ॥ ೧೨ ॥

ದ್ವಿತೀಯೇ ಕ್ಷತ್ರಿಯಾಣಾಂ ತು ವೃತ್ತಿಃ ಸಮ್ಯಕ್‌ಪ್ರಕೀರ್ತಿತಾ ।
ಯಯಾ ತ್ವಾಶ್ರಿತಯಾ ಪಾಪಂ ವಿಧೂಯೇಹ ವ್ರಜೇದ್ದಿವಂ ॥ ೧೩ ॥

ತೃತೀಯೇ ವೈಶ್ಯಜಾತೀನಾಂ ವೃತ್ತಿರುಕ್ತಾ ಚತುರ್ವಿಧಾ ।
ಯಯಾ ಚರಿತಯಾ ಸಮ್ಯಕ್ ಲಭತೇ ಗತಿಮುತ್ತಮಾಂ ॥ ೧೪ ॥

ಚತುರ್ಥೇಸ್ಯಾಸ್ತಥಾ ಪಾದೇ ಶೂದ್ರವೃತ್ತಿರುದಾಹೃತಾ ।
ಯಯಾ ಸಂತುಷ್ಯತಿ ಶ್ರೀಶೋ ನೃಣಾಂ ಶ್ರೇಯೋವಿವರ್ಧನಃ ॥ ೧೫ ॥

ಪಂಚಮೇಸ್ಯಾಸ್ತತಃ ಪಾದೇ ವೃತ್ತಿಃ ಸಂಕರಜೋದಿತಾ ।
ಯಯಾ ಚರಿತಯಾ ಸಮ್ಯಕ್ ಲಭತೇ ಗತಿಮುತ್ತಮಾಂ ॥ ೧೬ ॥

---

ಭಾಗವತೀ ಸಂಹಿತೆ—ಪ್ರತ್ಯೇಕವಾಗಿ ವರ್ಣಧರ್ಮಗಳ ನಿರೂಪಣೆ, ಪ್ರಥಮ ಪಾದದಲ್ಲಿ ಭೋಗಸೌಖ್ಯಾಭಿವೃದ್ಧಿಕರವಾದ ಬ್ರಾಹ್ಮಣರ ಸದಾಚಾರಾತ್ಮಕಸ್ಥಿತಿ, ದ್ವಿತೀಯಪಾದದಲ್ಲಿ ಸ್ವರ್ಗಲೋಕಸಾಧಕವಾದ ಕ್ಷತ್ರಿಯವೃತ್ತಿನಿರೂಪಣೆ, ತೃತೀಯಪಾದದಲ್ಲಿ ಸದ್ಗತಿಸಾಧಕವಾದ ವೈಶ್ಯಜಾತಿಯ ಚತುರ್ವಿಧ ವೃತ್ತಿಗಳ ನಿರೂಪಣೆ, ಚತುರ್ಥಪಾದದಲ್ಲಿ ಮನುಷ್ಯರಿಗೆ ಶ್ರೇಯಸ್ಸನ್ನು ಅಭಿವೃದ್ಧಿಗೊಳಿಸುವ, ಶ್ರೀಶನು ಸಂತುಷ್ಟನಾಗುವಂತಹ ಶೂದ್ರವೃತ್ತಿಯ ನಿರೂಪಣೆ. ಇದರ ಐದನೆಯ ಪಾದದಲ್ಲಿ ಉತ್ತಮಗತಿಸಾಧಕವಾದ ಸಂಕರಜಾತಿಧರ್ಮಗಳ ನಿರೂಪಣೆ, ಈ ರೀತಿಯಾಗಿ ದ್ವಿತೀಯಸಂಹಿತೆಯು ಐದು ಪಾದಗಳಿಂದ ಕೂಡಿದೆ.

ಇತ್ಯೇಷಾ ಪಂಚಪದ್ಯುಕ್ತಾ ದ್ವಿತೀಯಾ ಸಂಹಿತಾ ಮುನೇ |
ತೃತೀಯಾ ಚೋದಿತಾ ಸೌರೀ ನೃಣಾಂ ಕಾರ್ಯವಿಧಾಯಿನೀ || ೧೭ ||

ಷೋಢಾ ಷಟ್ಕರ್ಮಸಿದ್ಧೀನಾಂ ಬೋಧಯಂತೀ ಚ ಕಾಮಿನಾಂ |
ಚತುರ್ಥೀ ವೈಷ್ಣವೀ ನಾಮ ಮೋಕ್ಷದಾ ಪರಿಕೀರ್ತಿತಾ || ೧೮ ||

ಚತುಷ್ಪದೀ ದ್ವಿಜಾತೀನಾಂ ಸಾಕ್ಷಾದ್ಬ್ರಹ್ಮಸ್ವರೂಪಿಣೀ |
ತಾಃ ಕ್ರಮಾತ್ ಷಟ್ಚತುರ್ದ್ವಿಪಂಚಸಾಹಸ್ರಾಃ ಪರಿಕೀರ್ತಿತಾಃ || ೧೯ ||

ಏತತ್ಕೂರ್ಮಪುರಾಣಂ ತು ಚತುರ್ವರ್ಗಫಲಪ್ರದಂ |
ಪಠತಾಂ ಶೃಣ್ವತಾಂ ನೃಣಾಂ ಸರ್ವೋತ್ಕೃಷ್ಟಗತಿಪ್ರದಂ || ೨೦ ||

ಲಿಖಿತ್ವೈತತ್ತು ಯೋ ಭಕ್ತ್ಯಾ ಹೇಮಕೂರ್ಮಸಮನ್ವಿತಂ |
ಬ್ರಾಹ್ಮಣಾಯ ತು ಯೋ ದದ್ಯಾತ್ಸ ಯಾತಿ ಪರಮಾಂ ಗತಿಂ || ೨೧ ||

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ಕೂರ್ಮಪುರಾಣವಿಷಯಾನುಕ್ರಮಣೀಕಥನಂ ನಾಮ ಷಡುತ್ತರಶತತಮೋಽಧ್ಯಾಯಃ

ಮನುಷ್ಯರ ಕರ್ತವ್ಯವಿಧಾಯಕವಾದ ಸೌರಸಂಹಿತೆಯು ಮೂರನೆಯದು. ಅದು ಕಾಮಿಗಳಿಗೆ ಆರು ವಿಧವಾಗಿ ಷಟ್ಕರ್ಮಸಿದ್ಧಿಗಳನ್ನು ಬೋಧಿಸುತ್ತದೆ. ನಾಲ್ಕನೆಯದಾದ ವೈಷ್ಣವಸಂಹಿತೆಯು ಮೋಕ್ಷಪ್ರದವೆಂದು ಉಕ್ತವಾಗಿದೆ. ಈರೀತಿಯಾದ ನಾಲ್ಕು ಸಂಹಿತೆಯು ದ್ವಿಜಾತಿಗಳಿಗೆ ಸಾಕ್ಷಾದ್ಬ್ರಹ್ಮಸ್ವರೂಪವು, ಆ ನಾಲ್ಕು ಸಂಹಿತೆಗಳು ಕ್ರಮವಾಗಿ 6, 4, 2, 5, ಸಾವಿರ ಗ್ರಂಥಗಳುಳ್ಳದಾಗಿವೆ.

ಈ ಕೂರ್ಮಪುರಾಣವು ಚತುರ್ವರ್ಗಫಲಪ್ರದವು ಶ್ರವಣಪಠನಮಾಡುವವರಿಗೆ ಸರ್ವೋತ್ತಮಗತಿದಾಯಕವು. ಈ ಪುರಾಣವನ್ನು ಬರೆದು ಬಂಗಾರದ ಆಮೆಯ ಸಹಿತವಾಗಿ ಅದನ್ನು ಬ್ರಾಹ್ಮಣನಿಗೆ ಭಕ್ತಿಯಿಂದ ದಾನಮಾಡುವವನು ಉತ್ತಮಗತಿಯನ್ನು ಪಡೆಯುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ಕೂರ್ಮಪುರಾಣವಿಷಯಾನುಕ್ರಮಣಿಕೆಯೆಂಬ ನೂರಾರನೆಯ ಅಧ್ಯಾಯವು ಮುಗಿದುದು.

## ಸಪ್ತೋತ್ತರಶತತಮೋಽಧ್ಯಾಯಃ

### ಶ್ರೀಬ್ರಹ್ಮೋವಾಚ

ಅಥ ಮಾತ್ಸ್ಯಂ ಪುರಾಣಂ ತೇ ಪ್ರವಕ್ಷ್ಯೇ ದ್ವಿಜಸತ್ತಮ ।
ಯತ್ರೋಕ್ತಂ ಸಪ್ತಕಲ್ಪಾನಾಂ ವೃತ್ತಂ ಸಂಕ್ಷಿಪ್ಯ ಭೂತಲೇ ॥ ೧ ॥

ವ್ಯಾಸೇನ ವೇದವಿದುಷಾ ನರಸಿಂಹೋಪವರ್ಣನಂ ।
ಉಪಕ್ರಮ್ಯ ತದುದ್ದಿಷ್ಟಂ ಚತುರ್ದಶಸಹಸ್ರಕಂ ॥ ೨ ॥

ಮನುಮತ್ಸ್ಯಸುಸಂವಾದೋ ಬ್ರಹ್ಮಾಂಡಕಥನಂ ತತಃ ।
ಬ್ರಹ್ಮದೇವಾಸುರೋತ್ಪತ್ತಿರ್ಮಾರುತೋತ್ಪತ್ತಿರೇವ ಚ ॥ ೩ ॥

ಮದನದ್ವಾದಶೀ ತದ್ವಲ್ಲೋಕಪಾಲಾಭಿಪೂಜನಂ ।
ಮನ್ವಂತರಸಮುದ್ದೇಶೋ ವೈಶ್ಯರಾಜ್ಯಾಭಿವರ್ಣನಂ ॥ ೪ ॥

---

### ನೂರೇಳನೆಯ ಅಧ್ಯಾಯವು

೧-೩೦. ಬ್ರಹ್ಮನು ಹೇಳಿದನು—ದ್ವಿಜಶ್ರೇಷ್ಠನೇ! ನಿನಗೆ ಸಂಕ್ಷೇಪವಾಗಿ ಏಳು ಕಲ್ಪಗಳ ವೃತ್ತಾಂತವನ್ನು ತಿಳಿಸುವಂತಹ ಮತ್ಸ್ಯಪುರಾಣ ವಿಷಯವನ್ನು ಹೇಳುವೆನು, ಕೇಳು.

ವೇದಜ್ಞಾನಿಯಾದ ವ್ಯಾಸಭಗವಂತನಿಂದ ನರಸಿಂಹೋಪವರ್ಣನೆಯನ್ನಾರಂಭಿಸಿ ಹದಿನಾಲ್ಕುಸಾವಿರಗ್ರಂಥಗಳಲ್ಲಿ ಪುರಾಣಾರ್ಥವು ನಿರೂಪಿಸಲ್ಪಟ್ಟಿದೆ.

ಮನುಮತ್ಸ್ಯಸಂವಾದ, ಬ್ರಹ್ಮಾಂಡಕಥನ, ಬ್ರಹ್ಮದೇವಾಸುರೋತ್ಪತ್ತಿ, ಮಾರುತೋತ್ಪತ್ತಿ, ಮದನ ದ್ವಾದಶೀ, ಲೋಕಪಾಲಕ ಪೂಜೆ, ಮನ್ವಂತರ ನಿರ್ದೇಶ, ವೈಶ್ಯರಾಜ್ಯಾಭಿವರ್ಣನೆ, ಸೂರ್ಯವೈವಸ್ವತೋತ್ಪತ್ತಿ, ಬುಧಸಂಗ

ಸೂರ್ಯವೈವಸ್ವತೋತ್ಪತ್ತಿರ್ಬುಧಸಂಗಮನಂ ತಥಾ ।
ಪಿತೃವಂಶಾನುಕಥನಂ ಶ್ರಾದ್ಧಕಾಲಸ್ತಥೈವ ಚ ॥ ೫ ॥

ಪಿತೃತೀರ್ಥಪ್ರಚಾರಶ್ಚ ಸೋಮೋತ್ಪತ್ತಿಸ್ತಥೈವ ಚ ।
ಕೀರ್ತನಂ ಸೋಮವಂಶಸ್ಯ ಯಯಾತಿಚರಿತಂ ತಥಾ ॥ ೬ ॥

ಕಾರ್ತವೀರ್ಯಸ್ಯ ಚರಿತಂ ಸೃಷ್ಟವಂಶಾನುಕೀರ್ತನಂ ।
ಭೃಗುಶಾಪಸ್ತಥಾ ವಿಷ್ಣೋರ್ದಶಧಾ ಜನ್ಮ ವೈ ಕ್ಷಿತೌ ॥ ೭ ॥

ಕೀರ್ತನಂ ಪುರುವಂಶಸ್ಯ ವಂಶೋ ಹೌತಾಶನಃ ಪರಂ ।
ಕ್ರಿಯಾಯೋಗಸ್ತತಃ ಪಶ್ಚಾತ್ಪುರಾಣಪರಿಕೀರ್ತನಂ ॥ ೮ ॥

ವ್ರತಂ ನಕ್ಷತ್ರಪುರುಷಂ ಮಾರ್ತಂಡಶಯನಂ ತಥಾ ।
ಕೃಷ್ಣಾಷ್ಟಮೀವ್ರತಂ ತದ್ವದ್ರೋಹಿಣೀಚಂದ್ರಸಂಜ್ಞಿತಂ ॥ ೯ ॥

ತಡಾಗವಿಧಿಮಾಹಾತ್ಮ್ಯಂ ಪಾದಪೋತ್ಸರ್ಗ ಏವ ಚ ।
ಸೌಭಾಗ್ಯಶಯನಂ ತದ್ವದಗಸ್ತ್ಯವ್ರತಮೇವ ಚ ॥ ೧೦ ॥

ತಥಾನಂತತೃತೀಯಾಯಾ ರಸಕಲ್ಯಾಣಿನೀವ್ರತಂ ।
ತಥೈವಾನಂದಕಾರ್ಯಾಶ್ಚ ವ್ರತಂ ಸಾರಸ್ವತಂ ಪುನಃ ॥ ೧೧ ॥

---

ಮನ, ಪಿತೃವಂಶಾನುಕಥನ, ಶ್ರಾದ್ಧಕಾಲ, ಪಿತೃತೀರ್ಥಪ್ರಚಾರ, ಸೋಮೋತ್ಪತ್ತಿ, ಸೋಮವಂಶಕೀರ್ತನೆ, ಯಯಾತಿಚರಿತ್ರೆ, ಕಾರ್ತವೀರ್ಯಚರಿತೆ, ಸೃಷ್ಟವಂಶಾನುಕೀರ್ತನೆ, ಭೃಗುಶಾಪ, ಭೂಮಿಯಲ್ಲಿ ವಿಷ್ಣುವಿನ ದಶಾವತಾರ, ಪುರುವಂಶಕೀರ್ತನೆ, ಅಗ್ನಿವಂಶ, ಕ್ರಿಯಾಯೋಗ, ಪುರಾಣಕೀರ್ತನೆ, ನಕ್ಷತ್ರಪುರುಷಪ್ರತ, ಮಾರ್ತಂಡಶಯನವ್ರತ, ಕೃಷ್ಣಾಷ್ಟಮೀವ್ರತ, ತಡಾಗವಿಧಿಮಾಹಾತ್ಮ್ಯ, ಪಾದಪೋತ್ಸರ್ಗ, ಸೌಭಾಗ್ಯಶಯನ, ಅಗಸ್ತ್ಯವ್ರತ, ಅನಂತತೃತೀಯಾರಸಕಲ್ಯಾಣಿನೀವ್ರತ, ಆನಂದಕಾರಿ ಸಾರಸ್ವತ ವ್ರತ, ಉಪರಾಗಾಭಿ

ಉಪರಾಗಾಭಿಷೇಕಶ್ಚ ಸಪ್ತಮೀ ಶಯನಂ ತಥಾ ।
ಭೀಮಾಖ್ಯಾ ದ್ವಾದಶೀ ತದ್ವದನಂಗಶಯನಂ ತಥಾ ॥ ೧೨ ॥

ಅಶೂನ್ಯಶಯನಂ ತದ್ವತ್ತಥೈವಾಂಗಾರಕವ್ರತಂ ।
ಸಪ್ತಮೀ ಸಪ್ತಕಂ ತದ್ವದ್ವಿಶೋಕ ದ್ವಾದಶೀವ್ರತಂ ॥ ೧೩ ॥

ಮೇರುಪ್ರದಾನಂ ದಶಧಾ ಗ್ರಹಶಾಂತಿಸ್ತಥೈವ ಚ ।
ಗ್ರಹಸ್ವರೂಪಕಥನಂ ತಥಾ ಶಿವಚತುರ್ದಶೀ ॥ ೧೪ ॥

ತಥಾ ಸರ್ವಫಲತ್ಯಾಗಃ ಸೂರ್ಯವಾರವ್ರತಂ ತಥಾ ।
ಸಂಕ್ರಾಂತಿಸ್ನಪನಂ ತದ್ವದ್ವಿಭೂತಿದ್ವಾದಶೀವ್ರತಂ ॥ ೧೫ ॥

ಷಷ್ಠಿವ್ರತಾನಾಂ ಮಾಹಾತ್ಮ್ಯಂ ತಥಾ ಸ್ನಾನವಿಧಿಕ್ರಮಃ ।
ಪ್ರಯಾಗಸ್ಯ ತು ಮಾಹಾತ್ಮ್ಯಂ ದ್ವೀಪಲೋಕಾನುವರ್ಣನಂ ॥ ೧೬ ॥

ತಥಾಂತರಿಕ್ಷಚಾರಶ್ಚ ಧ್ರುವಮಾಹಾತ್ಮ್ಯಮೇವ ಚ ।
ಭವನಾನಿ ಸುರೇಂದ್ರಾಣಾಂ ತ್ರಿಪುರೋದ್ಯೋತನಂ ತಥಾ ॥ ೧೭ ॥

ಪಿತೃಪ್ರವರಮಾಹಾತ್ಮ್ಯಂ ದ್ವೀಪಲೋಕಾನುವರ್ಣನಂ ।
ಪಿತೃಪ್ರವರಮಾಹಾತ್ಮ್ಯಂ ಮನ್ವಂತರವಿನಿರ್ಣಯಃ ॥ ೧೮ ॥

---

ಷೇಕ, ಸಪ್ತಮೀಶಯನ, ಭೀಮದ್ವಾದಶೀ, ಅನಂಗಶಯನ, ಅಶೂನ್ಯಶಯನ, ಅಂಗಾರಕವ್ರತಗಳು, ಸಪ್ತಮೀಸಪ್ತಕ, ವಿಶೋಕದ್ವಾದಶೀವ್ರತಗಳು, ಮೇರುಪ್ರದಾನ, ಹತ್ತು ವಿಧಗ್ರಹಶಾಂತಿ, ಗ್ರಹಸ್ವರೂಪಕಥನೆ, ಶಿವಚತುರ್ದಶೀ, ಸರ್ವಫಲತ್ಯಾಗ, ಸೂರ್ಯವಾರವ್ರತ, ಸಂಕ್ರಾಂತಿಸ್ನಾನ, ವಿಭೂತಿದ್ವಾದಶೀವ್ರತ, ಅರವತ್ತು ವ್ರತಗಳ ಮಾಹಾತ್ಮ್ಯ, ಸ್ನಾನವಿಧಿಕ್ರಮ, ಪ್ರಯಾಗಮಾಹಾತ್ಮ್ಯ, ದ್ವೀಪ, ಲೋಕಗಳ ವರ್ಣನೆ, ಅಂತರಿಕ್ಷಚಾರ, ಧ್ರುವಮಾಹಾತ್ಮ್ಯ, ಸುರೇಂದ್ರಭವನಗಳು, ತ್ರಿಪುರೋದ್ಯೋತನ, ಪಿತೃಪ್ರವರಮಾಹಾತ್ಮ್ಯ, ದ್ವೀಪಲೋಕಾನುವರ್ಣನೆ, ಮನ್ವಂತರನಿರ್ಣಯ, ಚತುರ್ವರ್ಗಸಂಭವ, ಯುಗಧರ್ಮನಿರೂಪಣೆ,

ಚತುರ್ಯುಗಸ್ಯ ಸಂಭೂತಿರ್ಯುಗಧರ್ಮನಿರೂಪಣಂ |
ವಜ್ರಾಂಗಸ್ಯ ತು ಸಂಭೂತಿಸ್ತಾರಕೋತ್ಪತ್ತಿರೇವ ಚ || ೧೯ ||

ತಾರಕಾಸುರಮಾಹಾತ್ಮ್ಯಂ ಬ್ರಹ್ಮದೇವಾನುಕೀರ್ತನಂ |
ಪಾರ್ವತೀಸಂಭವಸ್ತದ್ವತ್ತಥಾ ಶಿವತಪೋವನಂ || ೨೦ ||

ಅನಂಗದೇಹದಾಹಶ್ಚ ರತಿಶೋಕಸ್ತಥೈವ ಚ |
ಗೌರೀತಪೋವನಂ ತದ್ವಚ್ಛಿವೇನಾಥ ಪ್ರಸಾದನಂ || ೨೧ ||

ಪಾರ್ವತೀಋಷಿಸಂವಾದಸ್ತಥೈವೋದ್ವಾಹಮಂಗಳಂ |
ಕುಮಾರಸಂಭವಸ್ತದ್ವತ್ಕುಮಾರೀವಿಜಯಸ್ತಥಾ || ೨೨ ||

ತಾರಕಸ್ಯ ವಧೋ ಘೋರೋ ನರಸಿಂಹೋಪವರ್ಣನಂ |
ಪದ್ಮೋದ್ಭವವಿಸರ್ಗಸ್ತು ತಥೈವಾಂಧಕಪಾತನಂ || ೨೩ ||

ವಾರಾಣಸ್ಯಾಸ್ತು ಮಾಹಾತ್ಮ್ಯಂ ನರ್ಮದಾಯಾಸ್ತಥೈವ ಚ |
ಪ್ರವರಾನುಕ್ರಮಸ್ತದ್ವತ್ಪಿತೃಗಾಥಾನುಕೀರ್ತನಂ || ೨೪ ||

---

ವಜ್ರಾಂಗೋತ್ಪತ್ತಿ, ತಾರಕೋತ್ಪತ್ತಿ, ತಾರಕಾಸುರಮಾಹಾತ್ಮ್ಯ, ಬ್ರಹ್ಮದೇವಾನುಕೀರ್ತನೆ, ಪಾರ್ವತ್ಯುತ್ಪತ್ತಿ, ಶಿವತಪೋವನ.

ಮನ್ಮಥಶರೀರದಹನ, ರತಿಶೋಕ, ಗೌರೀತಪೋವನ, ಶಿವಪ್ರಸಾದ, ಪಾರ್ವತೀ ಋಷಿಸಂವಾದ, ವಿವಾಹಮಂಗಳ, ಕುಮಾರೋತ್ಪತ್ತಿ, ಕುಮಾರೀ ವಿಜಯ, ತಾರಕವಧೆ, ನರಸಿಂಹೋಪವರ್ಣನೆ, ಬ್ರಹ್ಮಸೃಷ್ಟಿ, ಅಂಧಕಪಾತನ, ವಾರಾಣಸೀಮಾಹಾತ್ಮ್ಯ, ನರ್ಮದಾಮಾಹಾತ್ಮ್ಯ, ಪ್ರವರಾನುಕ್ರಮ, ಪಿತೃ ಗಾಥಾನುಕೀರ್ತನೆ, ಉಭಯಮುಖೀದಾನ, ಕೃಷ್ಣಾಜಿನದಾನ, ಸಾವಿತ್ರ್ಯುಪಾ

ತಥೋಭಯಮುಖೀದಾನಂ ದಾನಂ ಕೃಷ್ಣಾಜಿನಸ್ಯ ಚ ।
ತತಃ ಸಾವಿತ್ರ್ಯುಪಾಖ್ಯಾನಂ ರಾಜಧರ್ಮಾಸ್ತಥೈವ ಚ　　॥ ೨೫ ॥

ವಿವಿಧೋತ್ಪಾತಕಥನಂ ಗ್ರಹಣಾಂತಸ್ತಥೈವ ಚ ।
ಯಾತ್ರಾನಿಮಿತ್ತಕಥನಂ ಸ್ವಪ್ನಮಂಗಲಕೀರ್ತನಂ　　॥ ೨೬ ॥

ವಾಮನಸ್ಯ ತು ಮಾಹಾತ್ಮ್ಯಂ ವಾರಾಹಸ್ಯ ತತಃ ಪರಂ ।
ಸಮುದ್ರಮಥನಂ ತದ್ವತ್ಕಾಲಕೂಟಾಭಿಶಾತನಂ　　॥ ೨೭ ॥

ದೇವಾಸುರವಿಮರ್ದಶ್ಚ ವಾಸ್ತುವಿದ್ಯಾ ತಥೈವ ಚ ।
ಪ್ರತಿಮಾಲಕ್ಷಣಂ ತದ್ವದ್ದೇವತಾಸ್ಥಾಪನಂ ತಥಾ　　॥ ೨೮ ॥

ಪ್ರಾಸಾದಲಕ್ಷಣಂ ತದ್ವನ್ಮಂಡಪಾನಾಂ ಚ ಲಕ್ಷಣಂ ।
ಭವಿಷ್ಯರಾಜ್ಞಾಮುದ್ದೇಶೋ ಮಹಾದಾನಾನುಕೀರ್ತನಂ　　॥ ೨೯ ॥

ಕಲ್ಪಾನುಕೀರ್ತನಂ ತದ್ವತ್ಪುರಾಣೇಽಸ್ಮಿನ್ಪ್ರಕೀರ್ತಿತಂ ।
ಪವಿತ್ರಮೇತತ್ಕಲ್ಯಾಣಮಾಯುಃಕೀರ್ತಿವಿವರ್ಧನಂ　　॥ ೩೦ ॥

---

ಖ್ಯಾನ, ರಾಜಧರ್ಮ, ಗ್ರಹಗಳ ನಾನಾವಿಧೋತ್ಪಾತಗಳ ವರ್ಣನೆ, ಯಾತ್ರಾ ನಿಮಿತ್ತಕಥನೆ, ಗ್ರಹನಿರ್ಣಯ ಸ್ವಪ್ನಮಂಗಳಕೀರ್ತನೆ, ವಾಮನಮಾಹಾತ್ಮ್ಯ, ವರಾಹಮಹಿಮೆ, ಸಮುದ್ರಮಥನ, ಕಾಲಕೂಟಾಭಿಶಾತನ, ದೇವಾಸುರವಿಮರ್ದ, ವಾಸ್ತುವಿದ್ಯಾ, ಪ್ರತಿಮಾಲಕ್ಷಣ, ದೇವತಾಸ್ಥಾಪನೆ, ಪ್ರಾಸಾದಲಕ್ಷಣ, ಮಂಟಪ ಲಕ್ಷಣ, ಭವಿಷ್ಯರಾಜನಿರ್ದೇಶ, ಮಹಾದಾನಕೀರ್ತನೆ, ಕಲ್ಪಾನುಕೀರ್ತನೆ ಇವು ಈ ಪುರಾಣದಲ್ಲಿ ಉಕ್ತವಾಗಿವೆ. ಈ ಪುರಾಣವು ಪವಿತ್ರವಾದುದು. ಇದು ಆಯುಸ್ಸು ಕೀರ್ತಿಗಳನ್ನು ಅಭಿವೃದ್ಧಿಪಡಿಸುವುದು.

**ಯಃ ಪಠೇಚ್ಛೃಣುಯಾದ್ವಾಪಿ ಸ ಯಾತಿ ಭವನಂ ಹರೇಃ ।**
**ಲಿಖಿತ್ವೈತತ್ತು ಯೋ ದದ್ಯಾದ್ಧೇಮಮತ್ಸ್ಯಗವಾಂಚಿತಂ ॥**
**ವಿಪ್ರಾಯಾಭ್ಯರ್ಚ್ಯ ವಿಷುವೇ ಸ ಯಾತಿ ಪರಮಂ ಪದಂ ॥ ೩೧ ॥**

**ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ಮತ್ಸ್ಯಪುರಾಣವಿಷಯಾನುಕ್ರಮಣೀ ಕಥನಂ ನಾಮ ಸಪ್ತೋತ್ತರಶತತಮೋಽಧ್ಯಾಯಃ**

---

೩೧. ಈ ಪುರಾಣಶ್ರವಣಪಠನೆಮಾಡುವವನು ಹರಿಯ ಮಂದಿರಕ್ಕೆ ಹೋಗುವವನು. ಈ ಪುರಾಣವನ್ನು ಬರೆದು ಸುವರ್ಣ ಮತ್ಸ್ಯಗೋಸಹಿತವಾಗಿ ಅದನ್ನು ಬ್ರಾಹ್ಮಣನಿಗೆ ವಿಷುವ ಪುಣ್ಯಕಾಲದಲ್ಲಿ ಸತ್ಕಾರಪೂರ್ವಕ ದಾನ ಮಾಡುವವನು ಮೋಕ್ಷವನ್ನು ಪಡೆಯುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ಮತ್ಸ್ಯಪುರಾಣವಿಷಯಾನುಕ್ರಮಣಿಕೆಯ ನಿರೂಪಣವೆಂಬ ನೂರೇಳನೆಯ ಅಧ್ಯಾಯವು ಮುಗಿದುದು.

## ಅಷ್ಟೋತ್ತರಶತತಮೋಽಧ್ಯಾಯಃ

### ಬ್ರಹ್ಮೋವಾಚ

ಮರೀಚೇ ಶೃಣು ವಕ್ಷ್ಯಾಮಿ ಪುರಾಣಂ ಗಾರುಡಂ ಶುಭಂ ।
ಗರುಡಾಯಾಬ್ರವೀತ್ಪೃಷ್ಟೋ ಭಗವಾನ್ ಗರುಡಾಸನಃ ॥ ೧ ॥

ಏಕೋನಪಿಂಶಸಾಹಸ್ರಂ ತಾರ್ಕ್ಷ್ಯಕಲ್ಪಕಥಾನ್ವಿತಂ ।
ಪುರಾಣೋಪಕ್ರಮುಪ್ರಶ್ನಃ ಸರ್ಗಃ ಸಂಕ್ಷೇಪತಸ್ತತಃ ॥ ೨ ॥

ಸೂರ್ಯಾದಿಪೂಜನವಿಧಿರ್ದೀಕ್ಷಾವಿಧಿರತಃ ಪರಂ ।
ಶ್ರಾದ್ಧಪೂಜಾ ತತಃ ಪಶ್ಚಾನ್ನವವ್ಯೂಹಾರ್ಚನಂ ದ್ವಿಜ ॥ ೩ ॥

ಪೂಜಾವಿಧಾನಂ ಚ ತಥಾ ವೈಷ್ಣವಂ ಪಂಜರಂ ತತಃ ।
ಯೋಗಾಧ್ಯಾಯಸ್ತತೋ ವಿಷ್ಣೋರ್ನಾಮಸಾಹಸ್ರಕೀರ್ತನಂ ॥ ೪ ॥

---

### ನೂರೆಂಟನೆಯ ಅಧ್ಯಾಯವು

೧-೨೦. ಬ್ರಹ್ಮನು ಹೇಳಿದನು—ಮರೀಚಿಯೇ ! ಶುಭವಾದ ಗರುಡ ಪುರಾಣದ ವಿಷಯವನ್ನು ಹೇಳುವೆನು. ಕೇಳು. ಗರುಡವಾಹನನಾದ ಭಗವಂತನು ಗರುಡನಿಗೆ ಈ ಪುರಾಣವನ್ನು ಹೇಳಿದನು.

ಈ ಪುರಾಣದಲ್ಲಿ ಹತ್ತೊಂಬತ್ತುಸಾವಿರಗ್ರಂಥಗಳಿವೆ. ತಾರ್ಕ್ಷ್ಯಕಲ್ಪ ವೃತ್ತಾಂತವು ಉಕ್ತವಾಗಿದೆ.

### ಗರುಡಪುರಾಣ— ಪೂರ್ವಖಂಡ

ಪುರಾಣೋಪಕ್ರಮುಪ್ರಶ್ನೆ, ಸಂಕ್ಷೇಪವಾಗಿ ಸೃಷ್ಟಿಕಥನೆ, ಸೂರ್ಯಾದಿ ಪೂಜಾ ವಿಧಿ, ದೀಕ್ಷಾವಿಧಾನ, ಶ್ರಾದ್ಧಪೂಜೆ, ನವವ್ಯೂಹಾರ್ಚನೆ, ಪೂಜೆಯ ವಿಧಾನ, ವೈಷ್ಣವಪಂಜರ, ಯೋಗಾಧ್ಯಾಯ, ವಿಷ್ಣುಸಹಸ್ರನಾಮ, ವಿಷ್ಣುಧ್ಯಾನ,

ಧ್ಯಾನಂ ವಿಷ್ಣೋಸ್ತತಃ ಸೂರ್ಯಪೂಜಾ ಮೃತ್ಯುಂಜಯಾರ್ಚನಂ ।
ಮಾಲಾಮಂತ್ರಾಃ ಶಿವಾರ್ಚಾಥ ಗಣಪೂಜಾ ತತಃ ಪರಂ ॥ ೫ ॥

ಗೋಪಾಲಪೂಜಾ ತ್ರೈಲೋಕ್ಯಮೋಹನಶ್ರೀಧರಾರ್ಚನಂ ।
ವಿಷ್ಣ್ವರ್ಚಾ ಪಂಚತತ್ತ್ವಾರ್ಚಾ ಚಕ್ರಾರ್ಚಾ ದೇವಪೂಜನಂ ॥ ೬ ॥

ನ್ಯಾಸಾದಿಸಂಧ್ಯೋಪಾಸ್ತಿಶ್ಚ ದುರ್ಗಾರ್ಚಾಥ ಸುರಾರ್ಚನಂ ।
ಪೂಜಾ ಮಾಹೇಶ್ವರೀ ಚಾತಃ ಪವಿತ್ರಾರೋಪಣಾರ್ಚನಂ ॥ ೭ ॥

ಮೂರ್ತಿಧ್ಯಾನಂ ವಾಸ್ತುಮಾನಾಂ ಪ್ರಾಸಾದಾನಾಂ ಚ ಲಕ್ಷಣಂ ।
ಪ್ರತಿಷ್ಠಾ ಸರ್ವದೇವಾನಾಂ ಪೃಥಕ್‌ಪೂಜಾ ವಿಧಾನತಃ ॥ ೮ ॥

ಯೋಗೋಷ್ಟಾಂಗೋ ದಾನಧರ್ಮಾಃ ಪ್ರಾಯಶ್ಚಿತ್ತವಿಧಿಕ್ರಿಯಾ ।
ದ್ವೀಪೇಶನರಕಾಖ್ಯಾನಂ ಸೂರ್ಯವ್ಯೂಹಶ್ಚ ಜ್ಯೋತಿಷಂ ॥ ೯ ॥

ಸಾಮುದ್ರಿಕಂ ಸ್ವರಜ್ಞಾನಂ ನವರತ್ನಪರೀಕ್ಷಣಂ ।
ಮಾಹಾತ್ಮ್ಯಮಥ ತೀರ್ಥಾನಾಂ ಗಯಾಮಾಹಾತ್ಮ್ಯಮುತ್ತಮಂ ॥ ೧೦ ॥

---

ಸೂರ್ಯಪೂಜೆ, ಮೃತ್ಯುಂಜಯಾರ್ಚನೆ, ಮಾಲಾಮಂತ್ರ, ಶಿವಪೂಜೆ, ಗಣಪೂಜೆ.

ಗೋಪಾಲಪೂಜೆ, ತ್ರೈಲೋಕ್ಯಮೋಹನಶ್ರೀಧರಾರ್ಚನೆ, ವಿಷ್ಣ್ವರ್ಚನೆ, ಪಂಚತತ್ತ್ವಾರ್ಚನೆ, ಚಕ್ರಾರ್ಚನೆ, ದೇವಪೂಜೆ, ನ್ಯಾಸಾದಿ, ಸಂಧ್ಯೋಪಾಸನೆ, ದುರ್ಗಾಪೂಜೆ, ಸುರಾರ್ಚನೆ, ಮಾಹೇಶ್ವರೀ ಪೂಜೆ, ಪವಿತ್ರಾರೋಪಣಾರ್ಚನೆ, ಮೂರ್ತಿಧ್ಯಾನ, ವಾಸ್ತುಮಾನ, ಪ್ರಾಸಾದಲಕ್ಷಣ, ಸರ್ವದೇವಪ್ರತಿಷ್ಠೆ, ವಿಧಾನಾನುಸಾರ ಪೃಥಕ್ಪೂಜೆ, ಅಷ್ಟಾಂಗಯೋಗ, ದಾನಧರ್ಮ, ಪ್ರಾಯಶ್ಚಿತ್ತ ವಿಧಾನ, ದ್ವೀಪೇಶನರಕಾಖ್ಯಾನ, ಸೂರ್ಯವ್ಯೂಹ, ಜ್ಯೋತಿಷ ಸಾಮುದ್ರಿಕ, ಸ್ವರಜ್ಞಾನ, ನವರತ್ನಪರೀಕ್ಷೆ, ತೀರ್ಥಮಾಹಾತ್ಮ್ಯ, ಉತ್ತಮವಾದ ಗಯಾ ಮಾಹಾತ್ಮ್ಯ, ಪ್ರತ್ಯೇಕಪ್ರತ್ಯೇಕವಾಗಿ ಮನ್ವಂತರ ಕಥೆಗಳು, ಪಿತ್ರಾಖ್ಯಾನ,

ತತೋ ಮನ್ವಂತರಾಖ್ಯಾನಂ ಪೃಥಕ್ಪೃಥಗ್ವಿಭಾಗಶಃ ।
ಪಿತ್ರಾಖ್ಯಾನಂ ವರ್ಣಧರ್ಮಾ ದ್ರವ್ಯಶುದ್ಧಿಃ ಸಮರ್ಪಣಂ ॥ ೧೧ ॥

ಶ್ರಾದ್ಧಂ ವಿನಾಯಕಸ್ಯಾರ್ಚಾ ಗ್ರಹಯಜ್ಞಸ್ತಥಾಶ್ರಮಾಃ ।
ಜನನಾಖ್ಯಂ ಪ್ರೇತಶೌಚಂ ನೀತಿಶಾಸ್ತ್ರಂ ವ್ರತೋಕ್ತಯಃ ॥ ೧೨ ॥

ಸೂರ್ಯವಂಶಃ ಸೋಮವಂಶೋಽವತಾರಕಥನಂ ಹರೇಃ ।
ರಾಮಾಯಣಂ ಹರೇರ್ವಂಶೋ ಭಾರತಾಖ್ಯಾನಕಂ ತತಃ ॥ ೧೩ ॥

ಆಯುರ್ವೇದನಿದಾನಂ ಪ್ರಾಕ್ ಚಿಕಿತ್ಸಾ ದ್ರವ್ಯಜಾ ಗುಣಾಃ ।
ರೋಗಘ್ನಂ ಕವಚಂ ವಿಷ್ಣೋರ್ಗಾರುಡಂ ತ್ರೈಪುರೋ ಮನುಃ ॥ ೧೪ ॥

ಪ್ರಶ್ನಚೂಡಾಮಣಿಶ್ಚಾಂತೋ ಹಯಾಯುರ್ವೇದಕೀರ್ತನಂ ।
ಓಷಧೀನಾಮಕಥನಂ ತತೋ ವ್ಯಾಕರಣೋಹನಂ ॥ ೧೫ ॥

ಛಂದಶ್ಶಾಸ್ತ್ರಂ ಸದಾಚಾರಸ್ತತಃ ಸ್ನಾನವಿಧಿಃ ಸ್ಮೃತಃ ।
ತರ್ಪಣಂ ವೈಶ್ವದೇವಂ ಚ ಸಂಧ್ಯಾಪಾರ್ವಣಕರ್ಮ ಚ ॥ ೧೬ ॥

ನಿತ್ಯಶ್ರಾದ್ಧಂ ಸಪಿಂಡಾಖ್ಯಂ ಧರ್ಮಸಾರೋಘನಿಷ್ಕೃತಿಃ ।
ಪ್ರತಿಸಂಕ್ರಮ ಉಕ್ತಾಃ ಸ್ಮ ಯುಗಧರ್ಮಾಃ ಕೃತೇಃ ಫಲಂ ॥ ೧೭ ॥

---

ವರ್ಣಧರ್ಮಗಳು, ದ್ರವ್ಯಶುದ್ಧಿ, ಸಮರ್ಪಣೆ, ಶ್ರಾದ್ಧ, ವಿನಾಯಕ ಪೂಜೆ, ಗ್ರಹಯಜ್ಞ, ಆಶ್ರಮ, ಜನನಾಶೌಚ, ಮೃತಾಶೌಚ, ನೀತಿಶಾಸ್ತ್ರ, ವ್ರತಕಥನೆ, ಸೂರ್ಯಚಂದ್ರರ ವಂಶಗಳು, ಹರಿಯ ಅವತಾರ ಕಥೆ, ರಾಮಾಯಣ, ಹರಿ ವಂಶ, ಭಾರತಾಖ್ಯಾನ, ಆಯುರ್ವೇದ ನಿದಾನ, ಪದಾರ್ಥಗಳ ಗುಣಗಳು, ಚಿಕಿತ್ಸೆ, ರೋಗಪರಿಹಾರಕ ವಿಷ್ಣುಕವಚ, ತ್ರೈಪುರಮಂತ್ರ, ಪ್ರಶ್ನಚೂಡಾಮಣಿ, ಹಯಾಯುರ್ವೇದಕೀರ್ತನೆ, ಮೂಲಿಕೆಗಳ ಹೆಸರು, ವ್ಯಾಕರಣ, ಛಂದಶ್ಶಾಸ್ತ್ರ, ಸದಾಚಾರ, ಸ್ನಾನವಿಧಿ, ತರ್ಪಣ, ವೈಶ್ವದೇವ, ಸಂಧ್ಯಾ, ಪಾರ್ವಣಕರ್ಮ, ನಿತ್ಯಶ್ರಾದ್ಧ, ಸಪಿಂಡಶ್ರಾದ್ಧ ಧರ್ಮಸಾರ, ಅಘನಿಷ್ಕೃತಿ, ಸಂಕ್ರಮಣ, ಯುಗ

ಯೋಗಶಾಸ್ತ್ರಂ ವಿಷ್ಣುಭಕ್ತಿರ್ನಮಸ್ಕೃತಿಫಲಂ ಹರೇಃ |
ಮಾಹಾತ್ಮ್ಯಂ ವೈಷ್ಣವಂ ಚಾಥ ನಾರಸಿಂಹಸ್ತವೋತ್ತಮಂ || ೧೮ ||

ಜ್ಞಾನಾಮೃತಂ ಗುಹಾಷ್ಟಕಂ ಸ್ತೋತ್ರಂ ವಿಷ್ಣ್ವರ್ಚನಾಹ್ವಯಂ |
ವೇದಾಂತಸಾಂಖ್ಯಸಿದ್ಧಾಂತೋ ಬ್ರಹ್ಮಜ್ಞಾನಂ ತಥಾತ್ಮಕಂ || ೧೯ ||

ಗೀತಾಸಾರಃ ಫಲೋತ್ಕೀರ್ತಿಃ ಪೂರ್ವಖಂಡೋಽಯಮೀರಿತಃ |
ಅಥಾಸ್ಯೈವೋತ್ತರೇ ಖಂಡೇ ಪ್ರೇತಕಲ್ಪಃ ಪುರೋದಿತಃ || ೨೦ ||

ಯತ್ರ ತಾರ್ಕ್ಷ್ಯೇಣ ಸಂಪೃಷ್ಟೋ ಭಗವಾನಾಹ ಬಾಡವಾಃ ।
ಧರ್ಮಪ್ರಕಟನಂ ಪೂರ್ವಂ ಯೋಗಿನಾಂ ಗತಿಕಾರಣಂ || ೨೧ ||

ದಾನಾದಿಕಂ ಫಲಂ ಚಾಪಿ ಪ್ರೋಕ್ತಮಂತ್ರೋರ್ಧ್ವದೈಹಿಕಂ |
ಯಮಲೋಕಸ್ಥಮಾರ್ಗಸ್ಯ ವರ್ಣನಂ ಚ ತತಃ ಪರಂ || ೨೨ ||

ಷೋಡಶಶ್ರಾದ್ಧಫಲಕೋ ವೃತ್ತಾಂತಶ್ಚಾತ್ರ ವರ್ಣಿತಃ |
ನಿಷ್ಕೃತಿರ್ಯಮಮಾರ್ಗಸ್ಯ ಧರ್ಮರಾಜಸ್ಯ ವೈಭವಂ || ೨೩ ||

---

ಧರ್ಮ, ಯೋಗಶಾಸ್ತ್ರ, ವಿಷ್ಣುಭಕ್ತಿ, ಹರಿನಮಸ್ಕಾರಫಲ, ವೈಷ್ಣವಮಾಹಾತ್ಮ್ಯ, ನರಸಿಂಹಸ್ತೋತ್ರ, ಜ್ಞಾನಾಮೃತ, ಗುಹಾಷ್ಟಕಸ್ತೋತ್ರ, ವಿಷ್ಣ್ವರ್ಚನೆ, ವೇದಾಂತ ಸಾಂಖ್ಯ ಸಿದ್ಧಾಂತ, ಬ್ರಹ್ಮಜ್ಞಾನ, ಗೀತಾಸಾರ, ಫಲಕೀರ್ತನೆ ಈ ವಿಷಯಗಳು ಪೂರ್ವಖಂಡದಲ್ಲಿ ಅಡಕವಾಗಿವೆ.

## ಉತ್ತರಖಂಡ (ಗರುಡಭಗವಂತರ ಪ್ರಶ್ನೋತ್ತರ)

೨೧-೩೪. ಪ್ರೇತಕಲ್ಪ, ಧರ್ಮಪ್ರಕಟನೆ, ಯೋಗಿಗತಿಕಾರಣ, ದಾನಾದಿ ಫಲ, ಔರ್ಧ್ವದೇಹಿಕಕರ್ಮ, ಯಮಲೋಕಮಾರ್ಗ, ಷೋಡಶಶ್ರಾದ್ಧಫಲ,

ಪ್ರೇತಪೀಡಾವಿನಿರ್ದೇಶಃ ಪ್ರೇತಚಿಹ್ನನಿರೂಪಣಂ ।
ಪ್ರೇತಾನಾಂ ಚರಿತಾಖ್ಯಾನಂ ಕಾರಣಂ ಪ್ರೇತತಾಂ ಪ್ರತಿ ॥ ೨೪ ॥

ಪ್ರೇತಕೃತ್ಯವಿಚಾರಶ್ಚ ಸಪಿಂಡೀಕರಣೋಕ್ತಯಃ ।
ಪ್ರೇತತ್ವಮೋಕ್ಷಣಾಖ್ಯಾನಂ ದಾನಾನಿ ಚ ವಿಮುಕ್ತಯೇ ॥ ೨೫ ॥

ಆವಶ್ಯಕೋತ್ತಮಂ ದಾನಂ ಪ್ರೇತಸೌಖ್ಯಕರೋಹನಂ ।
ಶಾರೀರಕವಿನಿರ್ದೇಶೋ ಯಮಲೋಕಸ್ಯ ವರ್ಣನಂ ॥ ೨೬ ॥

ಪ್ರೇತತ್ವೋದ್ಧಾರಕಥನಂ ಕರ್ಮಕರ್ತೃವಿನಿರ್ಣಯಃ ।
ಮೃತ್ಯೋಃ ಪೂರ್ವಕ್ರಿಯಾಖ್ಯಾನಂ ಪಶ್ಚಾತ್ಕರ್ಮನಿರೂಪಣಂ ॥ ೨೭ ॥

ಮಧ್ಯಷೋಡಶಕಶ್ರಾದ್ಧಂ ಸ್ವರ್ಗಪ್ರಾಪ್ತಿಕ್ರಿಯೋಹನಂ ।
ಸೂತಕಸ್ಯಾಥ ಸಂಖ್ಯಾನಂ ನಾರಾಯಣಬಲಿಕ್ರಿಯಾ ॥ ೨೮ ॥

ವೃಷೋತ್ಸರ್ಗಸ್ಯ ಮಾಹಾತ್ಮ್ಯಂ ನಿಷಿದ್ಧಪರಿವರ್ಜನಂ ।
ಅಪಮೃತ್ಯುಕ್ರಿಯೋಕ್ತಿಶ್ಚ ವಿಪಾಕಃ ಕರ್ಮಣಾಂ ನೃಣಾಂ ॥ ೨೯ ॥

ಹತ್ಯಾಕೃತ್ಯವಿಚಾರಶ್ಚ ವಿಷ್ಣುಧ್ಯಾನವಿಮುಕ್ತಯೇ ।
ಸ್ವರ್ಗತೌ ವಿಹಿತಾಖ್ಯಾನಂ ಸ್ವರ್ಗಸೌಖ್ಯನಿರೂಪಣಂ ॥ ೩೦ ॥

---

ಯಮಮಾರ್ಗಪರಿಹಾರೋಪಾಯ, ಧರ್ಮರಾಜನ ವೈಭವ, ಪ್ರೇತಪೀಡಾಕಥನ, ಪ್ರೇತಚಿಹ್ನೆ, ಪ್ರೇತಚರಿತ್ರೆ, ಪ್ರೇತತ್ವಕಾರಣ, ಪ್ರೇತಕೃತ್ಯವಿವರ, ಸಪಿಂಡೀಕರಣ, ಪ್ರೇತತ್ವಮೋಕ್ಷಣಾಖ್ಯಾನ, ಮುಕ್ತಿಸಾಧಕದಾನಗಳು, ಪ್ರೇತಸೌಖ್ಯಕರೋತ್ತಮದಾನ, ಶಾರೀರಕವಿನಿರ್ದೇಶ, ಯಮಲೋಕವರ್ಣನೆ, ಪ್ರೇತತ್ವೋದ್ಧಾರಕ್ರಮ, ಕರ್ಮಕರ್ತೃನಿರ್ಣಯ, ಮರಣಪೂರ್ವಭಾವಿಕ್ರಿಯೆ, ಮರಣಾನಂತರ ಕರ್ಮ, ಮಧ್ಯಷೋಡಶಕಶ್ರಾದ್ಧ, ಸ್ವರ್ಗಪ್ರಾಪ್ತಿಸಾಧನಕರ್ಮಗಳು, ಸೂತಕ ಪರಿಗಣನೆ, ನಾರಾಯಣಬಲಿಕ್ರಿಯೆ, ವೃಷೋತ್ಸರ್ಗಮಾಹಾತ್ಮ್ಯ, ನಿಷಿದ್ಧಪರಿವರ್ಜನೆ, ಅಪಮೃತ್ಯುಕ್ರಿಯಾಕಥನೆ, ಕರ್ಮವಿಪಾಕ, ಹನನಕೃತ್ಯವಿಚಾರ, ಮುಕ್ತಿಸಾಧಕ ವಿಷ್ಣುಧ್ಯಾನ, ಸ್ವರ್ಗಗಮನ ಸಾಧನ, ಸ್ವರ್ಗಸೌಖ್ಯನಿರೂಪಣೆ.

ಭೂಲೋ೯ಕವರ್ಣನಂ ಚೈವ ಸಪ್ತಾಧೋಲೋಕವರ್ಣನಂ ।
ಪಂಚೋರ್ಧ್ವಲೋಕಕಥನಂ ಬ್ರಹ್ಮಾಂಡಸ್ಥಿತಿಕೀರ್ತನಂ ॥ ೩೦ ॥

ಬ್ರಹ್ಮಾಂಡಾನೇಕಚರಿತಂ ಬ್ರಹ್ಮಜೀವನಿರೂಪಣಂ ।
ಆತ್ಯಂತಿಕಲಯಾಖ್ಯಾನಂ ಫಲಸ್ತುತಿನಿರೂಪಣಂ ॥ ೩೨ ॥

ಇತ್ಯೇತ್ ಗಾರುಡಂ ನಾಮ ಪುರಾಣಂ ಭುಕ್ತಿಮುಕ್ತಿದಂ ।
ಕೀರ್ತಿತಂ ಪಾಪಶಮನಂ ಪಠತಾಂ ಶೃಣ್ವತಾಂ ನೃಣಾಂ ॥ ೩೩ ॥

ಲಿಖಿತ್ವೈತತ್ಪುರಾಣಂ ತು ವಿಷುವೇ ಯಃ ಪ್ರಯಚ್ಛತಿ ।
ಸೌವರ್ಣಹಂಸಯುಗ್ಮಾಢ್ಯಂ ವಿಪ್ರಾಯ ಸ ದಿವಂ ವ್ರಜೇತ್ ॥ ೩೪ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ಗಾರುಡವಿಷಯಾನುಕ್ರಮಣೀವರ್ಣನಂ ನಾಮ ಅಷ್ಟೋತ್ತರಶತತಮೋಽಧ್ಯಾಯಃ

---

ಭೂಲೋಕವರ್ಣನೆ, ಏಳು ಅಧೋಲೋಕಗಳವರ್ಣನೆ, ಐದು ಊರ್ಧ್ವಲೋಕಗಳ ವರ್ಣನೆ, ಬ್ರಹ್ಮಾಂಡಸ್ಥಿತಿ ಕೀರ್ತನೆ, ಬ್ರಹ್ಮಾಂಡ ಚರಿತ್ರೆಗಳು, ಬ್ರಹ್ಮಜೀವ ನಿರೂಪಣೆ, ಆತ್ಯಂತಿಕಲಯಾಖ್ಯಾನ, ಫಲಸ್ತುತಿ.

ಈ ವಿಷಯಗಳನ್ನೊಳಗೊಂಡಿರುವ ಗರುಡಪುರಾಣವು, ಭೋಗಮೋಕ್ಷಪ್ರದವು. ಶ್ರವಣಪಠನೆಮಾಡುವ ಮನುಜರಿಗೆ ಪಾಪಪರಿಹಾರಕವು.

ಈ ಪುರಾಣವನ್ನು ಬರೆದು ಎರಡು ಸುವರ್ಣಹಂಸಗಳ ಸಹಿತವಾಗಿ ಅದನ್ನು ವಿಷುವ ಪುಣ್ಯಕಾಲದಲ್ಲಿ ಬ್ರಾಹ್ಮಣನಿಗೆ ದಾನಮಾಡುವವನು ಸ್ವರ್ಗಲೋಕಕ್ಕೆ ಹೋಗುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ಗರುಡಪುರಾಣವಿಷಯಾನುಕ್ರಮಣಿಕೆಯ ನಿರೂಪಣೆಯೆಂಬ ನೂರೆಂಟನೆಯ ಅಧ್ಯಾಯವು ಮುಗಿದುದು.

## ನವೋತ್ತರಶತತಮೋಽಧ್ಯಾಯಃ

### ಬ್ರಹ್ಮೋವಾಚ

ಶೃಣು ವತ್ಸ ಪ್ರವಕ್ಷ್ಯಾಮಿ ಬ್ರಹ್ಮಾಂಡಾಖ್ಯಂ ಪುರಾತನಮ್ ।
ಯಚ್ಚ ದ್ವಾದಶಸಾಹಸ್ರಮಾದಿಕಲ್ಪಕಥಾಯುತಮ್ ॥ ೧ ॥

ಪ್ರಕ್ರಿಯಾಖ್ಯಾನುಷಂಗಾಖ್ಯ ಉಪೋದ್ಘಾತಸ್ತೃತೀಯಕಮ್ ।
ಚತುರ್ಥ ಉಪಸಂಹಾರಃ ಪಾದಾಶ್ಚತ್ವಾರ ಏವ ಹಿ ॥ ೨ ॥

ಪೂರ್ವಪಾದದ್ವಯಂ ಪೂರ್ವೋ ಭಾಗೋತ್ರ ಸಮುದಾಹೃತಃ ।
ತೃತೀಯೋ ಮಧ್ಯಮೋ ಭಾಗಶ್ಚತುರ್ಥಸ್ತೂತ್ತರೋ ಮತಃ ॥ ೩ ॥

ಆದೌ ಕೃತ್ಯಸಮುದ್ದೇಶೋ ನೈಮಿಷಾಖ್ಯಾನಕಂ ತತಃ ।
ಹಿರಣ್ಯಗರ್ಭೋತ್ಪತ್ತಿಶ್ಚ ಲೋಕಕಲ್ಪನಮೇವ ಚ ॥ ೪ ॥

---

### ನೂರೊಂಬತ್ತನೆಯ ಅಧ್ಯಾಯವು

ಬ್ರಹ್ಮನು ಹೇಳಿದನು—ವತ್ಸ! ಆದಿಕಲ್ಪಕಥಾರೂಪವಾದ ಹನ್ನೆರಡು ಸಾವಿರ ಗ್ರಂಥಗಳುಳ್ಳ ಬ್ರಹ್ಮಾಂಡಪುರಾಣವಿಷಯವನ್ನು ಹೇಳುವೆನು ಕೇಳು.

೨. ಈ ಪುರಾಣದಲ್ಲಿ ಪ್ರಕ್ರಿಯಾ, ಅನುಷಂಗ, ಉಪೋದ್ಘಾತ, ಉಪಸಂಹಾರ ಎಂಬುದಾಗಿ ನಾಲ್ಕು ಪಾದಗಳಿವೆ.

೩. ಪ್ರಕ್ರಿಯಾ, ಅನುಷಂಗ ಎಂಬ ಎರಡು ಪಾದಗಳು ಪೂರ್ವಭಾಗವೆಂದೂ, ಉಪೋದ್ಘಾತ ಮತ್ತು ಉಪಸಂಹಾರವೆಂಬ ಎರಡು ಪಾದಗಳು ಉತ್ತರಭಾಗವೆಂತಲೂ ವಿಂಗಡಿಸಲ್ಪಟ್ಟಿದೆ.

### ಪ್ರಥಮಪಾದ

೪–೧೩. ಕರ್ತವ್ಯನಿರ್ದೇಶ, ನೈಮಿಷಾಖ್ಯಾನ, ಹಿರಣ್ಯಗರ್ಭನಉತ್ಪತ್ತಿ, ಲೋಕಕಲ್ಪನೆ ಇವುಗಳು ಪ್ರಥಮಪಾದದಲ್ಲಿ ಅಡಕವಾಗಿವೆ.

ಏಷ ವೈ ಪ್ರಥಮಃ ಪಾದೋ ದ್ವಿತೀಯಂ ಶೃಣು ಮಾನದ ।
ಕಲ್ಪಮನ್ವಂತರಾಖ್ಯಾನಂ ಲೋಕ್ಯಜ್ಞಾನಂ ತತಃ ಪರಂ ॥ ೫ ॥

ಮಾನಸೀಸೃಷ್ಟಿಕಥನಂ ರುದ್ರಪ್ರಸವವರ್ಣನಂ ।
ಮಹಾದೇವವಿಭೂತಿಶ್ಚ ಋಷಿಸರ್ಗಸ್ತತಃ ಪರಂ ॥ ೬ ॥

ಅಗ್ನೀನಾಂ ವಿಜಯಶ್ಚಾಥ ಕಾಲಸದ್ಭಾವವರ್ಣನಂ ।
ಪ್ರಿಯವ್ರತಾನ್ವಯೋದ್ದೇಶಃ ಪೃಥಿವ್ಯಾಯಾಮವಿಸ್ತರಃ ॥ ೭ ॥

ವರ್ಣನಂ ಭಾರತಸ್ಯಾಸ್ಯ ತತೋನ್ಯೇಷಾಂ ನಿರೂಪಣಂ ।
ಜಂಬ್ವಾದಿಸಪ್ತದ್ವೀಪಾಖ್ಯಾ ತತೋಧೋಲೋಕವರ್ಣನಂ ॥ ೮ ॥

ಊರ್ಧ್ವಲೋಕಾನುಕಥನಂ ಗ್ರಹಚಾರಸ್ತತಃ ಪರಂ ॥
ಆದಿತ್ಯವ್ಯೂಹಕಥನಂ ದೇವಾನುಗ್ರಹಕೀರ್ತನಂ ॥ ೯ ॥

ನೀಲಕಂಠಾಹ್ವಯಾಖ್ಯಾನಂ ಮಹಾದೇವಸ್ಯ ವೈಭವಂ ।
ಅಮಾವ್ಯಾಸಾನುಕಥನಂ ಯುಗತತ್ತ್ವನಿರೂಪಣಂ ॥ ೧೦ ॥

ಯಜ್ಞಪ್ರವರ್ತನಂ ಚಾಥ ಯುಗಯೋರಂತ್ಯಯೋಃ ಕೃತಿಃ ।
ಯುಗಪ್ರಜ್ಞಾಲಕ್ಷಣಂ ಚ ಋಷಿಪ್ರವರವರ್ಣನಂ ॥ ೧೧ ॥

---

## ದ್ವಿತೀಯಪಾದ

ಕಲ್ಪಮನ್ವಂತರಗಳಾಖ್ಯಾನ, ಲೋಕಜ್ಞಾನ, ಮಾನಸಸೃಷ್ಟಿ, ರುದ್ರಸೃಷ್ಟಿ, ಮಹಾದೇವವಿಭೂತಿ, ಋಷಿಸೃಷ್ಟಿ, ಅಗ್ನಿವಿಜಯ, ಕಾಲಸದ್ಭಾವ, ಪ್ರಿಯವ್ರತವಂಶಕಥನೆ, ಪೃಥಿವಿಯ ವಿಸ್ತಾರ, ಈ ಭರತಖಂಡ ವರ್ಣನೆ, ಇತರ ಖಂಡಗಳ ನಿರೂಪಣೆ, ಜಂಬೂ ಮುಂತಾದ ಏಳು ದ್ವೀಪಗಳ ಹೆಸರು, ಅಧೋಲೋಕವರ್ಣನೆ, ಊರ್ಧ್ವಲೋಕಕಥನೆ, ಗ್ರಹಚಾರ, ಆದಿತ್ಯವ್ಯೂಹಕೀರ್ತನೆ, ದೇವಗ್ರಹಾನುಕೀರ್ತನೆ, ಮಹಾದೇವನ ನೀಲಕಂಠನಾಮವೈಭವ, ಅಮಾವಾಸ್ಯೆಯ ವಿಷಯ, ಯುಗತತ್ವ, ಯಜ್ಞಪ್ರವರ್ತನೆ, ಅಂತ್ಯಯುಗವ್ಯಾಪಾರ,

ದೇವಾನಾಂ ವ್ಯಸನಾಖ್ಯಾನಂ ಸ್ವಾಯಂಭುವನಿರೂಪಣಂ ।
ಶೇಷಮನ್ವಂತರಾಖ್ಯಾನಂ ಪೃಥಿವೀದೋಹನಂ ತತಃ ॥ ೧೨ ॥

ಚಾಕ್ಷುಷೇದ್ಯತನೇ ಸರ್ಗೇ ದ್ವಿತೀಯೋಂಘ್ರಿಃ ಪುರೋದಲೇ ।
ಅಥೋಪೋದ್ಘಾತಪಾದೇ ತು ಸಪ್ತರ್ಷಿಪರಿಕೀರ್ತನಂ ॥ ೧೩ ॥

ಪ್ರಜಾಪತ್ಯನ್ವಯಸ್ತಸ್ಮಾದ್ದೇವಾದೀನಾಂ ಸಮುದ್ಭವಃ ।
ತತೋ ಜಯಾಭಿಲಾಷಶ್ಚ ಮರುದುತ್ಪತ್ತಿಕೀರ್ತನಂ ॥ ೧೪ ॥

ಕಾಶ್ಯಪೇಯಾನುಕಥನಂ ಋಷಿವಂಶನಿರೂಪಣಂ ।
ಪಿತೃಕಲ್ಪಾನುಕಥನಂ ಶ್ರಾದ್ಧಕಲ್ಪಸ್ತತಃ ಪರಂ ॥ ೧೫ ॥

ವೈವಸ್ವತಸಮುತ್ಪತ್ತಿಃ ಸೃಷ್ಟಿಸ್ತಸ್ಯ ತತಃ ಪರಂ ।
ಮನುಪುತ್ರಾನ್ವಯಶ್ಚಾಂತೋ ಗಾಂಧರ್ವಸ್ಯ ನಿರೂಪಣಂ ॥ ೧೬ ॥

ಇಕ್ಷ್ವಾಕುವಂಶಕಥನಂ ವಂಶೋತ್ರೇಃ ಸುಮಹಾತ್ಮನಃ ।
ಅಮಾವಸೋರನ್ವಯಶ್ಚ ರಜೇಶ್ಚರಿತಮುದ್ಭುತಂ ॥ ೧೭ ॥

---

ಯುಗಪ್ರಜೆಗಳ ಲಕ್ಷಣ, ಋಷಿಪ್ರವರವರ್ಣನೆ, ದೇವತೆಗಳ ವ್ಯಸನ ಕಥನ, ಸ್ವಾಯಂಭುವ ಮನ್ವಂತರನಿರೂಪಣೆ, ಇತರ ಮನ್ವಂತರಾಖ್ಯಾನ, ಪೃಥಿವೀ ದೋಹನ, ಅದ್ಯತನಸೃಷ್ಟಿ ಈ ವಿಷಯಗಳು ದ್ವಿತೀಯಪಾದದಲ್ಲಿ ಉಕ್ತವಾಗಿವೆ.

## ಉಪೋದ್ಘಾತಪಾದ

೧೪-೩೦. ಸಪ್ತಋಷಿಕೀರ್ತನೆ, ಪ್ರಾಜಾಪತ್ಯಾನ್ವಯ, ದೇವಾದಿಗಳ ಉತ್ಪತ್ತಿ, ಜಯಾಭಿಲಾಷೆ, ಮರುತ್ತುಗಳ ಉತ್ಪತ್ತಿ, ಕಾಶ್ಯಪವಂಶಕಥನೆ, ಋಷಿ ವಂಶನಿರೂಪಣೆ, ಪಿತೃಕಲ್ಪಾನುಕಥನ, ಶ್ರಾದ್ಧಕಲ್ಪ, ವೈವಸ್ವತಸಮುತ್ಪತ್ತಿ, ಅವನ ಸೃಷ್ಟಿ, ಮನುವಂಶ, ಗಾಂಧರ್ವ ನಿರೂಪಣೆ, ಇಕ್ಷ್ವಾಕುವಂಶಕಥನೆ,

ಯಯಾತಿಚರಿತಂ ಚಾಥ ಯದುವಂಶನಿರೂಪಣಂ |
ಕಾರ್ತವೀರಸ್ಯ ಚರಿತಂ ಜಾಮದಗ್ನ್ಯಂ ತತಃ ಪರಂ || ೧೮ ||

ವೃಷ್ಣಿವಂಶಾನುಕಥನಂ ಸಗರಸ್ಯಾಥ ಸಂಭವಃ |
ಭಾರ್ಗವಸ್ಯಾನುಚರಿತಂ ಪಿತೃಕಾರ್ಯವಧಾಶ್ರಯಂ || ೧೯ ||

ಸಮರಸ್ಯಾಥಚರಿತಂ ಭಾರ್ಗವಸ್ಯ ಕಥಾಪುನಃ |
ದೇವಾಸುರಾಹವಕಥಾ ಕೃಷ್ಣಾವಿರ್ಭಾವವರ್ಣನಂ || ೨೦ ||

ಇಂದ್ರಸ್ಯ ತು ಸ್ತವಃ ಪುಣ್ಯಃ ಶುಕ್ರೇಣ ಪರಿಕೀರ್ತಿತಃ |
ವಿಷ್ಣುಮಾಹಾತ್ಮ್ಯಕಥನಂ ಬಲಿವಂಶನಿರೂಪಣಂ || ೨೧ ||

ಭವಿಷ್ಯರಾಜಚರಿತಂ ಸಂಪ್ರಾಪ್ತೇಥ ಕಲೌಯುಗೇ |
ಏವಮುದ್ಘಾತಪಾದೋಽಯಂ ತೃತೀಯೋ ಮಧ್ಯಮೇ ದಲೇ || ೨೨ ||

ಚತುರ್ಥಮುಪಸಂಹಾರಂ ವಕ್ಷ್ಯೇ ಖಂಡೇ ತಥೋತ್ತರೇ |
ವೈವಸ್ವತಾಂತರಾಖ್ಯಾನಂ ವಿಸ್ತರೇಣ ಯಥಾ ತಥಾ || ೨೩ ||

---

ಮಹಾತ್ಮನಾದ ಅತ್ರಿಯ ವಂಶ, ಅಮಾವಸು ವಂಶ, ರಜಿಚರಿತ್ರೆ, ಯಯಾತಿ ಚರಿತ್ರೆ, ಯದುವಂಶನಿರೂಪಣೆ, ಕಾರ್ತವೀರ್ಯಚರಿತ್ರೆ, ಜಾಮದಗ್ನ್ಯಚರಿತ್ರೆ, ಸಗರೋತ್ಪತ್ತಿ, ಭಾರ್ಗವಚರಿತ್ರೆ, ಯುದ್ಧಚರಿತ್ರೆ, ಭಾರ್ಗವಕಥೆ, ದೇವಾಸುರ ಯುದ್ಧವರ್ಣನೆ, ಕೃಷ್ಣಾವಿರ್ಭಾವವರ್ಣನೆ, ಶುಕ್ರೋಕ್ತ ಇಂದ್ರಸ್ತುತಿ, ವಿಷ್ಣು ಮಾಹಾತ್ಮ್ಯಕಥನ, ಬಲಿವಂಶನಿರೂಪಣೆ, ಕಲಿಯುಗದಲ್ಲಿ ಭವಿಷ್ಯರಾಜಚರಿತ್ರೆ, ಈ ವಿಷಯಗಳು ಮೂರನೆಯ ಪಾದದಲ್ಲಿ ವರ್ಣಿತವಾಗಿವೆ.

## ಉತ್ತರಖಂಡ

### ನಾಲ್ಕನೆಯದಾದ ಉಪಸಂಹಾರಪಾದ

ಪೂರ್ವದಲ್ಲಿ ಸಂಕ್ಷೇಪವಾಗಿ ಹೇಳಿರುವ ವೈವಸ್ವತಮನ್ವಂತರದ ವಿಸ್ತಾರ

ಪೂರ್ವಮೇವ ಸಮುದ್ದಿಷ್ಟಂ ಸಂಕ್ಷೇಪಾದಿಹ ಕಥ್ಯತೇ ।
ಭವಿಷ್ಯಾಣಾಂ ಮನೂನಾಂ ಚ ಚರಿತಂ ಹಿ ತತಃ ಪರಂ ॥ ೨೪ ॥

ಕಲ್ಪಪ್ರಲಯನಿರ್ದೇಶಃ ಕಾಲಮಾನಂ ತತಃ ಪರಂ ।
ಲೋಕಾಶ್ಚತುರ್ದಶ ತತಃ ಕಥಿತಾ ಸ್ವಾಪ್ತಲಕ್ಷಣೈಃ ॥ ೨೫ ॥

ವರ್ಣನಂ ನರಕಾಣಾಂ ಚ ವಿಕರ್ಮಾಚರಣೈಸ್ತತಃ ।
ಮನೋಮಯಪುರಾಖ್ಯಾನಂ ಲಯಃ ಪ್ರಾಕೃತಿಕಸ್ತತಃ ॥ ೨೬ ॥

ಶೈವಸ್ಯಾಥ ಪುರಸ್ಯಾಪಿ ವರ್ಣನಂ ಚ ತತಃ ಪರಂ ।
ತ್ರಿವಿಧಾ ಗುಣಸಂಬಂಧಾಜ್ಜಂತೂನಾಂ ಕೀರ್ತಿತಾ ಗತಿಃ ॥ ೨೭ ॥

ಅನಿರ್ದೇಶ್ಯಾಪ್ರತರ್ಕ್ಯಸ್ಯ ಬ್ರಹ್ಮಣಃ ಪರಮಾತ್ಮನಃ ।
ಅನ್ವಯವ್ಯತಿರೇಕಾಭ್ಯಾಂ ವರ್ಣನಂ ಹಿ ತತಃ ಪರಂ ॥ ೨೮ ॥

ಇತ್ಯೇಷ ಉಪಸಂಹಾರಃ ಪಾದೋ ವೃತ್ತಃ ಸಹೋತ್ತರಃ ।
ಚತುಷ್ಪಾದಂ ಪುರಾಣಂ ತೇ ಬ್ರಹ್ಮಾಂಡಂ ಸಮುದಾಹೃತಂ ॥ ೨೯ ॥

---

ನಿರೂಪಣೆ, ಭವಿಷ್ಯಮನುಗಳ ಚರಿತ್ರೆ, ಕಲ್ಪಪ್ರಳಯ ನಿರ್ದೇಶ, ಕಾಲಮಾನ, ಹದಿನಾಲ್ಕು ಲೋಕಗಳು, ನಿಷಿದ್ಧಕರ್ಮಗಳಿಂದಾಗುವ ನರಕಗಳ ವರ್ಣನೆ, ಮನೋಮಯಪುರಾಖ್ಯಾನ, ಪ್ರಾಕೃತಿಕಲಯ, ಶೈವಪುರವರ್ಣನೆ, ತ್ರಿಗುಣ ಸಂಬಂಧದಿಂದ ಪ್ರಾಣಿಗಳಿಗೆ ಮೂರುವಿಧ ಗತಿ, ಅನಿರ್ದೇಶ್ಯ ಮತ್ತು ಅಪ್ರತರ್ಕ್ಯ ನಾದ ಬ್ರಹ್ಮಪರಮಾತ್ಮನ ಅನ್ವಯ ವ್ಯತಿರೇಕವರ್ಣನೆ, ಈ ವಿಷಯಗಳು ಉತ್ತರಖಂಡದ ಉಪಸಂಹಾರ ಪಾದದಲ್ಲಿ ಅಡಗಿವೆ.

ಅಷ್ಟಾದಶಮನೌಪಮ್ಯಂ ಸಾರಾತ್ಸಾರತರಂ ದ್ವಿಜ ।
ಬ್ರಹ್ಮಾಂಡಂ ಯಚ್ಚತುರ್ಲಕ್ಷಂ ಪುರಾಣಂ ಯೇನ ಪಠ್ಯತೇ ॥ ೩೮ ॥

ತದೇತಸ್ಯ ಗದಿತಮತ್ರಾಷ್ಟಾದಶಧಾ ಪೃಥಕ್ ।
ಪಾರಾಶರ್ಯೇಣ ಮುನಿನಾ ಸರ್ವೇಷಾಮಪಿ ಮಾನದ ॥ ೩೧ ॥

ವಸ್ತುತಸ್ತೂಪದೇಷ್ಟಾಥ ಮುನೀನಾಂ ಭಾವಿತಾತ್ಮನಾಂ ।
ಮತ್ತಃ ಶ್ರುತ್ವಾ ಪುರಾಣಾನಿ ಲೋಕೇಭ್ಯಃ ಪ್ರಚಕಾಶಿರೇ ॥ ೩೨ ॥

ಮುನಯೋ ಧರ್ಮಶೀಲಾಸ್ತೇ ದೀನಾನುಗ್ರಹಕಾರಿಣಃ ।
ಮಯಾ ಚೇದಂ ಪುರಾಣಂ ತು ವಸಿಷ್ಠಾಯ ಪುರೋದಿತಂ ॥ ೩೩ ॥

ತೇನ ಶಕ್ತಿಸುತಾಯೋಕ್ತಂ ಜಾತೂಕರ್ಣ್ಯಾಯ ತೇನ ಚ ।
ವ್ಯಾಸೋ ಲಬ್ಧ್ವಾ ತತಶ್ಚೈತಾನ್ಪ್ರಭಂಜನಮುಖೋದ್ಗತಂ ॥ ೩೪ ॥

---

ದ್ವಿಜನೇ! ನಿನಗೆ ಅಸದೃಶವೂ, ಸಾರತರವೂ, ನಾಲ್ಕು ಪಾದಗಳನ್ನೊಳಗೊಂಡಿರುವುದೂ ಆಗಿರುವ ಹದಿನೆಂಟನೆಯ ಬ್ರಹ್ಮಾಂಡಪುರಾಣವಿಷಯವು ಉಕ್ತವಾಗಿದೆ.

೩೧-೩೫. ನಾಲ್ಕುಲಕ್ಷಗ್ರಂಥಪರಿಮಿತಿಯುಳ್ಳ ಪುರಾಣವನ್ನು ಹದಿನೆಂಟು ಭಾಗಮಾಡಿ ಪರಾಶರಪುತ್ರರಾದ ವ್ಯಾಸರು ಮನಃಪರಿಪಾಕವನ್ನು ಹೊಂದಿದ ಮುನಿಗಳಿಗೆ ಉಪದೇಶಿಸಿರುವರು.

ಹೀಗೆ ನನ್ನ ಮೂಲಕವಾಗಿ ಪುರಾಣವನ್ನು ಕೇಳಿ ದೀನಾನುಗ್ರಹಕಾರಿಗಳೂ ಧರ್ಮಿಷ್ಠರೂ ಆದ ಮುನಿಗಳು ಅವನ್ನು ಲೋಕಕ್ಕೆ ಪ್ರಚುರಪಡಿಸಿದರು.

ಪ್ರಮಾಣೀಕೃತ್ಯ ಲೋಕೇಸ್ಮಿನ್ ಪ್ರಾವರ್ತಯದನುತ್ತಮಂ |
ಯ ಇದಂ ಕೀರ್ತಯೇದ್ವತ್ಸ ಶೃಣೋತಿ ಚ ಸಮಾಹಿತಃ || ೩೫ ||

ಸ ವಿಧೂಯೇಹ ಪಾಪಾನಿ ಯಾತಿ ಲೋಕಮನಾಮಯಂ |
ಲಿಖಿತ್ವೈತತ್ಪುರಾಣಂ ತು ಸ್ವರ್ಣಸಿಂಹಾಸನಸ್ಥಿತಂ || ೩೬ ||

ಯತ್ರೋರ್ಣಾಚ್ಛಾದಿತಂ ಯಸ್ತು ಬ್ರಾಹ್ಮಣಾಯ ಪ್ರಯಚ್ಛತಿ |
ಸ ಯಾತಿ ಬ್ರಹ್ಮಣೋ ಲೋಕಂ ನಾತ್ರ ಕಾರ್ಯಾ ವಿಚಾರಣಾ || ೩೭ ||

ಮರೀಚೇಷ್ಟಾದಶೈತಾನಿ ಮಯಾ ಪ್ರೋಕ್ತಾನಿ ಯಾನಿ ತೇ |
ಪುರಾಣಾನಿ ತು ಸಂಕ್ಷೇಪಾಚ್ಛ್ರೋತವ್ಯಾನಿ ಚ ವಿಸ್ತರಾತ್ || ೩೮ ||

ಅಷ್ಟಾದಶಪುರಾಣಾನಿ ಯಃ ಶೃಣೋತಿ ನರೋತ್ತಮಃ |
ಕಥಯೇದ್ವಾ ವಿಧಾನೇನ ನೇಹ ಭೂಯಃ ಸ ಜಾಯತೇ || ೩೯ ||

---

ಆದಿಯಲ್ಲಿ ನಾನು ಈ ಪುರಾಣವನ್ನು ವಸಿಷ್ಠನಿಗೆ ಹೇಳಿದೆನು. ಅವನು ಶಕ್ತಿಪುತ್ರನಿಗೂ, ಅವನು ಜಾತೂಕರ್ಣ್ಯನಿಗೂ ಹೇಳಿದನು. ಅನಂತರ ವ್ಯಾಸನು ಪ್ರಭಂಜನಮುಖದಿಂದ ಈ ಪುರಾಣವನ್ನು ಪಡೆದು ಅವುಗಳನ್ನು ವಿಭಾಗಮಾಡಿ ಗ್ರಂಥರೂಪದಲ್ಲಿ ಈ ಲೋಕದಲ್ಲಿ ಪ್ರಚಾರಕ್ಕೆ ತಂದನು.

೩೬-೪೦. ವತ್ಸ! ಈ ಪುರಾಣದ ಪಠನೆ ಶ್ರವಣಗಳನ್ನು ಮಾಡುವವನು ಸಕಲಪಾಪಗಳನ್ನೂ ಕಳೆದುಕೊಂಡು ನಿರ್ದುಷ್ಟ ಲೋಕಕ್ಕೆ ಹೋಗುವನು

ಈ ಪುರಾಣವನ್ನು ಬರೆದು ಬಂಗಾರದ ಸಿಂಹಾಸನದಲ್ಲಿಟ್ಟು, ಅದಕ್ಕೆ ಶಾಲನ್ನು ಹೊದಿಸಿ, ಅದನ್ನು ಬ್ರಾಹ್ಮಣನಿಗೆ ದಾನಮಾಡುವವನು ಬ್ರಹ್ಮಲೋಕಕ್ಕೆ ಹೋಗುವನು. ಸಂದೇಹವಿಲ್ಲ.

ಮರೀಚಿಯೇ! ನಿನಗೆ ಈ ಅಷ್ಟಾದಶ ಪುರಾಣಗಳನ್ನು ಸಂಕ್ಷೇಪವಾಗಿ ತಿಳಿಸಿರುವೆನು. ಅವುಗಳನ್ನು ವಿಸ್ತಾರವಾಗಿ ಶ್ರವಣ ಮಾಡಬೇಕು.

ಸೂತ್ರಮೇತತ್ಪುರಾಣಾನಾಂ ಯನ್ಮಯೋಕ್ತಂ ತವಾಧುನಾ ।
ತನ್ನಿತ್ಯಂ ಶೀಲನೀಯಂ ಹಿ ಪುರಾಣಫಲಮಿಚ್ಛತಾ ॥ ೪೦ ॥

ನ ದಾಂಭಿಕಾಯ ಪಾಪಾಯ ದೇವಗುರ್ವನಸೂಯವೇ ।
ದೇಯಂ ಕದಾಪಿ ಸಾಧೂನಾಂ ದ್ವೇಷಿಣೇ ನ ಶಠಾಯ ಚ ॥ ೪೧ ॥

ಶಾಂತಾಯ ಶಮಚಿತ್ತಾಯ ಶುಶ್ರೂಷಾಭಿರತಾಯ ಚ ।
ನಿರ್ಮತ್ಸರಾಯ ಶುಚಯೇ ದೇಯಂ ಸದ್ವೈಷ್ಣವಾಯ ಚ ॥ ೪೨ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಚತುರ್ಥಪಾದೇ ಬ್ರಹ್ಮಾಂಡಪುರಾಣವಿಷಯಾನುಕ್ರಮಣೀನಿರೂಪಣಂ
ನಾಮ ನವೋತ್ತರಶತತಮೋಽಧ್ಯಾಯಃ

---

ಈ ಅಷ್ಟಾದಶ (18) ಪುರಾಣಗಳನ್ನೂ ವಿಧಿವತ್ತಾಗಿ ಶ್ರವಣ ಅಥವಾ ಪಠನ ಮಾಡುವ ನರೋತ್ತಮನು ಪುನಃ ಈ ಲೋಕದಲ್ಲಿ ಜನ್ಮವೆತ್ತದೆ ಮುಕ್ತನಾಗುವನು. ನಾನು ನಿನಗೆ ಈಗ ಹೇಳಿರುವ ಸೂತ್ರರೂಪವಾದ ಪುರಾಣ ವಿಷಯಸಂಗ್ರಹವು ನಿತ್ಯವೂ ಮನನ ಮಾಡಲ್ಪಡಬೇಕು. ಅದರಿಂದ ಪುರಾಣ ಫಲವುಂಟಾಗುವುದು

೪೧. ದಾಂಭಿಕನು, ಪಾಪಿಯು, ಗುರುದೇವತೆಗಳಲ್ಲಿ ಅಸೂಯಾಪರನು, ಸಾಧುದ್ವೇಷಿ ಮತ್ತು ದುಷ್ಟನೂ ಆಗಿರುವವನಿಗೆ ಯಾವಾಗಲೂ ಈ ಪುರಾಣವನ್ನು ಪದೇಶಿಸಕೂಡದು

೪೨. ಶಾಂತಸ್ವಭಾವವುಳ್ಳವನು, ಶಮಧ್ಯಾನಪರನು, ಗುರುಶುಶ್ರೂಷೆಯಲ್ಲಿ ನಿರತನು, ಮಾತ್ಸರ್ಯವಿಲ್ಲದವನು ಮತ್ತು ಪರಿಶುದ್ಧನೂ ಆದ ವಿಷ್ಣುಭಕ್ತನಿಗೆ ಈ ಪುರಾಣಗಳನ್ನು ಪದೇಶಿಸಬೇಕು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ನಾಲ್ಕನೆಯ ಪಾದದಲ್ಲಿ ಬ್ರಹ್ಮಾಂಡಪುರಾಣ
ವಿಷಯನಿರೂಪಣೆಯೆಂಬ ನೂರೊಂಬತ್ತನೆಯ
ಅಧ್ಯಾಯವು ಮುಗಿದುದು.

## ದಶಾಧಿಕಶತತಮೋಽಧ್ಯಾಯಃ

### ನಾರದ ಉವಾಚ

ಪುರಾಣಂ ಸೂತ ಅಖಿಲಂ ಶ್ರುತಂ ತವ ಮುಖಾದ್ವಿಭೋ ।
ಮರೀಚಯೇ ಯಥಾ ಪ್ರೋಕ್ತಂ ಬ್ರಹ್ಮಣಾ ಪರಮೇಷ್ಠಿನಾ ॥ ೧ ॥

ಅಧುನಾ ತು ಮಹಾಭಾಗ ತಿಥೀನಾಂ ವೈ ಕಥಾನಕಂ ।
ಕ್ರಮತೋ ಮಹ್ಯಮಾಖ್ಯಾಹಿ ಯಥಾ ಸ್ಯಾತ್ವ್ರತನಿಶ್ಚಯಃ ॥ ೨ ॥

ಯಸ್ಮಿನ್ಮಾಸೇ ತು ಯಾ ಪುಣ್ಯಾ ತಿಥಿರ್ಯೇನ ಹ್ಯುಪಾಸಿತಾ ।
ಯದ್ವಿಧಾನಂ ಚ ಪೂಜಾದೇಃ ತತ್ಸರ್ವಂ ವದ ಸಾಂಪ್ರತಂ ॥ ೩ ॥

### ಸನಾತನ ಉವಾಚ

ಶೃಣು ನಾರದ ವಕ್ಷ್ಯಾಮಿ ತಿಥೀನಾಂ ತೇ ವ್ರತಂ ಪೃಥಕ್ ।
ತಿಥೀಶಾನುಕ್ರಮಾದೇವ ಸರ್ವಸಿದ್ಧಿವಿಧಾಯಕಂ ॥ ೪ ॥

## ನೂರುಹತ್ತನೆಯ ಅಧ್ಯಾಯವು

೧-೨ ನಾರದನು ಹೇಳಿದನು—ಸ್ವಾಮಿಾ! ಚತುರ್ಮುಖಬ್ರಹ್ಮನು ಮರೀಚಿಗೆ ಹೇಳಿದ ಪುರಾಣವಿಷಯವೆಲ್ಲವನ್ನೂ ನಿಮ್ಮ ಬಾಯಿಂದ ಕೇಳಿದೆನು. ಪೂಜ್ಯನೇ! ಈಗ ವ್ರತನಿರ್ಣಯವಾಗುವಂತೆ ಕ್ರಮವಾಗಿ ತಿಥಿಗಳ ಕಥೆಯನ್ನು ನನಗೆ ಹೇಳು

೩. ಯಾವ ಮಾಸದಲ್ಲಿ ಯಾವ ಪುಣ್ಯತಿಥಿಯ ವ್ರತವು ಯಾರಿಂದ ಆಚರಿಸಲ್ಪಟ್ಟಿತು? ಅದರ ಅಂಗವಾದ ಪೂಜಾದಿಗಳ ವಿಧಾನವಾದರೂ ಎಂತಹುದು? ಅವೆಲ್ಲವನ್ನೂ ಈಗ ನನಗೆ ಹೇಳು.

೪. ಸನಾತನನು ಹೇಳಿದನು—ನಾರದನೇ! ಕೇಳು; ಪ್ರತ್ಯೇಕವಾಗಿ ಸರ್ವಸಿದ್ಧಿವಿಧಾಯಕವಾದ ಒಂದೊಂದು ತಿಥಿಯ ವ್ರತವನ್ನೂ ತಿಥಿನಿಯಾಮಕ ದೇವತಾನುಕ್ರಮವಾಗಿ ನಿನಗೆ ಹೇಳುವೆನು.

ಚೈತ್ರೇ ಮಾಸಿ ಜಗದ್ಬ್ರಹ್ಮಾ ಸಸರ್ಜ ಪ್ರಥಮೇಽಹನಿ ।
ಶುಕ್ಲಪಕ್ಷೇ ಸಮಗ್ರಂ ವೈ ತದಾ ಸೂರ್ಯೋದಯೇ ಸತಿ ॥ ೫ ॥

ವತ್ಸರಾದೌ ವಸಂತಾದೌ ಬಲಿರಾಜ್ಯೇ ತಥೈವ ಚ ।
ಪೂರ್ವವಿದ್ಧೈವ ಕರ್ತವ್ಯಾ ಪ್ರತಿಪತ್ಸರ್ವದಾ ಬುಧೈಃ ॥ ೬ ॥

ತತ್ರ ಕಾರ್ಯಾ ಮಹಾಶಾಂತಿಃ ಸರ್ವಕಲ್ಮಷನಾಶಿನೀ ।
ಸರ್ವೋತ್ಪಾತಪ್ರಶಮನೀ ಕಲಿದುಷ್ಕೃತಹಾರಿಣೀ ॥ ೭ ॥

ಆಯುಃಪ್ರದಾ ಪುಷ್ಟಿಕರೀ ಧನಸೌಭಾಗ್ಯವರ್ಧಿನೀ ।
ಮಂಗಲ್ಯಾ ಚ ಪವಿತ್ರಾ ಚ ಲೋಕದ್ವಯಸುಖಾವಹಾ ॥ ೮ ॥

ತಸ್ಯಾಮಾದೌ ತು ಸಂಪೂಜ್ಯೋ ಬ್ರಹ್ಮಾ ವಹ್ನಿವಪುರ್ಧರಃ ।
ಪಾದ್ಯಾರ್ಘ್ಯಪುಷ್ಪಧೂಪೈಶ್ಚ ವಸ್ತ್ರಾಲಂಕಾರಭೋಜನೈಃ ॥ ೯ ॥

೫. ಚೈತ್ರಮಾಸ ಶುಕ್ಲಪಕ್ಷದ ಮೊದಲನೆಯ ದಿನ ಎಂದರೆ ಪಾಡ್ಯದ ದಿನ ಸೂರ್ಯೋದಯಕಾಲದಲ್ಲಿ ಬ್ರಹ್ಮನು ಸಮಸ್ತ ಜಗತ್ತನ್ನೂ ಸೃಷ್ಟಿಸಿದನು.

೬. ವತ್ಸರಾದಿ, ವಸಂತಋತುವಿನಾದಿದಿನ ಮತ್ತು ಬಲಿಪಾಡ್ಯ ಈ ತಿಥಿ ವ್ರತವು ಯಾವಾಗಲೂ ಪೂರ್ವತಿಥಿವಿದ್ಧಪಾಡ್ಯತಿಥಿಯಲ್ಲಿಯೇ ಆಚರಿಸಬೇಕು.

೭-೮. ಆ ದಿನದಲ್ಲಿ ಸಕಲಪಾಪನಾಶಕವು, ಗ್ರಹೋತ್ಪಾತಗಳನ್ನೆಲ್ಲಾ ಶಾಂತಿಮಾಡುವುದು, ಕಲಿಕಾಲಕೃತ ದುಷ್ಕೃತಗಳನ್ನು ಪರಿಹರಿಸುವುದು, ಆಯುಷ್ಯಪ್ರದವು, ಪುಷ್ಟಿಕಾರಿಯು, ಧನಸೌಭಾಗ್ಯಗಳನ್ನು ವೃದ್ಧಿಗೊಳಿಸುವುದು, ಶ್ರೇಯಃಪ್ರದವು, ಪವಿತ್ರವು, ಇಹಲೋಕ ಪರಲೋಕಗಳಲ್ಲಿ ಸುಖಕರವೂ ಆದ ಮಹಾಶಾಂತಿಯನ್ನು ಮಾಡಬೇಕು.

೯-೧೦. ಆ ದಿವಸ ಮೊದಲು ಅಗ್ನಿರೂಪವಂ ತಾಳಿದ ಬ್ರಹ್ಮನನ್ನು ಪಾದ್ಯ, ಅರ್ಘ್ಯ, ಪುಷ್ಪ, ಧೂಪ, ವಸ್ತ್ರ, ಆಭರಣ, ಭೋಜನ, ಹೋಮ, ಬಲಿ

ಹೋಮ್ಯೈರ್ಬಲ್ಯುಪಹಾರೈಶ್ಚ ತಥಾ ಬ್ರಾಹ್ಮಣತರ್ಪಣೈಃ ।
ತತಃ ಕ್ರಮೇಣ ದೇವೇಭ್ಯಃ ಪೂಜಾಕಾರ್ಯಾ ಪೃಥಕ್ಪೃಥಕ್ ॥ ೧೦ ॥

ಕೃತ್ವೋಂಕಾರನಮಸ್ಕಾರಂ ಕುಶೋದಕತಿಲಾಕ್ಷತೈಃ ।
ಸವಸ್ತ್ರಂ ಸಹಿರಣ್ಯಂ ಚ ತತೋ ದದ್ಯಾದ್ದ್ವಿಜಾತಯೇ ॥ ೧೧ ॥

ದಕ್ಷಿಣಾ ವೇದವಿದುಷೇ ವ್ರತಸಂಪೂರ್ತಿಹೇತವೇ ।
ಏವಂ ಪೂಜಾವಿಶೇಷೇಣ ವ್ರತಂ ಸ್ಯಾತ್ಸೌರಿಸಂಜ್ಞಕಂ ॥ ೧೨ ॥

ಆರೋಗ್ಯದಂ ನೃಣಾಂ ವಿಪ್ರ ತಸ್ಮಿನ್ನೇವ ದಿನೇ ಮುನೇ ।
ವಿದ್ಯಾವ್ರತಮಪಿ ಪ್ರೋಕ್ತಮಸ್ಯಾಮೇವ ತಿಥೌ ಮುನೇ ॥ ೧೩ ॥

ತಿಲಕಂ ನಾಮ ಚ ಪ್ರೋಕ್ತಂ ಕೃಷ್ಣೇನಾಜಾತಶತ್ರವೇ ।
ಅಥ ಜ್ಯೇಷ್ಠೇ ಸಿತೇ ಪಕ್ಷೇ ಷಷ್ಠ್ಯಾಂ ದಿವಸೋದಯೇ ॥ ೧೪ ॥

---

ಪ್ರದಾನ, ಉಪಹಾರ ಇವುಗಳಿಂದಲೂ ಬ್ರಾಹ್ಮಣಸಂತರ್ಪಣೆಗಳಿಂದಲೂ ಪೂಜಿಸಬೇಕು ತರುವಾಯ ಇತರ ಪರಿವಾರ ದೇವತೆಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಪೂಜೆ ಮಾಡಬೇಕು

೧೧ ಓಂ ನಮಃ ಎಂದು ಹೇಳುತ್ತಾ ಕುಶೋದಕ, ಎಳ್ಳು, ಅಕ್ಷತೆಗಳ ಸಹಿತವಾಗಿ ವಸ್ತ್ರ, ಹಿರಣ್ಯಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು.

೧೨. ವೇದಾಧ್ಯಯನ ಸಂಪನ್ನನಿಗೆ ದಕ್ಷಿಣೆಯನ್ನು ಕೊಡುವುದು ವ್ರತದ ಸಂಪೂರ್ಣತೆಯನ್ನುಂಟುಮಾಡುವುದು. ಈ ರೀತಿಯಾಗಿ ವಿಶೇಷ ಪೂಜೆ ಮಾಡಿ ಆಚರಿಸುವ ವ್ರತವು, ಸೌರಿವ್ರತವೆನಿಸಿಕೊಳ್ಳುವುದು

೧೩-೧೪ ಬ್ರಾಹ್ಮಣನೇ! ಈ ವ್ರತವು ಮನುಷ್ಯರಿಗೆ ಆರೋಗ್ಯಪ್ರದವು. ಮುನಿಯೇ! ಅದೇ ದಿವಸದಲ್ಲಿ ವಿದ್ಯಾವ್ರತವು ವಿಹಿತವಾಗಿದೆ ಮತ್ತು ಆ ತಿಥಿಯಲ್ಲಿಯೇ ತಿಲಕವೆಂಬ ವ್ರತವೂ ಸಹ ಕೃಷ್ಣನಿಂದ ಧರ್ಮರಾಜನಿಗೆ ಹೇಳಲ್ಪಟ್ಟಿದೆ

ದೇವೋದ್ಯಾನಭವಂ ಹೃದ್ಯಂ ಕರವೀರಂ ಸಮರ್ಚಯೇತ್ ।
ರಕ್ತತಂತುಪರೀಧಾನಂ ಗಂಧಧೂಪವಿಲೇಪನೈಃ ॥ ೧೫ ॥

ಪ್ರಿಯಂಗುಸಪ್ತಧಾನ್ಯೈಶ್ಚ ನಾರಂಗೈರ್ಬೀಜಪೂರಕೈಃ ।
ಅಭ್ಯುಕ್ಷ್ಯ ಸಿತತೋಯೇನ ಮಂತ್ರೇಣೇತ್ಥಂ ಕ್ಷಮಾಪಯೇತ್ ॥ ೧೬ ॥

ಕರವೀರ ವೃಷಾವಾಸ ನಮಸ್ತೇ ಭಾನುವಲ್ಲಭ ।
ದಂಭೋಲಿಮೃಡದುರ್ಗಾದಿದೇವಾನಾಂ ಸತತಂ ಪ್ರಿಯ ॥ ೧೭ ॥

ಆಕೃಷ್ಣೇನೇತಿ ವೇದೋಕ್ತಮಂತ್ರೇಣೇತ್ಥಂ ಸಮಾಪಯೇತ್ ।
ಏವಂ ಭಕ್ತ್ಯಾ ಸಮಭ್ಯರ್ಚ್ಯ ದತ್ವಾ ವಿಪ್ರಾಯ ದಕ್ಷಿಣಾಂ ॥ ೧೮ ॥

ಪ್ರದಕ್ಷಿಣಂ ತತಃ ಕುರ್ಯಾತ್ಪಶ್ಚಾತ್ಸ್ವಭವನಂ ವ್ರಜೇತ್ ।
ನಭಃ ಶುಕ್ಲೇ ಪ್ರತಿಪದಿ ಲಕ್ಷ್ಮೀಬುದ್ಧಿಪ್ರದಾಯಕಂ ॥ ೧೯ ॥

ಅನಂತರ ಜ್ಯೇಷ್ಠಶುಕ್ಲಪಕ್ಷ ಪಾಡ್ಯದಿನದಲ್ಲಿ ಸೂರ್ಯೋದಯಕಾಲಕ್ಕೆ ಸರಿಯಾಗಿ ದೇವೋದ್ಯಾನದಲ್ಲಿ ಬೆಳೆದ ಮನೋಹರವಾದ, ಕೆಂಪುದಾರದಿಂದ ಸುತ್ತಲ್ಪಟ್ಟ, ಕರವೀರಪುಷ್ಪವನ್ನು ಗಂಧ ಧೂಪ ವಿಲೇಪನಗಳಿಂದಲೂ, ಹಾರಕ ಮುಂತಾದ ಏಳು ಧಾನ್ಯಗಳಿಂದಲೂ, ನಾರಂಗ ಬೀಜಪೂರವೆಂಬ ಫಲಗಳಿಂದಲೂ ಪೂಜಿಸಬೇಕು. ನಿರ್ಮಲಜಲದಿಂದ ತೊಳೆದು ಮುಂದಿನ ಮಂತ್ರದಿಂದ ಹೀಗೆ ಕ್ಷಮಾಪಣೆಯನ್ನು ಬೇಡಬೇಕು.

೧೭. ವೃಷಾವಾಸನು, ಸೂರ್ಯಪ್ರಿಯನು, ಇಂದ್ರ. ರುದ್ರ, ದುರ್ಗಾದಿ ದೇವತೆಗಳಿಗೆ ಯಾವಾಗಲೂ ಪ್ರಿಯನೂ ಆಗಿರುವ ಕರವೀರಾಧಿ ದೇವತೆಯೇ ! ನಿನಗೆ ನಮಸ್ಕಾರ.

೧೮-೨೦. ಆಕೃಷ್ಣೇನ ಇತ್ಯಾದಿ ವೇದೋಕ್ತಮಂತ್ರದಿಂದ ಈ ರೀತಿ ಮುಗಿಸಬೇಕು. ಈ ರೀತಿ ಭಕ್ತಿಯಿಂದ ಪೂಜಿಸಿ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಟ್ಟು ಪ್ರದಕ್ಷಿಣೆ ಮಾಡಿ ನಂತರ ತನ್ನ ಮನೆಗೆ ಹೋಗಬೇಕು.

ಧರ್ಮಾರ್ಥಕಾಮಮೋಕ್ಷಾಣಾಂ ನಿದಾನಂ ಪರಮಂ ವ್ರತಂ ।
ಸೋಮವಾರಂ ಸಮಾರಭ್ಯ ಸಾರ್ಧಮಾಸತ್ರಯಂ ದ್ವಿಜ ॥ ೨೦ ॥

ಕಾರ್ತಿಕಾಸಿತಭೂತಾಯಾಮುಪೋಷ್ಯ ವ್ರತತತ್ಪರಃ ।
ಪೂರ್ಣಾಯಾಂ ಶಿವಮಭ್ಯರ್ಚ್ಯ ಸುವರ್ಣಂ ವಂಶಸಂಯುತಂ ॥ ೨೧ ॥

ವಾಯನಂ ಸುಮಹತ್ಪುಣ್ಯಂ ದೇವತಾಪ್ರೀತಿವರ್ಧಕಂ ।
ದದ್ಯಾದ್ವಿಪ್ರಾಯ ಸಂಕಲ್ಪ್ಯ ಧನವೃದ್ಧ್ಯೈ ಮುನೀಶ್ವರ ॥ ೨೨ ॥

ಭಾದ್ರಶುಕ್ಲೇ ಪ್ರತಿಪದಿ ವ್ರತಂ ನಾಮ್ನಾ ಮಹತ್ತಮಂ ।
ವ್ರತಂ ಮೌನಾಹ್ವಯಂ ಕೇಚಿತ್ ಪ್ರಾಹುರತ್ರ ಶಿವೋಽರ್ಚ್ಯತೇ ॥ ೨೩ ॥

ದ್ವಿಜನೇ ! ಶ್ರಾವಣ ಶುಕ್ಲಪಕ್ಷದ ಪಾಡ್ಯದಿನದಲ್ಲಿ, ಐಶ್ವರ್ಯ ಜ್ಞಾನ ದಾಯಕವಾದ ಧರ್ಮ, ಅರ್ಥ, ಕಾಮ, ಮೋಕ್ಷಗಳಿಗೆ ಮೂಲಕಾರಣವಾದ ಉತ್ತಮ ವ್ರತವನ್ನು ಸೋಮವಾರದಿಂದ ಮೂರುವರೆ ತಿಂಗಳು ಆಚರಿಸಬೇಕು

೨೧-೨೨ ಮುನೀಶ್ವರನೇ ! ಈ ವ್ರತತತ್ಪರನು ಕಾರ್ತಿಕ ಶುಕ್ಲ ಪೂರ್ಣಿಮೆಯ ದಿನ ಉಪವಾಸದಿಂದ ಶಿವನನ್ನು ಪೂಜಿಸಿ, ಮಹಾಪುಣ್ಯಕರವೂ, ದೇವತಾಪ್ರೀತಿವರ್ಧಕವೂ ಆದ ಬಿದಿರುಸಹಿತ ಸುವರ್ಣರೂಪವಾದ ವಾಯನ ವನ್ನು ಧನಾಭಿವೃದ್ಧಿಯಾಗಲೆಂದು ಸಂಕಲ್ಪಮಾಡಿ ಬ್ರಾಹ್ಮಣನಿಗೆ ದಾನ ಮಾಡಬೇಕು.

೨೩. ಭಾದ್ರಪದ ಶುಕ್ಲ ಪಾಡ್ಯದಿನದಲ್ಲಿ ಮಹತ್ತಮವೆಂಬ ವ್ರತವು ಕರ್ತವ್ಯ. ಈ ವ್ರತವನ್ನು ಕೆಲವರು ಮೌನವ್ರತವೆಂದು ಹೇಳುವರು. ಇದರಲ್ಲಿ ಶಿವಪೂಜೆಯನ್ನು ಮಾಡಬೇಕು

ನೈವೇದ್ಯಂ ತು ಪಚೇನ್ಮಾನೀ ಷೋಡಶತ್ರಿಗುಣಾನಿ ಚ |
ಫಲಾನಿ ಪಿಷ್ಟಪಕ್ವಾನಿ ದದ್ಯಾದ್ವಿಪ್ರಾಯ ಷೋಡಶ || ೨೪ ||

ದೇವಾಯ ಷೋಡಶಾನ್ಯಾನಿ ಭುಜ್ಯಂತೇ ಷೋಡಶಾತ್ಮನಾ |
ಸೌವರ್ಣಂ ಶಿವಮಭ್ಯರ್ಚ್ಯ ಕುಂಭೋಪರಿ ವಿಧಾನವಿತ್ || ೨೫ ||

ತತ್ಸರ್ವಂ ಧೇನುಸಹಿತಮಾಚಾರ್ಯಾಯ ಪ್ರದಾಪಯೇತ್ |
ಇದಂ ಕೃತ್ವಾ ವ್ರತಂ ವಿಪ್ರ ದೇವದೇವಸ್ಯ ಶೂಲಿನಃ || ೨೬ ||

ಚತುರ್ದಶಾಬ್ದಂ ದೇಹಾಂತಂ ಭುಕ್ತಭೋಗಃ ಶಿವಂ ವ್ರಜೇತ್ |
ಆಶ್ವಿನೇ ಸಿತಪಕ್ಷತ್ಯಾಂ ಕೃತ್ವಾಽಶೋಕವ್ರತಂ ನರಃ || ೨೭ ||

ಅಶೋಕೋ ಜಾಯತೇ ವಿಪ್ರ ಧನಧಾನ್ಯಸಮನ್ವಿತಃ |
ಅಶೋಕಪೂಜನಂ ತತ್ರ ಕಾರ್ಯಂ ನಿಯಮತತ್ಪರೈಃ || ೨೮ ||

---

೨೪-೨೮. ಪೂಜಾನಂತರ ೪೮ ಫಲಗಳು ಮತ್ತು ಹಿಟ್ಟಿನಿಂದ ಮಾಡಿದ ಹೋಳಿಗೆ ಮುಂತಾದ ಭಕ್ಷ್ಯಗಳು ಇವನ್ನು ನೈವೇದ್ಯಮಾಡಿ ಅದರಲ್ಲಿ ಹದಿನಾರನ್ನು ಬ್ರಾಹ್ಮಣನಿಗೆ ಕೊಟ್ಟು ದೇವರಿಗೆ ಹದಿನಾರನ್ನು ಸಮರ್ಪಿಸಿ ಉಳಿದ ಹದಿನಾರನ್ನು ತಾನು ತಿನ್ನಬೇಕು

ವಿಧಾನಜ್ಞನು ಬಂಗಾರದ ಶಿವನನ್ನು ಕಲಶದಮೇಲಿಟ್ಟು ಪೂಜಿಸಿ ಅದೆಲ್ಲವನ್ನೂ ಗೋಸಹಿತವಾಗಿ ಆಚಾರ್ಯರಿಗೆ ದಾನಮಾಡಬೇಕು.

ಬ್ರಾಹ್ಮಣನೇ ! ದೇವದೇವನಾದ ಈಶ್ವರನ ಈ ವ್ರತವನ್ನು ಹದಿನಾಲ್ಕು ವರ್ಷ ಮಾಡುವವನು ಜೀವಿಸಿರುವವರೆಗೂ ಇಲ್ಲಿ ಭೋಗಗಳನ್ನನುಭವಿಸಿ, ಅನಂತರ ಶಿವಲೋಕಕ್ಕೆ ಹೋಗುವನು.

ಆಶ್ವಯುಜ ಶುಕ್ಲ ಪಾಡ್ಯದ ದಿನ ಅಶೋಕವ್ರತವನ್ನು ಮಾಡಿದರೆ ಅವನು ದುಃಖವನ್ನು ಪರಿಹರಿಸಿಕೊಂಡು ಧನಧಾನ್ಯಸಂಪನ್ನನಾಗಿ ಸುಖಿಯಾಗುವನು. ಆ ವ್ರತನಿರತನು ಅಶೋಕಪೂಜೆಯನ್ನು ಮಾಡಬೇಕು.

ವ್ರತಾಂತೇ ದ್ವಾದಶೇ ವರ್ಷೇ ಮೂರ್ತಿಂ ಚಾಶೋಕಶಾಖಿನಃ |
ಸಮರ್ಪ್ಯ ಗುರವೇ ಭಕ್ತ್ಯಾ ಶಿವಲೋಕೇ ಮಹೀಯತೇ || ೨೯ ||

ಅಸ್ಯಾಮೇವ ಪ್ರತಿಪದಿ ನವರಾತ್ರಂ ಸಮಾರಭೇತ್ |
ಪೂರ್ವಾಹ್ಣೇ ಪೂಜಯೇದ್ದೇವೀಂ ಘಟಸ್ಥಾಪನಪೂರ್ವಕಂ || ೩೦ ||

ಅಂಕುರಾರೋಪಣಂ ಕೃತ್ವಾ ಯವೈರ್ಗೋಧೂಮಮಿಶ್ರಿತೈಃ |
ತತಃ ಪ್ರತಿದಿನಂ ಕುರ್ಯಾದೇಕಭುಕ್ತಮಯಾಚಿತಂ || ೩೧ ||

ಉಪವಾಸಂ ಯಥಾಶಕ್ತಿ ಪೂಜಾಪಾಠಜಪಾದಿಕಂ |
ಮಾರ್ಕಂಡೇಯಪುರಾಣೋಕ್ತಂ ಚರಿತತ್ರಿತಯಂ ದ್ವಿಜ || ೩೨ ||

೨೯. ಹೀಗೆ ಹನ್ನೆರಡು ವರ್ಷಗಳು ವ್ರತವನ್ನಾಚರಿಸಿ ಕೊನೆಗೆ ಹನ್ನೆರಡನೆಯ ವರ್ಷದಲ್ಲಿ ಮೂರ್ತಿಯನ್ನು ಅಶೋಕಸಹಿತವಾಗಿ ಭಕ್ತಿಯಿಂದ ಗುರುಗಳಿಗೆ ಸಮರ್ಪಿಸಿದರೆ ಅವನು ಶಿವಲೋಕವಲ್ಲಿ ಉತ್ತಮಗತಿಯನ್ನು ಹೊಂದುವನು.

೩೦-೩೧ ಈ ಪಾಡ್ಯದ ದಿವಸವೇ ನವರಾತ್ರಿಯನ್ನು ಪ್ರಾರಂಭಿಸಬೇಕು. ಆ ದಿವಸ ಪ್ರಾತಃಕಾಲದಲ್ಲಿ ಕಲಶಸ್ಥಾಪನೆ ಮಾಡಿ ಗೋಧಿಸಹಿತ ಯವಗಳಿಂದ ಅಂಕುರಾರೋಪಣ ಮಾಡಿ ದೇವಿಯನ್ನು ಪೂಜಿಸಬೇಕು. ತರುವಾಯ ಪ್ರತಿದಿನವೂ ಯಾಚನೆಮಾಡದೆ ಒಪ್ಪತ್ತು ಊಟಮಾಡಬೇಕು.

೩೨-೩೩. ತನ್ನ ಶಕ್ತ್ಯನುಸಾರವಾಗಿ ಉಪವಾಸ, ಪೂಜೆ, ಪಾಠ, ಜಪ ಮುಂತಾದುವನ್ನು ಮಾಡಬೇಕು.

ದ್ವಿಜನೇ ! ಆಗ ಮಾರ್ಕಂಡೇಯಪುರಾಣೋಕ್ತವಾದ ಮೂರು ಚರಿತ್ರೆಗಳನ್ನು ಒಂಬತ್ತು ದಿನಗಳಲ್ಲಿಯೂ ಪಠನೆಮಾಡಬೇಕು.

ಪಠನೀಯಂ ನವದಿನಂ ಭುಕ್ತಿಮುಕ್ತೀ ಅಭೀಪ್ಸತಾ |
ಕುಮಾರೀಪೂಜನಂ ತತ್ರ ಪ್ರಶಸ್ತಂ ಭೋಜನಾದಿಭಿಃ || ೩೩ ||

ಇತ್ಥಂ ಕೃತ್ವಾ ವ್ರತಂ ವಿಪ್ರ ಸರ್ವಸಿದ್ಧ್ಯಾಲಯೋ ನರಃ |
ಜಾಯತೇ ಭುವಿ ದುರ್ಗಾಯಾಃ ಪ್ರಸಾದಾನ್ನಾತ್ರ ಸಂಶಯಃ || ೩೪ ||

ಅಥೋರ್ಜಸಿತಪಕ್ಷತ್ಯಾಂ ನವರಾತ್ರೋದಿತಂ ಚರೇತ್ |
ವಿಶೇಷಾದನ್ನಕೂಟಾಖ್ಯಂ ವಿಷ್ಣುಪ್ರೀತಿವಿವರ್ಧನಂ || ೩೫ ||

ಸರ್ವಪಾಕೈಃ ಸರ್ವದೋಷ್ಯೈಃ ಸರ್ವೈಃ ಸರ್ವಾರ್ಥಸಿದ್ಧಯೇ |
ಕರ್ತವ್ಯಮನ್ನಕೂಟಂ ತು ಗೋವರ್ಧನಸಮರ್ಚನೇ || ೩೬ ||

ಸಾಯಂ ಗೋಭಿಃ ಸಹ ಶ್ರೀಮದ್ಗೋವರ್ಧನಧರಾಧರಂ |
ಸಮರ್ಚ್ಯ ದಕ್ಷಿಣೀಕೃತ್ಯ ಭುಕ್ತಿಂ ಮುಕ್ತಿಂ ಸಮಾಪ್ನುಯಾತ್ || ೩೭ ||

ಭೋಗಮೋಕ್ಷಗಳನ್ನು ಬಯಸುವವನು ಭೋಜನಾದಿಗಳಿಂದ ಕುಮಾರೀ ಪೂಜೆಯನ್ನು ಮಾಡುವುದು ಪ್ರಶಸ್ತವು.

೩೪ ಈ ರೀತಿಯಾಗಿ ವ್ರತವನ್ನಾಚರಿಸುವವನು ದುರ್ಗಾದೇವಿಯ ಅನುಗ್ರಹದಿಂದ ಈ ಲೋಕದಲ್ಲಿ ಸಕಲ ಸಿದ್ಧಿಗಳನ್ನೂ ಹೊಂದುವನು. ಸಂದೇಹವಿಲ್ಲ

೩೫. ಅನಂತರ ಕಾರ್ತಿಕ ಶುಕ್ಲ ಪಾಡ್ಯದ ದಿನ ನವರಾತ್ರಿಯುವ್ರತದಲ್ಲಿ ವಿಹಿತವಾಗಿರುವಂತೆ ಕಲಶಸ್ಥಾಪನಾದಿಗಳನ್ನು ಮಾಡಿ ವಿಷ್ಣುಪ್ರಸಾದವನ್ನು ಅಭಿವೃದ್ಧಿಗೊಳಿಸುವ ಅನ್ನಕೂಟವೆಂಬ ವ್ರತವನ್ನು ವಿಶೇಷವಾಗಿ ಮಾಡಬೇಕು.

೩೬-೩೭. ಸಕಲಾಭೀಷ್ಟಸಿದ್ಧಿಗಾಗಿ ಎಲ್ಲಾ ಅಡಿಗೆಗಳನ್ನೂ ಮಾಡಿ ಹಾಲು ಮೊಸರು ಮುಂತಾದುವುಗಳನ್ನು ಸೇರಿಸಿ ಅನ್ನರಾಶಿಯನ್ನು ದೇವರ ಇದಿರಿನಲ್ಲಿ ರಚಿಸಿ ಅದನ್ನು ಗೋವರ್ಧನಪರ್ವತವೆಂದು ಅನುಸಂಧಾನದಿಂದ ಪೂಜೆಮಾಡಿ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದರೆ ಭೋಗಮೋಕ್ಷಗಳು ಲಭಿಸುವುವು.

ಅಥ ಮಾರ್ಗಸಿತಾದ್ಯಾಯಾಂ ಧನವ್ರತಮನುತ್ತಮಂ ।
ನಕ್ತಂ ವಿಷ್ಣ್ವರ್ಚನಂ ಹೋಮಸ್ಸೌವರ್ಣಂ ಹುತಭುಕ್ತನುಂ ॥ ೩೮ ॥

ರಕ್ತವಸ್ತ್ರಯುಗಾಚ್ಛನ್ನಾಂ ದ್ವಿಜಾಯ ಪ್ರತಿಪಾದಯೇತ್ ।
ಏವಂ ಕೃತ್ವಾ ಧನೈರ್ಧಾನ್ಯೈಃ ಸಮೃದ್ಧೋ ಜಾಯತೇ ಭುವಿ ॥ ೩೯ ॥

ವಹ್ನಿನಾ ದಗ್ಧಪಾಪಸ್ತು ವಿಷ್ಣುಲೋಕೇ ಮಹೀಯತೇ ।
ಪೌಷಶುಕ್ಲಪ್ರತಿಪದಿ ಭಾನುಮಭ್ಯರ್ಚ್ಯ ಭಕ್ತಿತಃ ॥ ೪೦ ॥

ಏಕಭುಕ್ತವ್ರತೋ ಮರ್ತ್ಯೋ ಭಾನುಲೋಕಮವಾಪ್ನುಯಾತ್ ।
ಮಾಘಶುಕ್ಲಾದ್ಯದಿವಸೇ ವಹ್ನಿಂ ಸಾಕ್ಷಾನ್ಮಹೇಶ್ವರಂ ॥ ೪೧ ॥

ಸಮಭ್ಯರ್ಚ್ಯ ವಿಧಾನೇನ ಸಮೃದ್ಧೋ ಜಾಯತೇ ಭುವಿ ।
ಅಥ ಫಾಲ್ಗುನಶುಕ್ಲಾದೌ ದೇವದೇವಂ ದಿಗಂಬರಂ ॥ ೪೨ ॥

---

೩೮-೩೯. ಮಾರ್ಗಶೀರ್ಷಮಾಸದ ಶುಕ್ಲ ಪಾಡ್ಯದ ದಿವಸದಲ್ಲಿ ಉತ್ತಮವಾದ ಧನವ್ರತವನ್ನಾಚರಿಸಬೇಕು.

ಅದರ ವಿಧಾನ.—ರಾತ್ರಿ ಹೋಮಾದಿಗಳಿಂದ ವಿಷ್ಣುಪೂಜೆ ಮಾಡಬೇಕು. ಅನಂತರ ಬಂಗಾರದ ಅಗ್ನಿಪ್ರತಿಮೆಯನ್ನು ಮಾಡಿಸಿ ಅದಕ್ಕೆ ಎರಡು ಕೆಂಪು ವಸ್ತ್ರಗಳನ್ನು ಹೊದಿಸಿ ಬ್ರಾಹ್ಮಣನಿಗೆ ಕೊಡಬೇಕು. ಹೀಗೆ ಮಾಡಿದರೆ ಇಲ್ಲಿಯೇ ಧನ ಧಾನ್ಯ ಸಮೃದ್ಧಿಯುಂಟಾಗುವುದು.

೪೦-೪೩. ಮತ್ತು ಅಗ್ನಿಯಿಂದ ಇವನ ಪಾಪವು ಸುಟ್ಟುಹೋಗುವುದು. ಅನಂತರ ವಿಷ್ಣುಲೋಕಕ್ಕೆ ಹೋಗಿ ಸತ್ಕಾರಪಡೆಯುವನು.

ಪುಷ್ಯಮಾಸದ ಶುಕ್ಲ ಪಾಡ್ಯದ ದಿನದಲ್ಲಿ ಒಪ್ಪತ್ತು ಊಟಮಾಡಿ ಭಕ್ತಿಯಿಂದ ಸೂರ್ಯನನ್ನು ಪೂಜಿಸುವ ಮನುಷ್ಯನು ಸೂರ್ಯಲೋಕವನ್ನು ಹೊಂದುವನು.

**ಧೂಲಿಧೂಸರಸರ್ವಾಂಗಂ ಜಲೈರುಕ್ಷೇತ್ಸಮಂತತಃ ।**
**ಕರ್ಮಣಾ ಲೌಕಿಕೇನಾಪಿ ಸಂತುಷ್ಟೋ ಹಿ ಮಹೇಶ್ವರಃ || ೪೩ ||**

**ಸ್ವಸಾಯುಜ್ಯಂ ಪ್ರದಿಶತಿ ಭಕ್ತ್ಯಾ ಸಮ್ಯಕ್ಸಮರ್ಚಿತಃ ।**
**ವೈಶಾಖೇ ತು ಸಿತಾದ್ಯಾಯಾಂ ವಿಷ್ಣುಂ ವಿಶ್ವವಿಹಾರಿಣಂ || ೪೪ ||**

**ಸಮಭ್ಯರ್ಚ್ಯ ವಿಧಾನೇನ ವಿಪ್ರಾನ್ಸಂಭೋಜಯೇದ್ವ್ರತೀ ।**
**ಏವಂ ಶುಚಿಸಿತಾದ್ಯಾಯಾಂ ಬ್ರಹ್ಮಾಣಂ ಜಗತಾಂ ಗುರುಂ || ೪೫ ||**

ಮಾಘಮಾಸದ ಶುಕ್ಲ ಪಾಡ್ಯದಿನದಲ್ಲಿ ಅಗ್ನಿರೂಪಿಯಾದ ಸಾಕ್ಷಾನ್ಮಹೇಶ್ವರನನ್ನು ವಿಧಾನೋಕ್ತಪ್ರಕಾರವಾಗಿ ಪೂಜಿಸಿದರೆ ಐಶ್ವರ್ಯಸಂಪನ್ನನಾಗುವನು

ಫಾಲ್ಗುಣಮಾಸದ ಶುಕ್ಲ ಪಾಡ್ಯದ ದಿವಸದಲ್ಲಿ ಧೂಳಿಯಿಂದ ಸರ್ವಾಂಗವೂ ಧೂಮ್ರವರ್ಣವಾಗಿರುವ ದೇವದೇವನಾದ ದಿಗಂಬರನಿಗೆ ನೀರಿನಿಂದ ಸುತ್ತಲೂ ಅಭಿಷೇಕಮಾಡಬೇಕು. ಇಂತಹ ಲೌಕಿಕ ಸ್ನಾನಾದಿ ವ್ಯಾಪಾರದಿಂದಲೂ ಮಹೇಶ್ವರನು ಸಂತುಷ್ಟನಾಗುವನು.

೪೪-೪೫. ಈ ರೀತಿ ಭಕ್ತಿಯಿಂದ ಚೆನ್ನಾಗಿ ಪೂಜಿತನಾದ ಸ್ವಾಮಿಯು ಪೂಜಕನಿಗೆ ತನ್ನ ಸಾಯುಜ್ಯವನ್ನು ದಯಪಾಲಿಸುವನು.

ವೈಶಾಖಮಾಸದ ಶುಕ್ಲ ಪಾಡ್ಯದ ದಿವಸ ವ್ರತಕರ್ತನು ಜಗದ್ವಿಹಾರಿಯಾದ ವಿಷ್ಣುವನ್ನು ವಿಧಿವತ್ತಾಗಿ ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

ಇದೇ ರೀತಿಯಾಗಿ ಆಷಾಢಮಾಸದ ಶುಕ್ಲ ಪಾಡ್ಯದ ದಿವಸದಲ್ಲಿಯೂ ಜಗದ್ಗುರುವಾದ ಬ್ರಹ್ಮನನ್ನು ಆರಾಧಿಸಬೇಕು.

೪೬. ಹೀಗೆ ಆರಾಧಿಸುವವನಿಗೆ ಸರ್ವಲೋಕೇಶ್ವರನಾದ ವಿಷ್ಣುಸಹಿತ ಬ್ರಹ್ಮನು ಸಕಲಸಿದ್ಧಿಗಳನ್ನೂ ಕೊಟ್ಟು ತನ್ನ ಸಾಯುಜ್ಯವನ್ನು ಕೊಡುವನು.

ವಿಷ್ಣುನಾ ಸಹಿತೋ ಬ್ರಹ್ಮಾ ಸರ್ವಲೋಕೇಶ್ವರೇಶ್ವರಃ ।
ಸ್ವಸಾಯುಜ್ಯಂ ಪ್ರದಿಶತಿ ಸವ ಸಿದ್ಧಿಮವಾಪ್ನುಯಾತ್ || ೪೬ ||

ಆಸು ದ್ವಾದಶಮಾಸಾನಾಂ ಪ್ರತಿಪತ್ಸು ದ್ವಿಜೋತ್ತಮ ।
ವ್ರತಾನಿ ತುಭ್ಯಂ ಪ್ರೋಕ್ತಾನಿ ಭುಕ್ತಿಮುಕ್ತಿಪ್ರದಾನಿ ಚ || ೪೭ ||

ವ್ರತೇಷ್ವೇತೇಷು ಸರ್ವೇಷು ಬ್ರಹ್ಮಚರ್ಯಂ ವಿಧೀಯತೇ ।
ಭೋಜನಂ ತು ಹವಿಷ್ಯಾನ್ನಂ ಸಾಮಾನ್ಯತ ಉದಾಹೃತಂ || ೪೮ ||

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸಪ್ರತಿಪದ್ವ್ರತ ನಿರೂಪಣಂ ನಾಮ ದಶೋತ್ತರಶತತಮೋಽಧ್ಯಾಯಃ

೪೭. ದ್ವಿಜೋತ್ತಮನೇ ! ಈ ಹನ್ನೆರಡು ತಿಂಗಳುಗಳ ಪಾಡ್ಯದ ದಿನಗಳಲ್ಲಿ ಮಾಡಬೇಕಾದ ಭೋಗಮೋಕ್ಷದಾಯಕ ವ್ರತಗಳನ್ನು ನಿನಗೆ ಹೇಳಿರುವೆನು

೪೮. ಈ ಸಕಲವ್ರತಗಳಲ್ಲಿಯೂ ಸಾಮಾನ್ಯವಾಗಿ ಹವಿಷ್ಯಾನ್ನ ಭೋಜನ ಬ್ರಹ್ಮಚರ್ಯ ಇವುಗಳನ್ನು ಅವಶ್ಯವಾಗಿ ಆಚರಿಸಬೇಕು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳುಗಳ ಪಾಡ್ಯವ್ರತ ನಿರೂಪಣೆಯೆಂಬ ನೂರುಹತ್ತನೆಯ ಅಧ್ಯಾಯವು ಮುಗಿದುದು.

## ವಿಷಯಸಂಗ್ರಹ.

ಈ ಅಧ್ಯಾಯದಲ್ಲಿ ಹನ್ನೆರಡು ಪ್ರತಿಪದ್ವ್ರತಗಳು ಅವುಗಳಲ್ಲಿ ಪೂಜಿಸಬೇಕಾದ ದೇವತಾವಿಶೇಷಗಳು, ಪೂಜೆಯವಿಧಾನ ಕರ್ತವ್ಯದಾನ ಅವುಗಳ ಫಲ ಇವು ನಿರೂಪಿಸಲ್ಪಟ್ಟಿವೆ.

## ಏಕಾದಶಾಧಿಕಶತತಮೋಽಧ್ಯಾಯಃ

### ಸನಾತನ ಉವಾಚ

ಶೃಣು ವಿಪ್ರ ಪ್ರವಕ್ಷ್ಯಾಮಿ ದ್ವಿತೀಯಾಯಾ ವ್ರತಾನಿ ತೇ ।
ಯಾನಿ ಕೃತ್ವಾ ನರೋ ಭಕ್ತ್ಯಾ ಬ್ರಹ್ಮಲೋಕೇ ಮಹೀಯತೇ ॥ ೧ ॥

ಚೈತ್ರಶುಕ್ಲದ್ವಿತೀಯಾಯಾಂ ಬ್ರಹ್ಮಾಣಂ ಚ ಸಶಕ್ತಿಕಂ ।
ಹವಿಷ್ಯಾನ್ನೇನ ಗಂಧಾದ್ಯೈಸ್ತೋಷ್ಯ ಸರ್ವಕ್ರತೂದ್ಭವಂ ॥ ೨ ॥

ಫಲಂ ಲಬ್ಧ್ವಾಖಿಲಾನ್ಕಾಮಾನಂತೇ ಬ್ರಹ್ಮಪದಂ ಲಭೇತ್ ।
ಅಸ್ಮಿನ್ನೇವ ದಿನೇ ವಿಪ್ರ ಬಾಲೇಂದುಮುದಿತಂ ಪರೇ ॥ ೩ ॥

ಸಮಭ್ಯರ್ಚ್ಯ ನಿಶಾರಂಭೇ ಭುಕ್ತಿಮುಕ್ತಿಫಲಂ ಭವೇತ್ ।
ಅಥವಾಸ್ಮಿನ್ದಿನೇ ಭಕ್ತ್ಯಾ ದಸ್ರಾವಭ್ಯರ್ಚ್ಯ ಯತ್ನತಃ ॥ ೪ ॥

### ನೂರುಹನ್ನೊಂದನೆಯ ಅಧ್ಯಾಯವು

ಸನಾತನನು ಹೇಳಿದನು:— ಬ್ರಾಹ್ಮಣನಾದ ನಾರದನೇ! ಕೇಳು, ಬಿದಿಗೆಯ ದಿನ ಮಾಡಬೇಕಾದ ವ್ರತಗಳನ್ನು ನಿನಗೆ ಹೇಳುವೆನು. ಆ ವ್ರತಗಳನ್ನು ಭಕ್ತಿಯಿಂದ ಆಚರಿಸಿದರೆ ಅವನು ಬ್ರಹ್ಮಲೋಕದಲ್ಲಿ ಸತ್ಕರಿಸಲ್ಪಡುವನು.

೨-೫. ಚೈತ್ರಮಾಸಶುಕ್ಲಪಕ್ಷದ ಬಿದಿಗೆಯ ದಿನದಲ್ಲಿ ಬ್ರಹ್ಮನನ್ನು ಶಕ್ತಿ ಸಹಿತವಾಗಿ ಗಂಧಾದಿಗಳಿಂದ ಪೂಜಿಸಿ ಹವಿಷ್ಯಾನ್ನವನ್ನು ನೈವೇದ್ಯಮಾಡಿ ಸ್ತೋತ್ರಮಾಡಿದರೆ ಸಕಲ ಕ್ರತುಗಳಿಂದ ಆಗುವ ಫಲ ಮತ್ತು ಇಷ್ಟಾರ್ಥ ಗಳೆಲ್ಲಾ ಲಭಿಸಿ, ಕೊನೆಯಲ್ಲಿ ಬ್ರಹ್ಮಲೋಕವು ದೊರಕುವುದು.

ಆ ದಿನದಲ್ಲಿಯೇ ರಾತ್ರಿಯ ಆರಂಭಕಾಲದಲ್ಲಿ ಉದಯಿಸಿದ ಬಾಲಚಂದ್ರ ನನ್ನು ಪೂಜಿಸಿದರೆ ಭೋಗಮೋಕ್ಷಗಳು ಲಭಿಸುವುವು.

ಸುವರ್ಣರಜತೇ ನೇತ್ರೇ ಪ್ರದದ್ಯಾಚ್ಚ ದ್ವಿಜಾತಯೇ ।
ಪೂರ್ಣಪಾತ್ರೇ ವ್ರತೇ ಹ್ಯಸ್ಮಿನ್ದಧ್ನಾವಾಪಿ ಘೃತೇನ ಚ ॥ ೫ ॥

ನೇತ್ರವ್ರತಂ ದ್ವಾದಶವತ್ಸರಾನ್ಯಃ
ಕೃತ್ವಾ ಭವೇದ್ಭೂಮಿಪತಿರ್ದ್ವಿಜೇಂದ್ರ ।
ಸುರೂಪರೂಪೋರಿಗಣಪ್ರಿಯೋಽಪಿ
ಧರ್ಮಾಭಿರಾಮೋ ನೃಪವರ್ಗಮುಖ್ಯಃ ॥ ೬ ॥

ರಾಧಶುಕ್ಲದ್ವಿತೀಯಾಯಾಂ ಬ್ರಹ್ಮಾಣಂ ವಿಷ್ಣುರೂಪಿಣಂ ।
ಸಮಭ್ಯರ್ಚ್ಯ ಸಪ್ತಧಾನ್ಯಾಢ್ಯಕುಂಭೋಪರಿ ವಿಧಾನತಃ ॥ ೭ ॥

ವಿಷ್ಣುಲೋಕಮವಾಪ್ನೋತಿ ಭುಕ್ತ್ವಾ ಭೋಗಾನ್ಮನೋರಮಾನ್ ।
ಜ್ಯೇಷ್ಠಶುಕ್ಲದ್ವಿತೀಯಾಯಾಂ ಭಾಸ್ಕರಂ ಭುವನಾಧಿಪಂ ॥ ೮ ॥

---

ಅಥವಾ ಆ ದಿನ ಭಕ್ತಿಯಿಂದ ಪ್ರಯತ್ನಪೂರ್ವಕವಾಗಿ ಅಶ್ವಿನೀದೇವತೆಗಳನ್ನು ಪೂಜಿಸಿ ಬ್ರಾಹ್ಮಣನಿಗೆ ಬಂಗಾರ ಮತ್ತು ಬೆಳ್ಳಿಯ ಕಣ್ಣುಗಳನ್ನು ದಾನಮಾಡಬೇಕು

ಅಥವಾ ಈ ವ್ರತದಲ್ಲಿ ಮೊಸರು ಅಥವಾ ತುಪ್ಪವನ್ನು ತುಂಬಿ ಪಾತ್ರೆಗಳನ್ನು ದಾನಮಾಡಬೇಕು.

೬. ದ್ವಿಜೇಂದ್ರನೇ! ಈ ನೇತ್ರವ್ರತವನ್ನು ಹನ್ನೆರಡು ವರ್ಷಗಳು ಮಾಡುವವನು ಭೂಪತಿಯು, ಒಳ್ಳೆಯ ರೂಪವಂತನೂ, ಶತ್ರುಸಂಘಕ್ಕೂ ಸಹ ಪ್ರಿಯನು, ಧರ್ಮಾನುಷ್ಠಾನದಿಂದ ಸಂತೋಷಿಸುವವನು ಮತ್ತು ರಾಜವರ್ಗಮುಖ್ಯನೂ ಆಗುವನು.

೭-೮. ವೈಶಾಖಮಾಸದ ಶುಕ್ಲಬಿದಿಗೆಯದಿನದಲ್ಲಿ ವಿಷ್ಣುರೂಪಿಯಾದ ಬ್ರಹ್ಮನನ್ನು ಸಪ್ತಧಾನ್ಯ ಪೂರ್ಣಕಲಶದ ಮೇಲೆ ವಿಧಿವತ್ತಾಗಿ ಪೂಜಿಸಿದರೆ ದಿವ್ಯಭೋಗಗಳನ್ನು ಅನುಭವಿಸಿ ವಿಷ್ಣುಲೋಕಕ್ಕೆ ಹೋಗುವನು.

ಚತುರ್ವಕ್ತ್ರಸ್ವರೂಪಂ ಚ ಸಮಭ್ಯರ್ಚ್ಯ ವಿಧಾನತಃ ।
ಭೋಜಯಿತ್ವಾ ದ್ವಿಜಾನ್ಭಕ್ತ್ಯಾ ಭಾಸ್ಕರಂ ಲೋಕಮಾಪ್ನುಯಾತ್ ॥ ೯ ॥

ಆಷಾಢಸ್ಯ ಸಿತೇ ಪಕ್ಷೇ ದ್ವಿತೀಯಾ ಪುಣ್ಯಸಂಯುತಾ ।
ತಸ್ಯಾಂ ರಥಂ ಸಮಾರೋಪ್ಯ ರಾಮಂ ಸಹ ಸುಭದ್ರಯಾ ॥ ೧೦ ॥

ದ್ವಿಜಾದಿಭಿರ್ವ್ರತೀ ಸಾರ್ಧಂ ಪರಿಕ್ರಮ್ಯ ಪುರಾದಿಕಂ ।
ಜಲಾಶಯಾಂತಿಕಂ ಗತ್ವಾ ಕಾರಯೇಚ್ಚ ಮಹೋತ್ಸವಂ ॥ ೧೧ ॥

ತದಂತೇ ದೇವಭವನೇ ನಿವೇಶ್ಯ ಚ ಯಥಾವಿಧಿ ।
ಬ್ರಾಹ್ಮಣಾನ್ಭೋಜಯೇಚ್ಚೈವ ವ್ರತಸ್ಯಾಸ್ಯ ಪ್ರಪೂರ್ತಯೇ ॥ ೧೨ ॥

ನಭಃಶುಕ್ಲದ್ವಿತೀಯಾಯಾಂ ವಿಶ್ವಕರ್ಮಾ ಪ್ರಜಾಪತಿಃ ।
ಸ್ವಪಿತೀತಿ ತಿಥಿಃ ಪುಣ್ಯಾ ಹ್ಯಶೋಕಶಯನಾಹ್ವಯಾ ॥ ೧೩ ॥

---

ಜ್ಯೇಷ್ಠಮಾಸದ ಶುಕ್ಲದ್ವಿತೀಯಾ ದಿನದಲ್ಲಿ ನಾಲ್ಕು ಮುಖಗಳುಳ್ಳ, ಲೋಕಾಧಿಪನಾದ ಸೂರ್ಯನನ್ನು ವಿಧಿವತ್ತಾಗಿ ಪೂಜಿಸಿ ಭಕ್ತಿಯಿಂದ ಬ್ರಾಹ್ಮಣ ಭೋಜನ ಮಾಡಿಸಿದರೆ ಸೂರ್ಯಲೋಕಪ್ರಾಪ್ತಿಯಾಗುವುದು.

೧೦-೧೧. ಆಷಾಢಮಾಸದ ಶುಕ್ಲಬಿದಿಗೆಯು ಪುಣ್ಯಪ್ರದವು. ಆ ದಿನ ದಲ್ಲಿ ರಾಮನನ್ನು ಮಂಗಳದೇವಿಯೊಡನೆ ರಥಾರೋಹಣಮಾಡಿಸಿ, ವ್ರತಕರ್ತನು ಬ್ರಾಹ್ಮಣಸುವಾಸಿನಿಯರೊಡನೆ ಪುರಪ್ರದಕ್ಷಿಣೆಮಾಡಿ, ಕೆರೆ ಮುಂತಾದ ಜಲಾ ಶಯದ ಹತ್ತಿರ ಹೋಗಿ ಮಹೋತ್ಸವವನ್ನು ಮಾಡಿಸಬೇಕು.

೧೨. ಉತ್ಸವವಾದನಂತರ ದೇವಾಲಯದಲ್ಲಿ ದೇವರನ್ನು ಸ್ಥಾಪಿಸಿ, ಈ ವ್ರತವು ಸಂಪೂರ್ಣವಾಗುವುದಕ್ಕಾಗಿ ಬ್ರಾಹ್ಮಣಭೋಜನವನ್ನು ಮಾಡಿಸ ಬೇಕು.

೧೩ ಶ್ರಾವಣಶುಕ್ಲದ್ವಿತೀಯಾ ದಿವಸದಲ್ಲಿ ಜಗತ್ಸ್ರಷ್ಟೃವಾದ ಪ್ರಜಾ ಪತಿಯು ನಿದ್ರಿಸುವನಾದಕಾರಣ ಆ ತಿಥಿಯು ಅಶೋಕಶಯನ ಎಂದು ಕರೆಯ ಲ್ಪಟ್ಟು ಪುಣ್ಯಕರವಾಗಿದೆ.

ಸಶಕ್ತಿಕಂ ತು ಶಯ್ಯಾಸ್ಥಂ ಪೂಜಯಿತ್ವಾ ಚತುರ್ಮುಖಂ ।
ಇಮಮುಚ್ಚಾರಯೇನ್ಮಂತ್ರಂ ಪ್ರಣಮ್ಯ ಜಗತಾಂ ಪತಿಂ　　॥ ೧೪ ॥

ಶ್ರೀವತ್ಸಧಾರಿನ್ ಶ್ರೀಕಾಂತ ಶ್ರೀವಾಸ ಶ್ರೀಪತೇ ಪ್ರಭೋ ।
ಗಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾರ್ಥಕಾಮದ　　॥ ೧೫ ॥

ಚಂದ್ರಾರ್ಘ್ಯದಾನಮತ್ರೋಕ್ತಂ ಸರ್ವಸಿದ್ಧಿವಿಧಾಯಕಂ ।
ಭಾದ್ರಶುಕ್ಲದ್ವಿತೀಯಾಯಾಂ ಶಕ್ರರೂಪಂ ಜಗದ್ವಿಧಿಂ　　॥ ೧೬ ॥

ಪೂಜಯಿತ್ವಾ ವಿಧಾನೇನ ಸರ್ವಕ್ರತುಫಲಂ ಲಭೇತ್ ।
ಆಶ್ವಿನೇ ಮಾಸಿ ವೈ ಪುಣ್ಯಾ ದ್ವಿತೀಯಾ ಶುಕ್ಲಪಕ್ಷಗಾ　　॥ ೧೭ ॥

೧೪. ಆ ದಿವಸ ಶಕ್ತಿಸಹಿತವಾಗಿ ಹಾಸಿಗೆಯ ಮೇಲೆ ಮಲಗಿರುವ ಚತುರ್ಮುಖನನ್ನು ಪೂಜಿಸಿ ಆ ಜಗತ್ಪತಿಯನ್ನು ನಮಸ್ಕರಿಸಿ ಈ ಮಂತ್ರವನ್ನು ಹೇಳಬೇಕು.

೧೫ ಶ್ರೀವತ್ಸಧಾರಿಯು, ಶ್ರೀಕಾಂತನು, ಶ್ರೀನಿವಾಸನು, ಶ್ರೀಪತಿಯು ಧರ್ಮಾರ್ಥಕಾಮದಾಯಕನೂ ಆಗಿರುವ ಸ್ವಾಮಿಯೇ! ನನ್ನ ಗಾರ್ಹಸ್ಥ್ಯವು ಹಾಳಾಗದಂತೆ ರಕ್ಷಿಸು

೧೬-೨೦. ಈ ವ್ರತದಲ್ಲಿ ಚಂದ್ರನಿಗೆ ಅರ್ಘ್ಯಪ್ರದಾನವು ಸಕಲಸಿದ್ಧಿಪ್ರದವೆಂದು ಉಕ್ತವಾಗಿದೆ.

ಭಾದ್ರಪದಮಾಸದ ಶುಕ್ಲದ್ವಿತೀಯಾದಿನದಲ್ಲಿ ಇಂದ್ರರೂಪಿಯಾದ ಬ್ರಹ್ಮನನ್ನು ವಿಧಾನೋಕ್ತಪ್ರಕಾರ ಪೂಜಿಸಿದರೆ ಸಕಲ ಯಜ್ಞಗಳ ಫಲವೂ ಬರುತ್ತದೆ.

ಆಶ್ವಯುಜಮಾಸದ ಶುಕ್ಲಬಿದಿಗೆಯ ದಿನವು ಪುಣ್ಯತಿಥಿಯು. ಆ ದಿನದಲ್ಲಿ ದಾನಕೊಟ್ಟರೆ ಅನಂತ ಫಲಪ್ರಾಪ್ತಿಯಾಗುವುದು.

ದಾನಂ ಪ್ರದತ್ತಮೇತಸ್ಯಾಮನಂತಫಲಮುಚ್ಯತೇ ।
ಊರ್ಜಶುಕ್ಲದ್ವಿತೀಯಾಯಾಂ ಯಮೋ ಯಮುನಯಾ ಪುರಾ ॥ ೧೮ ॥

ಭೋಜಿತಃ ಸ್ವಗೃಹೇ ತೇನ ದ್ವಿತೀಯೈಷಾ ಯಮಾಹ್ವಯಾ ।
ಪುಷ್ಟಿಪ್ರವರ್ಧನಂ ಚಾತ್ರ ಭಗಿನ್ಯಾ ಭೋಜನಂ ಗೃಹೇ ॥ ೧೯ ॥

ವಸ್ತ್ರಾಲಂಕಾರಪೂರ್ವಂ ತು ತಸ್ಯೈ ದೇಯಮತಃ ಪರಂ ॥ ೨೦ ॥

ಯಸ್ಯಾಂ ತಿಥೌ ಯಮುನಯಾ ಯಮರಾಜದೇವಃ
ಸಂಭೋಜಿತೋ ನಿಜಕರಾತ್ಸ್ವಸೃಸೌಹೃದೇನ ।
ತಸ್ಯಾಂ ಸ್ವಸುಃ ಕರತಲಾದಿಹ ಯೋ ಭುನಕ್ತಿ
ಸ್ಪ್ರಾಪ್ನೋತಿ ರತ್ನಧನಧಾನ್ಯಮನುತ್ತಮಂ ಸಃ ॥ ೨೧ ॥

ಮಾರ್ಗಶುಕ್ಲದ್ವಿತೀಯಾಯಾಂ ಶ್ರಾದ್ಧೇನ ಪಿತೃಪೂಜನಂ ।
ಆರೋಗ್ಯಂ ಲಭತೇ ಚಾಪಿ ಪುತ್ರಪೌತ್ರಸಮನ್ವಯಃ ॥ ೨೨ ॥

---

ಪೂರ್ವದಲ್ಲಿ ಕಾರ್ತಿಕ ಶುಕ್ಲ ಬಿದಿಗೆಯ ದಿನ ಯಮನು ತನ್ನ ತಂಗಿಯಾದ ಯಮುನೆಯ ಮನೆಯಲ್ಲಿ ಆಕೆಯಿಂದ ಭೋಜನಮಾಡಿಸಲ್ಪಟ್ಟನು. ಆದಕಾರಣ ಆ ದಿವಸವು ಯಮದ್ವಿತೀಯಾ ಎಂಬುದಾಗಿ ಪ್ರಸಿದ್ಧವಾಯಿತು ಆ ದಿವಸದಲ್ಲಿ ಭಗಿನಿಯ ಮನೆಯಲ್ಲಿ ಅಣ್ಣತಮ್ಮಂದಿರಿಗೆ ಭೋಜನಮಾಡಿಸುವುದು ಪುಷ್ಟಿ ವರ್ಧಕವು ಹೀಗೆ ಭಗಿನಿಯರ ಮನೆಯಲ್ಲಿ ಊಟಮಾಡಿದಮೇಲೆ ಸಹೋದರರು ಅವರಿಗೆ ವಸ್ತ್ರಾಭರಣಾದಿಗಳನ್ನು ಕೊಡಬೇಕು.

೨೧. ಯಮರಾಜದೇವನು ಯಮುನೆಯಿಂದ ಸೌಹಾರ್ದಪೂರ್ವಕವಾಗಿ ಆಕೆಯ ಕೈಯಿಂದ ಯಾವ ದಿವಸ ಭೋಜನಮಾಡಿಸಲ್ಪಟ್ಟನೋ ಆ ದಿವಸದಲ್ಲಿ ಭಗಿನಿಯರ ಕೈಯಿಂದ ಭೋಜನಮಾಡಿಸಲ್ಪಡುವವನು ಉತ್ತಮ ರತ್ನ, ಧನ, ಧಾನ್ಯ ಮುಂತಾದುವನ್ನು ಪಡೆಯುವನು.

೨೨. ಮಾರ್ಗಶಿರಮಾಸದ ಶುಕ್ಲ ದ್ವಿತೀಯೆಯ ದಿನದಲ್ಲಿ ಶ್ರಾದ್ಧಮಾಡಿ ಪಿತೃಸತ್ಕಾರಮಾಡುವವನು ಆರೋಗ್ಯ ಮತ್ತು ಪುತ್ರ ಪೌತ್ರಾದಿಗಳನ್ನು ಪಡೆಯುವನು.

ಪೌಷಶುಕ್ಲದ್ವಿತೀಯಾಯಾಂ ಗೋಶೃಂಗೋದಕಮಾರ್ಜನಂ ।
ಸರ್ವಕಾಮಪ್ರದಂ ನೄಣಾಮಸ್ತೇ ಬಾಲೇಂದುದರ್ಶನಂ ॥ ೨೩ ॥

ಯೋಽರ್ಘ್ಯದಾನೇನ ಬಾಲೇಂದುಂ ಹವಿಷ್ಯಾಶೀ ಜಿತೇಂದ್ರಿಯಃ ।
ಪೂಜಯೇತ್ಸಾಜ್ಯಸುಮನೈರ್ಧರ್ಮಕಾಮಾರ್ಥಸಿದ್ಧಯೇ ॥ ೨೪ ॥

ಮಾಘಶುಕ್ಲದ್ವಿತೀಯಾಯಾಂ ಭಾನುರೂಪಂ ಪ್ರಜಾಪತಿಂ ।
ಸಮಭ್ಯರ್ಚ್ಯ ಯಥಾನ್ಯಾಯಂ ಪೂಜಯೇದ್ರಕ್ತಪುಷ್ಪಕೈಃ ॥ ೨೫ ॥

ರಕ್ತೈರ್ಗಂಧೈಸ್ತಥಾ ಸ್ವರ್ಣಮೂರ್ತಿಂ ನಿರ್ಮಾಯ ಶಕ್ತಿತಃ ।
ತತಃ ಪೂರ್ಣಂ ತಾಮ್ರಪಾತ್ರಂ ಗೋಧೂಮೈರ್ವಾಪಿ ತಂಡುಲೈಃ ॥ ೨೬ ॥

ಸಮರ್ಪ್ಯ ದೇವೇ ಭಕ್ತ್ಯೈವ ಸಮೂರ್ತಿಂ ಪ್ರದದೇದ್ದ್ವಿಜೇ ।
ಏವಂ ಕೃತೇ ವ್ರತೇ ವಿಪ್ರ ಸಾಕ್ಷಾತ್ಸೂರ್ಯ ಇವೋದಿತಃ ॥ ೨೭ ॥

೨೩. ಪುಷ್ಯ ಶುಕ್ಲ ಬಿದಿಗೆಯ ದಿವಸದಲ್ಲಿ ಗೋಶೃಂಗೋದಕಮಾರ್ಜನೆ, ಅಸ್ತಮಯಕಾಲದಲ್ಲಿ ಬಾಲಚಂದ್ರದರ್ಶನ ಇವು ಮನುಷ್ಯರಿಗೆ ಸಕಲೇಷ್ಟಾರ್ಥ ಪ್ರದಗಳು.

೨೪. ಆ ದಿನದಲ್ಲಿ ಜಿತೇಂದ್ರಿಯನು ಹವಿಷ್ಯಾಹಾರವಾಡುತ್ತಾ ಧರ್ಮ, ಕಾಮ, ಅರ್ಥಗಳನ್ನು ಪಡೆಯುವುದಕ್ಕಾಗಿ ಬಾಲಚಂದ್ರನಿಗೆ ಅರ್ಘ್ಯ ಕೊಟ್ಟು ಅವನನ್ನು ಪುಷ್ಪಗಳಿಂದ ಪೂಜಿಸಬೇಕು

೨೫-೨೭ ಮಾಘಶುಕ್ಲ ಬಿದಿಗೆಯ ದಿವಸದಲ್ಲಿ ಸೂರ್ಯರೂಪಿಯಾದ ಪ್ರಜಾಪತಿಯನ್ನು ಯಥೋಚಿತವಾಗಿ ಪೂಜಿಸಿ ತನ್ನ ಶಕ್ತ್ಯನುಸಾರವಾಗಿ ಸುವರ್ಣಮೂರ್ತಿಯನ್ನು ರಚಿಸಿ ಅದನ್ನು ಕೆಂಪು ಹೂವುಗಂಧಗಳಿಂದ ಪೂಜಿಸಬೇಕು. ತರುವಾಯ ಗೋಧಿ ಅಥವಾ ಅಕ್ಕಿಯನ್ನು ತಾಮ್ರದ ಪಾತ್ರೆಯಲ್ಲಿ ತುಂಬಿ ಅದನ್ನು ಭಕ್ತಿಯಿಂದ ದೇವರಿಗೆ ಸಮರ್ಪಿಸಿ ಮೂರ್ತಿಸಹಿತವಾಗಿ ಬ್ರಾಹ್ಮಣನಿಗೆ ಅದನ್ನು ದಾನಮಾಡಬೇಕು.

ದುರಾಸದೋ ದುರಾಧರ್ಷೋ ಜಾಯತೇ ಭುವಿ ಮಾನವಃ ।
ಇಹ ಕಾಮಾನ್ ವರಾನ್ ಭುಕ್ತ್ವಾ ಯಾತ್ಯಂತೇ ಬ್ರಹ್ಮಣಃ ಪದಂ ॥ ೨೮ ॥

ಸರ್ವದೇವಸ್ತುತೋಽಭೀಕ್ಷ್ಣಂ ವಿಮಾನವರಮಾಸ್ಥಿತಃ ।
ಅಥ ಫಾಲ್ಗುಣಶುಕ್ಲಾಯಾಂ ದ್ವಿತೀಯಾಯಾಂ ದ್ವಿಜೋತ್ತಮಃ ॥ ೨೯ ॥

ಪುಷ್ಪೈಃ ಶಿವಂ ಸಮಭ್ಯರ್ಚ್ಯ ಸಶ್ವೇತೈಶ್ಚ ಸುಗಂಧಿಭಿಃ ।
ಪುಷ್ಪೈರ್ವಿತಾನಕಂ ಕೃತ್ವಾ ಪುಷ್ಪಾಲಂಕರಣೈಃ ಶುಭೈಃ ॥ ೩೦ ॥

ನೈವೇದ್ಯೈರ್ವಿವಿಧೈರ್ಧೂಪೈರ್ದೀಪೈರ್ನೀರಾಜನಾದಿಭಿಃ ।
ಪ್ರಸಾದ್ಯ ಪ್ರಣಮೇಚ್ಚೈವ ಸಾಷ್ಟಾಂಗಂ ಪತಿತೋ ಭುವಿ ॥ ೩೧ ॥

ಈ ರೀತಿಯಾಗಿ ವ್ರತವನ್ನಾಚರಿಸಿದರೆ ಆ ಮನುಷ್ಯನು ಸಾಕ್ಷಾತ್ ಸೂರ್ಯನಂತೆ ತೇಜಸ್ವಿಯಾಗಿ ಪ್ರಕಾಶಿಸುತ್ತಾ ಹೊಂದಲು ಮತ್ತು ತಡೆಯಲು ಅಶಕ್ಯನಾಗುವನು. . ಈ ಲೋಕದಲ್ಲಿ ಇಷ್ಟವರಗಳನ್ನು ಅನುಭವಿಸಿ ಕೊನೆಯಲ್ಲಿ ಬ್ರಹ್ಮಲೋಕಕ್ಕೆ ಹೋಗುವನು.

೨೯-೩೧, ಅಲ್ಲಿಯೂ ವಿಮಾನದಲ್ಲಿ ಕುಳಿತು ಸಕಲ ದೇವತೆಗಳಿಂದಲೂ ಅತ್ಯಂತವಾಗಿ ಸ್ತುತಿಸಲ್ಪಡುವನು

ಫಾಲ್ಗುಣ ಶುಕ್ಲ ಬಿದಿಗೆಯ ದಿನದಲ್ಲಿ ದ್ವಿಜೋತ್ತಮನು ಸುವಾಸನೆಯುಳ್ಳ ಬಿಳಿಯ ಹೂವುಗಳಿಂದ ಈಶ್ವರನನ್ನು ಪೂಜಿಸಿ, ಒಳ್ಳೆಯ ಹೂವು, ಆಭರಣಗಳಿಂದ ಪುಷ್ಪವಿತಾನವನ್ನು ರಚಿಸಿ, ನಾನಾಭಕ್ಷ್ಯಫಲಾದಿಗಳ ನೈವೇದ್ಯವನ್ನು ಮಾಡಿ, ಧೂಪ ದೀಪ ಆರತಿಗಳಿಂದ ಸಂತೋಷಪಡಿಸಿ ಭೂಮಿಯಲ್ಲಿ ಬಿದ್ದು ಸಾಷ್ಟಾಂಗ ನಮಸ್ಕಾರಮಾಡಬೇಕು.

ಏವಮಭ್ಯರ್ಚ್ಯ ದೇವೇಶಂ ಮರ್ತ್ಯೋ ವ್ಯಾಧಿವಿವರ್ಜಿತಃ ।
ಧನಧಾನ್ಯಸಮಾಯುಕ್ತೋ ಜೀವೇದ್ವರ್ಷಶತಂ ಧ್ರುವಂ　　|| ೩೨ ||

ಯದ್ವಿಧಾನಂ ದ್ವಿತೀಯಾಸು ಶುಕ್ಲಪಕ್ಷಗತಾಸು ವಾ ।
ಪ್ರೋಕ್ತಂ ತದೇವ ಕೃಷ್ಣಾಸು ಕರ್ತವ್ಯಂ ವಿಧಿಕೋವಿದೈಃ　　|| ೩೩ ||

ವಹ್ನಿರೇವ ಪೃಥಙ್ಮಾಸ್ಸು ನಾನಾರೂಪವಪುರ್ಧರಃ ।
ಪೂಜ್ಯತೇ ಹಿ ದ್ವಿತೀಯಾಸು ಬ್ರಹ್ಮಚರ್ಯಾದಿ ಪೂರ್ವವತ್　　|| ೩೪ ||

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸ ದ್ವಿತೀಯಾವ್ರತನಿರೂಪಣಂ ನಾಮ ಏಕಾದಶಾಧಿಕಶತತಮೋಽಧ್ಯಾಯಃ

---

೩೨. ಈ ರೀತಿ ದೇವೇಶನನ್ನು ಪೂಜಿಸಿದ ಮನುಷ್ಯನು ರೋಗವಿಲ್ಲದಂತೆ ಧನಧಾನ್ಯಸಮೃದ್ಧಿಯನ್ನು ಪಡೆದು ಖಂಡಿತವಾಗಿಯೂ ನೂರು ವರ್ಷಗಳ ಕಾಲ ಬದುಕುವನು.

೩೩ ಶುಕ್ಲಪಕ್ಷ ಬಿದಿಗೆಯ ವ್ರತಗಳಲ್ಲಿ ವಿಹಿತವಾಗಿರುವ ರೀತಿಯಿಂದಲೇ ಕೃಷ್ಣಪಕ್ಷದ ಬಿದಿಗೆಗಳಲ್ಲಿಯೂ ಸಹ ವ್ರತಾಚರಣೆಯನ್ನು ನಡೆಯಿಸಬೇಕೆಂದು ವಿಧಾನಕುಶಲರು ಹೇಳುತ್ತಾರೆ

೩೪. ಅಗ್ನಿಯೇ ಆಯಾಯಾ ಮಾಸಗಳಲ್ಲಿ ಪ್ರತ್ಯೇಕವಾಗಿ ನಾನಾರೂಪಗಳನ್ನು ಧರಿಸಿ ಬಿದಿಗೆಯ ವ್ರತಗಳಲ್ಲಿ ಪೂಜೆಯನ್ನು ಸ್ವೀಕರಿಸುವನು ಬ್ರಹ್ಮಚರ್ಯೆ ಮುಂತಾದ ನಿಯಮಗಳೆಲ್ಲವೂ ಹಿಂದೆ ಹೇಳಿರುವಂತೆಯೇ ನಡೆಯಿಸಲ್ಪಡಬೇಕು.

ಇಂತು ಶ್ರೀನಾರದೀಯ ಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ದ್ವಾದಶಮಾಸಗಳ ದ್ವಿತೀಯಾವ್ರತನಿರೂಪಣೆಯೆಂಬ ನೂರುಹನ್ನೊಂದನೆಯ ಅಧ್ಯಾಯವು ಮುಗಿದುದು.

## ದ್ವಾದಶಾಧಿಕಶತತಮೋಽಧ್ಯಾಯಃ

### ಸನಾತನ ಉವಾಚ

ಶೃಣು ನಾರದ ವಕ್ಷ್ಯಾಮಿ ತೃತೀಯಾಯಾ ವ್ರತಾನಿ ತೇ ।
ಯಾನಿ ಸಮ್ಯಗ್ವಿಧಾಯಾಶು ನಾರೀ ಸೌಭಾಗ್ಯಮಾಪ್ನುಯಾತ್ ॥ ೧ ॥

ಚೈತ್ರಶುಕ್ಲತೃತೀಯಾಯಾಂ ಗೌರೀಂ ಕೃತ್ವಾ ಸಭರ್ತೃಕಾಂ ।
ಸೌವರ್ಣೀಂ ರಾಜತೀಂ ವಾಪಿ ತಾಮ್ರೀಂ ವಾ ಮೃನ್ಮಯೀಂ ದ್ವಿಜ ॥ ೨ ॥

ಅಭ್ಯರ್ಚ್ಯ ಗಂಧಪುಷ್ಪಾದ್ಯೈರ್ವಸ್ತ್ರೈರಾಭರಣೈಃ ಶುಭೈಃ ।
ದೂರ್ವಾಕಾಂಡೈಶ್ಚ ವಿಧಿವತ್ಸೋಪವಾಸಾ ತು ಕನ್ಯಕಾ ॥ ೩ ॥

ವರಾರ್ಥಿನೀ ಚ ಸೌಭಾಗ್ಯಪುತ್ರಭರ್ತ್ರರ್ಥಿನೀ ತಥಾ ।
ದ್ವಿಜಭಾರ್ಯಾ ಭರ್ತೃಮತೀಃ ಕನ್ಯಕಾ ವಾ ಸುಲಕ್ಷಣಾಃ ॥ ೪ ॥

---

### ನೂರುಹನ್ನೆರಡನೆಯ ಅಧ್ಯಾಯವು.

೧. ಸನಾತನನು ಹೇಳಿದನು:—ನಾರದಾ ! ಸ್ತ್ರೀಯು ಸೌಭಾಗ್ಯವನ್ನು ಪಡೆಯುವುದಕ್ಕೆ ಸಾಧಕವಾದ ತದಿಗೆಯ ವ್ರತಗಳನ್ನು ಈಗ ನಿನಗೆ ಹೇಳುವೆನು ಕೇಳು.

೨-೫. ದ್ವಿಜಾ ! ಚೈತ್ರ ಶುಕ್ಲ ತದಿಗೆಯ ದಿನದಲ್ಲಿ ಬಂಗಾರ ಅಥವಾ ಬೆಳ್ಳಿ, ಇಲ್ಲವೇ ತಾಮ್ರ ಅಥವಾ ಮಣ್ಣಿನಿಂದಲಾದರೂ ಪತಿಸಹಿತಳಾದ ಗೌರೀ ದೇವಿಯನ್ನು ಮಾಡಿಸಿ, ಅದನ್ನು ಉಪವಾಸದಿಂದ ಗಂಧ, ಹೂವು ಮುಂತಾದ ಸುಗಂಧ ವಸ್ತುಗಳು ಒಳ್ಳೆಯ ವಸ್ತ್ರ ಮತ್ತು ಆಭರಣಗಳು, ಗರಿಕೆಯ ಕಡ್ಡಿ ಇವುಗಳಿಂದ ಪೂಜಿಸಿ, ವರಾರ್ಥಿನಿಯಾದ ಕನ್ಯೆಯು, ಸೌಭಾಗ್ಯ, ಪುತ್ರ, ಭರ್ತ್ರರ್ಥಿಗಳಾದವರೂ ಸಹ ಮುತ್ತೈದೆಯರು ಅಥವಾ ಸಲ್ಲಕ್ಷಣಯುಕ್ತಳಾದ ಕನ್ಯೆ

ಸಿಂದೂರಾಂಜನವಸ್ತ್ರಾದ್ಯೈಃ ಪ್ರತೋಷ್ಯ ಪ್ರೀತಮಾನಸಾ ।
ರಾತ್ರೌ ಜಾಗರಣಂ ಕುರ್ಯಾದ್ವ್ರತಸಂಪೂರ್ತಿಕಾಮ್ಯಯಾ ॥ ೫ ॥

ತತಸ್ತಾಂ ಪ್ರತಿಮಾಂ ವಿಪ್ರ ಗುರವೇ ಪ್ರತಿಪಾದಯೇತ್ ।
ಧಾತುಜಾಂ ಮೃನ್ಮಯೀಂ ವಾ ತು ನಿಕ್ಷಿಪೇಚ್ಚ ಜಲಾಶಯೇ ॥ ೬ ॥

ಏವಂ ದ್ವಾದಶವರ್ಷಾಣಿ ಕೃತ್ವಾ ಗೌರೀವ್ರತಂ ಶುಭಂ ।
ಧೇನುದ್ವಾದಶಸಂಕಲ್ಪಂ ದದ್ಯಾದುತ್ಸರ್ಗಸಿದ್ಧಯೇ ॥ ೭ ॥

ಕಿಮತ್ರ ಬಹುನೋಕ್ತೇನ ಗೌರೀ ಸೌಭಾಗ್ಯದಾಯಿನೀ ।
ಸ್ತ್ರೀಣಾಂ ಯಥಾ ತಥಾ ನಾನ್ಯಾ ವಿದ್ಯತೇ ಭುವನತ್ರಯೇ ॥ ೮ ॥

---

ಇವರನ್ನು ಸಿಂದೂರ, ಅಂಜನ, ವಸ್ತ್ರ, ಆಭರಣಾದಿಗಳಿಂದ ಸಂತೋಷಪಡಿಸಿ, ಸಂತೋಷಚಿತ್ತದಿಂದ ರಾತ್ರಿಯಲ್ಲಿ ಜಾಗರಣೆಮಾಡಬೇಕು. ಜಾಗರಣೆಯಿಂದ ವ್ರತವು ಸಂಪೂರ್ಣವಾಗುವುದು.

೬ ತರುವಾಯ ಲೋಹದಿಂದ ಮಾಡಿದ್ದ ಆ ಪ್ರತಿಮೆಯನ್ನು ಗುರುಗಳಿಗೆ ದಾನಮಾಡಬೇಕು. ಧಾತು ಅಥವಾ ಮಣ್ಣಿನಿಂದ ರಚಿಸಿದ ಪ್ರತಿಮೆಯಾಗಿದ್ದರೆ ಅದನ್ನು ಕೆರೆ ಮುಂತಾದ ಜಲಾಶಯಗಳಲ್ಲಿ ಸ್ಥಾಪಿಸಬೇಕು.

೭. ಈ ರೀತಿ ಹನ್ನೆರಡು ವರ್ಷಗಳು ಶುಭವಾದ ಈ ಗೌರೀವ್ರತವನ್ನು ಮಾಡಿ ಉತ್ಸರ್ಗಸಿದ್ಧಿಗಾಗಿ ಹನ್ನೆರಡು ಹಸುಗಳನ್ನು ಸಂಕಲ್ಪಪೂರ್ವಕವಾಗಿ ದಾನಮಾಡಬೇಕು.

೮. ಈ ವಿಷಯದಲ್ಲಿ ಹೆಚ್ಚು ಹೇಳಿದುದರಿಂದೇನು? ಸ್ತ್ರೀಯರಿಗೆ ಗೌರಿಯಂತೆ ಸೌಭಾಗ್ಯದಾಯಕ ದೇವತೆಯು ಮೂರು ಲೋಕಗಳಲ್ಲಿಯೂ ಬೇರೆಯಿಲ್ಲ.

ಧನಂ ಪುತ್ರಾನ್ಪತಿಂ ವಿದ್ಯಾಮಾಜ್ಞಾಸಿದ್ಧಿಂ ಯಶಃ ಸುಖಂ ।
ಲಭತೇ ಸರ್ವಥೈವೇಷ್ಟಂ ಗೌರೀಮಭ್ಯರ್ಚ್ಯ ಭಕ್ತಿತಃ ॥ ೯ ॥

ರಾಧಶುಕ್ಲತೃತೀಯಾ ಸ್ಯಾದಕ್ಷಯಾ ಪರಿಕೀರ್ತಿತಾ ।
ತಿಥಿಸ್ತ್ರೇತಾಯುಗಾದ್ಯಾ ಸಾ ಕೃತಸ್ಯಾಕ್ಷಯಕಾರಿಣೀ ॥ ೧೦ ॥

ದ್ವೇ ಶುಕ್ಲೇ ದ್ವೇ ತಥಾ ಕೃಷ್ಣೇ ಯುಗಾದೀ ಕವಯೋ ವಿದುಃ ।
ಶುಕ್ಲೇ ಪೂರ್ವಾಹ್ಣಿಕೇ ಗ್ರಾಹ್ಯೇ ಕೃಷ್ಣೇ ಚೈವ ತಪಸ್ಯಥ ॥ ೧೧ ॥

ದ್ವಾಪರಂ ಹಿ ಕಲಿರ್ಭಾದ್ರೇ ಪ್ರವೃತ್ತಾನಿ ಯುಗಾನಿ ವೈ ।
ತತ್ರ ರಾಧಾ ತೃತೀಯಾಯಾಂ ಶ್ರೀಸಮೇತಂ ಜಗದ್ಗುರುಂ ॥ ೧೨ ॥

ನಾರಾಯಣಂ ಸಮಭ್ಯರ್ಚೇತ್ ಪುಷ್ಪಧೂಪವಿಲೇಪನೈಃ ।
ಯದ್ವಾ ಗಂಗಾಂಭಸಿ ಸ್ನಾತೋ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೩ ॥

---

೯. ಭಕ್ತಿಯಿಂದ ಗೌರಿಯನ್ನು ಪೂಜಿಸಿದರೆ ಧನ, ಪುತ್ರ, ಪತಿ, ವಿದ್ಯೆ, ಆಜ್ಞಾಸಿದ್ಧಿ, ಕೀರ್ತಿ, ಸುಖ ಮತ್ತು ಇಷ್ಟವಾದುದೆಲ್ಲವೂ ಲಭಿಸುತ್ತದೆ.

೧೦. ವೈಶಾಖ ಶುಕ್ಲ ತದಿಗೆಯು ಅಕ್ಷಯತೃತೀಯಾ ಎಂದು ವಿಹಿತ ವಾಗಿದೆ. ಆ ತಿಥಿಯು ತ್ರೇತಾಯುಗಾದಿಯು. ಆ ದಿನದಲ್ಲಿ ಆಚರಿಸಿದ ಸ್ನಾನದಾನಾದಿಗಳು ಅಕ್ಷಯ ಫಲದಾಯಕವಾಗುವುದು

೧೧-೧೩. ಜ್ಞಾನಿಗಳು ಎರಡು ಶುಕ್ಲಯುಗಾದಿಗಳು ಮತ್ತು ಎರಡು ಕೃಷ್ಣಯುಗಾದಿಗಳು ಎಂದು ತಿಳಿದಿರುವರು ಶುಕ್ಲ ಕೃಷ್ಣ ಯುಗಾದಿಗಳು ಪೂರ್ವಾಹ್ಣವ್ಯಾಪ್ತವಾದರೆ ಸ್ವೀಕಾರ್ಯಗಳು. ದ್ವಾಪರ ಕಲಿಯುಗಗಳು ಭಾದ್ರಪದಮಾಸದಲ್ಲಿ ಪ್ರವೃತ್ತವಾಗುವುವು.

ವೈಶಾಖ ಶುಕ್ಲ ತೃತೀಯಾ ದಿನದಲ್ಲಿ ಜಗದ್ಗುರುವಾದ ನಾರಾಯಣನನ್ನು ಲಕ್ಷ್ಮೀದೇವಿಯ ಸಹಿತವಾಗಿ ಪುಷ್ಪ, ಧೂಪ, ಗಂಧಗಳಿಂದ ಚೆನ್ನಾಗಿ ಪೂಜಿಸ ಬೇಕು. ಅಥವಾ ಆ ದಿನ ಗಂಗೆಯಲ್ಲಿ ಸ್ನಾನಮಾಡಬೇಕು. ಹಾಗೆ ಮಾಡಿದರೆ ಸಕಲ ಪಾಪಗಳೂ ಹೋಗುವುವು.

ಅಕ್ಷತೈಃ ಪೂಜಯೇದ್ವಿಷ್ಣುಂ ಸ್ನಾಯಾದಪ್ಯಕ್ಷತೈರ್ನರಃ |
ಸಕ್ತೂನ್ಸಂಭೋಜಯೇದ್ವಿಪ್ರಾನ್ ಸ್ವಯಮಭ್ಯವಹರೇಚ್ಚ ತಾನ್ ॥ ೧೪ ॥

ಏವಂ ಕೃತವಿಧಿರ್ವಿಪ್ರ ನರೋ ವಿಷ್ಣುಪರಾಯಣಃ |
ವಿಷ್ಣುಲೋಕಮವಾಪ್ನೋತಿ ಸರ್ವದೇವಸಮಸ್ಕೃತಃ ॥ ೧೫ ॥

ಅಥ ಜ್ಯೇಷ್ಠತೃತೀಯಾ ತು ಶುಕ್ಲಾ ರಂಭೇತಿ ನಾಮತಃ |
ತಸ್ಯಾಂ ಸಭಾರ್ಯಂ ವಿಧಿವತ್ಪೂಜಯೇದ್ಬ್ರಾಹ್ಮಣೋತ್ತಮಂ ॥ ೧೬ ॥

ಗಂಧಪುಷ್ಪಾಂಶುಕಾದ್ಯೈಸ್ತು ನಾರೀ ಸೌಭಾಗ್ಯಕಾಮ್ಯಯಾ |
ರಂಭಾವ್ರತಮಿದಂ ವಿಪ್ರ ವಿಧಿವತ್ಸಮುಪಾಶ್ರಿತಂ ॥ ೧೭ ॥

ದದಾತಿ ವಿತ್ತಂ ಪುತ್ರಾಂಶ್ಚ ಮತಿಂ ಧರ್ಮೇ ಶುಭಾವಹಾಂ |
ಅಥಾಷಾಢತೃತೀಯಾಯಾಂ ಶುಕ್ಲಾಯಾಂ ಶುಕ್ಲವಾಸಸಾ ॥ ೧೮ ॥

---

೧೪ ಮನುಷ್ಯನು ವಿಷ್ಣುವನ್ನು ಅಕ್ಷತೆಗಳಿಂದ ಪೂಜಿಸಬೇಕು ಮತ್ತು ಸ್ನಾನಮಾಡಿಸಬೇಕು. ಬ್ರಾಹ್ಮಣರಿಗೆ ಸಕ್ತುಭೋಜನಮಾಡಿಸಿ ತಾನೂ ಸಹ ಅದನ್ನೇ ತಿನ್ನಬೇಕು.

೧೫ ಬ್ರಾಹ್ಮಣಾ! ಈ ರೀತಿ ಪೂಜಾದಿ ವಿಧಾನವನ್ನಾಚರಿಸಿದ ವಿಷ್ಣುಭಕ್ತನಾದ ಮನುಷ್ಯನು ಸಕಲ ದೇವತೆಗಳಿಂದಲೂ ಸತ್ಕರಿಸಲ್ಪಟ್ಟು ವಿಷ್ಣುಲೋಕವನ್ನು ಹೊಂದುವನು

೧೬-೨೪ ಜ್ಯೇಷ್ಠ ಶುಕ್ಲ ತದಿಗೆಯು ರಂಭಾತೃತೀಯಾ ಎಂದು ಹೆಸರುಗೊಂಡಿದೆ. ಆ ದಿನದಲ್ಲಿ ವಿಧಿವತ್ತಾಗಿ ಬ್ರಾಹ್ಮಣೋತ್ತಮ ದಂಪತಿಗಳನ್ನು ಗಂಧ, ಪುಷ್ಪ, ವಸ್ತ್ರ ಮುಂತಾದ ಉಪಚಾರಗಳಿಂದ ಪೂಜಿಸಬೇಕು.

ಬ್ರಾಹ್ಮಣನೇ! ನಾರೀ ಸೌಭಾಗ್ಯವನ್ನು ಬಯಸುವ ಸ್ತ್ರೀಯು ಈ ರಂಭಾವ್ರತವನ್ನಾಚರಿಸಿದರೆ ಧನ, ಪುತ್ರ, ಶುಭಕರವಾದ ಧರ್ಮಜ್ಞಾನ ಇವುಗಳುಂಟಾಗುವುವು.

ಕೇಶವಂ ತು ಸಲಕ್ಷ್ಮೀಕಂ ಸಸ್ತ್ರೀಕೇ ತು ದ್ವಿಜೇರ್ಚಯೇತ್ ।
ಭೋಜನೈಃ ಸುರಭೀದಾನೈರ್ವಸ್ತ್ರೈಶ್ಚಾಪಿ ವಿಭೂಷಣೈಃ ॥ ೧೯ ॥

ಪ್ರಿಯೈರ್ವಾಕ್ಯೈರ್ಭೃಶಂ ಪ್ರೀತಾ ನಾರೀ ಸೌಭಾಗ್ಯವಾಂಛಯಾ ।
ಸಮುಪಾಸ್ಯ ವ್ರತಂ ಚೈತದ್ಧನಧಾನ್ಯಸಮನ್ವಿತಾ ॥ ೨೦ ॥

ದೇವದೇವಪ್ರಸಾದೇನ ವಿಷ್ಣುಲೋಕಮವಾಪ್ನುಯಾತ್ ।
ನಭಃಶುಕ್ಲತೃತೀಯಾಯಾಂ ಸ್ವರ್ಣಗೌರೀವ್ರತಂ ಚರೇತ್ ॥ ೨೧ ॥

ಉಪಚಾರೈಃ ಷೋಡಶಭಿರ್ಭವಾನೀಮಭಿಪೂಜಯೇತ್ ।
ಪುತ್ರಾನ್ದೇಹಿ ಧನಂ ದೇಹಿ ಸೌಭಾಗ್ಯಂ ದೇಹಿ ಸುವ್ರತೇ ॥ ೨೨ ॥

ಅನ್ಯಾಂಶ್ಚ ಸರ್ವಕಾಮಾನ್ಮೇ ದೇಹಿ ದೇವಿ ನಮೋಸ್ತು ತೇ ।
ಏವಂ ಸಂಪ್ರಾರ್ಥ್ಯ ದೇವೇಶೀಂ ಭವಾನೀಂ ಭವಸಂಯುತಾಂ ॥ ೨೩ ॥

ಆಷಾಢ ಶುಕ್ಲ ತದಿಗೆಯ ದಿನದಲ್ಲಿ ಶುಕ್ಲವಸ್ತ್ರದಿಂದ ಲಕ್ಷ್ಮೀಸಹಿತ ಕೇಶವನನ್ನು ಪತ್ನೀಸಹಿತ ದ್ವಿಜನಲ್ಲಿ ಆವಾಹನೆ ಮಾಡಿ ಭೋಜನ ಸುಗಂಧ ದ್ರವ್ಯದಾನ, ಆಭರಣ ಮತ್ತು ಪ್ರಿಯವಚನಗಳಿಂದ ಆರಾಧಿಸಬೇಕು

ಈ ರೀತಿ ಅತ್ಯಂತ ಸಂತುಷ್ಟಳಾದ ಸ್ತ್ರೀಯು ಸೌಭಾಗ್ಯವನ್ನು ಬಯಸಿ ಅತ್ಯಂತ ಸಂತೋಷದಿಂದ ಈ ವ್ರತವನ್ನಾಚರಿಸಿದರೆ ದೇವದೇವನ ಅನುಗ್ರಹ ದಿಂದ ಧನಧಾನ್ಯಯುಕ್ತಳಾಗಿ ವಿಷ್ಣುಲೋಕವನ್ನು ಹೊಂದುವಳು.

ಶ್ರಾವಣ ಶುಕ್ಲ ತದಿಗೆಯ ದಿನ ಸ್ವರ್ಣಗೌರೀವ್ರತವನ್ನು ಮಾಡಬೇಕು. ಆ ವ್ರತದಲ್ಲಿ ಷೋಡಶೋಪಚಾರಗಳಿಂದ ಭವಾನೀದೇವಿಯನ್ನು ಪೂಜಿಸಬೇಕು.

ಅನಂತರ "ಸುವ್ರತದೇವಿಯೇ ! ನನಗೆ ಪುತ್ರ ಧನ ಸೌಭಾಗ್ಯ ಇತರ ಸಕಲ ಇಷ್ಟಾರ್ಥಗಳನ್ನೂ ದಯಪಾಲಿಸು. ನಿನಗೆ ನಮಸ್ಕಾರ" ಎಂಬುದಾಗಿ

**ವ್ರತಸಂಪೂರ್ತಿಕಾಮಾ ತು ವಾಯನಂ ದಾಪಯೇತ್ತಥಾ ।**
**ಏವಂ ಷೋಡಶವರ್ಷಾಣಿ ಕೃತ್ವಾ ನಾರೀ ವ್ರತಂ ಶುಭಂ ॥ ೨೪ ॥**

**ಉದ್ಯಾಪನಂ ಚರೇದ್ಭಕ್ತ್ಯಾ ವಿತ್ತಶಾಠ್ಯವಿವರ್ಜಿತಾ ।**
**ಮಂಡಪೇ ಮಂಡಲೇ ಶುದ್ಧೇ ಗಣೇಶಾದಿಸುರಾರ್ಚನಂ ॥ ೨೫ ॥**

**ಕೃತ್ವಾ ತಾಮ್ರಮಯಂ ಪಾತ್ರಂ ಕಲಶೋಪರಿ ವಿನ್ಯಸೇತ್ ।**
**ಸೌವರ್ಣೀಂ ಪ್ರತಿಮಾಂ ತತ್ರ ಭವಾನ್ಯಾಃ ಪ್ರತಿಪೂಜಯೇತ್ ॥ ೨೬ ॥**

**ಗಂಧಪುಷ್ಪಾದಿಭಿಃ ಸಮ್ಯಕ್ ತತೋ ಹೋಮಂ ಸಮಾಚರೇತ್ ।**
**ವೇಣುಪಾತ್ರೈಃ ಷೋಡಶಭಿಃ ಪಕ್ವಾನ್ನಪರಿಪೂರಿತೈಃ ॥ ೨೭ ॥**

**ಸಮರ್ಪ್ಯ ದೇವ್ಯೈ ನೈವೇದ್ಯಂ ದ್ವಿಜೇಷ್ವೇತನ್ನಿವೇದಯೇತ್ ।**
**ವಾಯನಂ ಚ ತತಃ ಪಶ್ಚಾತ್ ದದ್ಯಾತ್ಸಂಬಂಧಿಬಂಧುಷು ॥ ೨೮ ॥**

---

ಈಶ್ವರಸಹಿತಳಾದ ಭವಾನೀದೇವಿಯನ್ನು ಪ್ರಾರ್ಥಿಸಿ ವ್ರತವು ಸಂಪೂರ್ಣವಾಗಬೇಕೆಂದು ವಾಯನದಾನಮಾಡಬೇಕು. ಈ ರೀತಿ ಹನ್ನೆರಡು ವರ್ಷಗಳು ನಾರಿಯು ಶುಭವ್ರತವನ್ನಾಚರಿಸಬೇಕು.

೨೫-೨೭. ತರುವಾಯ ಧನಲೋಭವನ್ನು ಬಿಟ್ಟು ಉದ್ಯಾಪನೆಮಾಡಬೇಕು. ಪರಿಶುದ್ಧಮಂಡಲದಲ್ಲಿ ಮಂಟಪವನ್ನು ಸ್ಥಾಪಿಸಿ ಅದರಲ್ಲಿ ಗಣೇಶಾದಿ ದೇವಪೂಜೆಯನ್ನು ಮಾಡಿ ತಾಮ್ರದ ಕಲಶಪಾತ್ರೆಯನ್ನಿಟ್ಟು ಅದರಲ್ಲಿ ಬಂಗಾರದ ಭವಾನೀಪ್ರತಿಮೆಯನ್ನು ಸ್ಥಾಪನೆಮಾಡಿ ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಅನಂತರ ಹೋಮಮಾಡಬೇಕು. ಬಳಿಕ ಪಕ್ವಾನ್ನಗಳನ್ನು ಹದಿನಾರು ವೇಣುಪಾತ್ರೆಗಳಲ್ಲಿ ತುಂಬಿ ನೈವೇದ್ಯಮಾಡಬೇಕು.

೨೮-೨೯. ಆಮೇಲೆ ಅದನ್ನು ಬ್ರಾಹ್ಮಣರಿಗರ್ಪಿಸಬೇಕು. ಅನಂತರ ಸಂಬಂಧಿಗಳಾದ ಬಂಧುಗಳಿಗೆ ವಾಯನದಾನಮಾಡಬೇಕು. ಪ್ರತಿಮೆಯನ್ನು

ಪ್ರತಿಮಾಂ ಗುರವೇ ದತ್ವಾ ದ್ವಿಜೇಭ್ಯೋ ದಕ್ಷಿಣಾಂ ತಥಾ |
ಪೂರ್ಣಂ ಲಭೇತ್ಫಲಂ ನಾರೀ ವ್ರತಾಚರಣತತ್ಪರಾ || ೨೯ ||

ಭಾದ್ರಶುಕ್ಲತೃತೀಯಾಯಾಂ ವ್ರತಂ ವೈ ಹಾರಿತಾಲಕಂ |
ಕುರ್ಯಾದ್ಭಕ್ತ್ಯಾ ವಿಧಾನೇನ ಪಾದ್ಯಾರ್ಘ್ಯಾರ್ಚನಪೂರ್ವಕಂ || ೩೦ ||

ತತಸ್ತು ಕಾಂಚನೇ ಪಾತ್ರೇ ರಾಜತೇ ಚಾಪಿ ತಾಮ್ರಕೇ |
ವೈಣವೇ ಮೃನ್ಮಯೇ ವಾಪಿ ವಿನ್ಯಸ್ಯಾನ್ನಂ ಸದಕ್ಷಿಣಂ || ೩೧ ||

ಸಫಲಂ ಚ ಸವಸ್ತ್ರಂ ಚ ದ್ವಿಜಾಯ ಪ್ರತಿಪಾದಯೇತ್ |
ತದಂತೇ ಪಾರಣಂ ಕುರ್ಯಾದಿಷ್ಟಬಂಧುಜನೈಃ ಸಹ || ೩೨ ||

ಏವಂ ಕೃತವ್ರತಾ ನಾರೀ ಭುಕ್ತ್ವಾ ಭೋಗಾನ್ಮನೋರಮಾನ್ |
ವ್ರತಸ್ಯಾಸ್ಯ ಪ್ರಭಾವೇಣ ಗೌರೀಸಹಚರೀ ಭವೇತ್ || ೩೩ ||

ಗುರುಗಳಿಗೂ, ದಕ್ಷಿಣೆಯನ್ನು ಬ್ರಾಹ್ಮಣರಿಗೂ ಕೊಟ್ಟು ವ್ರತಾಚರಣೆನಿರತಳಾದ ನಾರಿಯು ಸಂಪೂರ್ಣಫಲವನ್ನು ಹೊಂದಬೇಕು.

೩೦. ಭಾದ್ರಪದ ಶುಕ್ಲ ತದಿಗೆಯ ದಿನದಲ್ಲಿ ಹರಿತಾಳವ್ರತವನ್ನು ಪಾದ್ಯ, ಅರ್ಘ್ಯ, ಆಚಮನಪೂರ್ವಕವಾಗಿ ವಿಧಾನೋಕ್ತಪ್ರಕಾರ ಭಕ್ತಿಯಿಂದ ಆಚರಿಸಬೇಕು

೩೧-೩೨. ತರುವಾಯ ಬಂಗಾರ ಬೆಳ್ಳಿ, ತಾಮ್ರ, ಬಿದಿರು ಮಣ್ಣು, ಇವುಗಳಲ್ಲಾವುದಾದರೊಂದರಿಂದ ಮಾಡಿದ ಪಾತ್ರೆಯಲ್ಲಿ ಅನ್ನವನ್ನು ತುಂಬಿ ಅದನ್ನು ದಕ್ಷಿಣೆ, ಫಲ, ವಸ್ತ್ರಗಳ ಸಹಿತವಾಗಿ ಬ್ರಾಹ್ಮಣನಿಗೆ ದಾನಮಾಡಬೇಕು. ಅದಾದನಂತರ ಇಷ್ಟಬಂಧುಜನಗಳೊಡನೆ ಪಾರಣೆಯನ್ನು ಮಾಡಬೇಕು.

೩೩. ಈ ರೀತಿ ವ್ರತವನ್ನಾಚರಿಸಿದ ನಾರಿಯು ದಿವ್ಯಭೋಗಗಳನ್ನನುಭವಿಸಿ ಈ ವ್ರತದ ಪ್ರಭಾವದಿಂದ ಗೌರೀಸಹಚರಿಯಾಗುವಳು.

ಸೌಭಾಗ್ಯದ್ರವ್ಯವಸ್ತ್ರಾಣಿ ವಂಶಪಾತ್ರಾಣಿ ಷೋಡಶ |
ದಾತವ್ಯಾನಿ ಪ್ರಯತ್ನೇನ ಬ್ರಾಹ್ಮಣೇಭ್ಯೋ ಯಥಾವಿಧಿ ॥ ೨೪ ॥

ಅನ್ಯೇಭ್ಯೋ ವಿಪ್ರವರ್ಯೇಭ್ಯೋ ದಕ್ಷಿಣಾಂ ಚ ಪ್ರಯತ್ನತಃ |
ಭೂಯಸೀಂ ಚ ತತೋ ದದ್ಯಾದ್ವಿಪ್ರೇಭ್ಯೋ ದೇವಿತುಷ್ಟಯೇ ॥ ೨೫ ॥

ಏವಂ ಯಾ ಕುರುತೇ ನಾರೀ ವ್ರತಂ ಸೌಭಾಗ್ಯವರ್ಧನಂ |
ಸಾ ತು ದೇವೀಪ್ರಸಾದೇನ ಸೌಭಾಗ್ಯಂ ಲಭತೇ ಧ್ರುವಂ ॥ ೨೬ ॥

ಯದಾ ತೃತೀಯಾ ಭಾದ್ರೇ ತು ಹಸ್ತರ್ಕ್ಷಸಹಿತಾ ಭವೇತ್ |
ಹಸ್ತಗೌರೀವ್ರತಂ ನಾಮ ತದುದ್ದಿಷ್ಟಂ ಹಿ ಶೌರಿಣಾ ॥ ೨೭ ॥

ತಥಾ ಕೋಟೀಶ್ವರೀ ನಾಮ ವ್ರತಂ ಪ್ರೋಕ್ತಂ ಪಿನಾಕಿನಾ |
ಲಕ್ಷೇಶ್ವರೀ ಚೈವ ತಥಾ ತದ್ವಿಧಾನಮುದೀರ್ಯತೇ ॥ ೨೮ ॥

---

೨೪. ಸೌಭಾಗ್ಯ, ದ್ರವ್ಯ, ವಸ್ತ್ರ, ಹದಿನಾರು ಬಿದಿರಿನ ಪಾತ್ರೆಗಳು ಇವನ್ನು ವಿಧ್ಯುಕ್ತಪ್ರಕಾರ ಪ್ರಯತ್ನಪೂರ್ವಕವಾಗಿ ಬ್ರಾಹ್ಮಣರಿಗೆ ದಾನ ಮಾಡಬೇಕು

೨೫. ಇತರ ಬ್ರಾಹ್ಮಣವರ್ಯರಿಗೂ ಸಹ ದೇವಿಯ ಪ್ರೀತ್ಯರ್ಥವಾಗಿ ಹೇರಳವಾಗಿ ದಕ್ಷಿಣೆಯನ್ನು ಕೊಡಬೇಕು

೨೬. ಈ ರೀತಿ ಸೌಭಾಗ್ಯಾಭಿವೃದ್ಧಿಕರ ವ್ರತವನ್ನಾಚರಿಸಿದ ನಾರಿಯು ದೇವಿಯ ಪ್ರಸಾದದಿಂದ ಖಂಡಿತವಾಗಿಯೂ ಸೌಭಾಗ್ಯವನ್ನು ಹೊಂದುವಳು.

೨೭. ಹಸ್ತಾನಕ್ಷತ್ರಯುಕ್ತವಾದ ಭಾದ್ರಪದ ಶುಕ್ಲ ತದಿಗೆಯ ದಿನದಲ್ಲಿ ಹಸ್ತಗೌರೀವ್ರತವು ಕೃಷ್ಣನಿಂದ ಉಕ್ತವಾಗಿದೆ.

೨೮. ಹಾಗೆಯೇ ಆ ದಿನದಲ್ಲಿ ಕೋಟೀಶ್ವರೀ ಮತ್ತು ಲಕ್ಷೇಶ್ವರೀ ಎಂಬ ವ್ರತಗಳು ಪಿನಾಕಿಯಿಂದ ಉಪದಿಷ್ಟವಾಗಿವೆ. ಅವುಗಳ ವಿಧಾನವನ್ನು ಹೇಳುವೆನು.

ಅಸ್ಯಾಂ ವ್ರತಂ ತು ಸಂಗ್ರಾಹ್ಯಂ ಯಾವದ್ವರ್ಷಚತುಷ್ಟಯಂ ।
ಉಪವಾಸೇನ ಕರ್ತವ್ಯಂ ವರ್ಷೇ ವರ್ಷೇ ತು ನಾರದ ॥ ೩೯ ॥

ಅಖಂಡಾನಾಂ ತಂಡುಲಾನಾಂ ತಿಲಾನಾಂ ವಾ ಮುನೀಶ್ವರ ।
ಲಕ್ಷಮೇಕಂ ವಿಶೋಧ್ಯಾಥ ಕ್ಷಿಪೇತ್ಪಾತ್ರೇ ಸುಸಂಸ್ಕೃತೇ ॥ ೪೦ ॥

ತತ್ಪಕ್ವೇನ ತು ನಿರ್ಮಾಯ ದೇವ್ಯಾ ಮೂರ್ತಿಂ ಸುಶೋಭನಾಂ ।
ಪ್ರಕರೇ ಗಂಧಪುಷ್ಪಾಣಾಂ ಪುಷ್ಪಮಾಲಾವಿಭೂಷಿತಾಂ ॥ ೪೧ ॥

ಸಂಸ್ಥಾಪ್ಯ ಪಾರ್ವತೀಂ ತತ್ರ ಪೂಜಯೇದ್ಭಕ್ತಿಭಾವಿತಃ ।
ಗಂಧೈಃ ಪುಷ್ಪೈಸ್ತಥಾಧೂಪೈರ್ದೀಪೈರ್ನೈವೇದ್ಯವಿಸ್ತರೈಃ ॥ ೪೨ ॥

ವಿವಿಧೈಶ್ಚ ಫಲೈರ್ವಿಪ್ರ ನಮಸ್ಕೃತ್ಯ ಕ್ಷಮಾಪಯೇತ್ ।
ತತೋ ವಿಸರ್ಜಯೇದ್ದೇವೀಂ ಜಲಮಧ್ಯೇಥ ದಕ್ಷಿಣಾಂ ॥ ೪೩ ॥

---

೩೯. ನಾರದನೇ, ಈ ತಿಥಿಯಲ್ಲಿ ನಾಲ್ಕು ವರ್ಷಗಳ ಕಾಲ ಈ ವ್ರತವನ್ನು ಅನುಷ್ಠಾನಮಾಡಬೇಕು. ಪ್ರತಿವರ್ಷದಲ್ಲಿಯೂ ಆ ದಿನ ಉಪವಾಸದಿಂದ ವ್ರತಾಚರಣೆಮಾಡಬೇಕು.

೪೦-೪೪. ಮುನೀಶ್ವರನೇ ! ಒಂದು ಲಕ್ಷ ಅಕ್ಕಿ, ಅಥವಾ ಎಳ್ಳನ್ನು ಚೆನ್ನಾಗಿ ಆರಿಸಿ, ಸಂಸ್ಕೃತ ಲೋಹಮಯ ಪಾತ್ರೆಯಲ್ಲಿ ಪಕ್ವಮಾಡಿ ಅದರಿಂದ ಅತ್ಯಂತ ಶೋಭನವಾದ ದೇವೀಮೂರ್ತಿಯನ್ನು ರಚಿಸಿ ಗಂಧಪುಷ್ಪಗಳ ರಾಶಿಯ ಮೇಲೆ ಸ್ಥಾಪಿಸಿ ಹೂವಿನ ಮಾಲಿಕೆಯನ್ನು ಹಾಕಿ ಆ ಪ್ರತಿಮೆಯಲ್ಲಿ ಭಕ್ತಿಭಾವವುಳ್ಳವನಾಗಿ ಪಾರ್ವತಿಯನ್ನು ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಬಳಿಕ ಧೂಪ, ದೀಪ, ನಾನಾವಿಧ ಫಲಗಳ ನೈವೇದ್ಯವನ್ನರ್ಪಿಸಿ, ನಮಸ್ಕಾರಮಾಡಿ ಕ್ಷಮಾಪಣೆಬೇಡಬೇಕು. ತರುವಾಯ ದೇವಿಯ ಮೂರ್ತಿಯನ್ನು ನೀರಿನ ಮಧ್ಯದಲ್ಲಿ ವಿಸರ್ಜನೆಮಾಡಬೇಕು. ಅನಂತರ ವಿಧಿಜ್ಞರಾದ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಪರದಿನಲ್ಲಿ ಅವರಿಗೆ ಭೋಜನಮಾಡಿಸಬೇಕು.

ದತ್ವಾ ವಿಧಿಜ್ಞವಿಪ್ರೇಭ್ಯೋ ಭುಂಜೀಯಾಚ್ಚ ಪರೇ ದಿನೇ |
ಇತಿ ತೇ ಕಥಿತಂ ವಿಪ್ರ ಕೋಟಿಲಕ್ಷೇಶ್ವರೀವ್ರತಂ || ೪೪ ||

ಗೌರೀಲೋಕಂ ಪ್ರಯಾತ್ಯಂತೇ ವ್ರತಸ್ಯಾಸ್ಯ ಪ್ರಭಾವತಃ |
ಇಷಶುಕ್ಲತೃತೀಯಾಯಾಂ ಬೃಹದ್ಗೌರೀವ್ರತಂ ಚರೇತ್ || ೪೫ ||

ಪಂಚವರ್ಷಂ ವಿಧಾನೇನ ಪೂರ್ವೋಕ್ತೇನೈವ ನಾರದ |
ಆಚಾರ್ಯಂ ಪೂಜಯೇದಂತೇ ವಿಪ್ರಾನನ್ಯಾನ್ ಧನಾದಿಭಿಃ || ೪೬ ||

ಸುವಾಸಿನೀಃ ಪಂಚ ಪೂಜ್ಯಾ ವಸ್ತ್ರಾಲಂಕಾರಚಂದನೈಃ |
ಕಂಚುಕೈಶ್ಚೈವ ತಾಟಂಕೈಃ ಕಂಠಸೂತ್ರೈರ್ಹರಿಪ್ರಿಯಾಃ || ೪೭ ||

ವಂಶಪಾತ್ರಾಣಿ ಪಂಚೈವ ಸೂತ್ರೈಃ ಸಂವೇಷ್ಟಿತಾನಿ ಚ |
ಸಿಂದೂರಂ ಜೀರಕಂ ಚೈವ ಸೌಭಾಗ್ಯದ್ರವ್ಯಸಂಯುತಂ || ೪೮ ||

---

ನಾರದನೇ ! ಈ ರೀತಿಯಾಗಿ ಕೋಟಿಲಕ್ಷೇಶ್ವರೀವ್ರತವಿಧಾನವನ್ನು ನಿನಗೆ ಹೇಳಿರುವೆನು

೪೫-೪೬ ಈ ವ್ರತವನ್ನಾಚರಿಸುವವಳು ಈ ವ್ರತದ ಪ್ರಭಾವದಿಂದ ಕೊನೆಯಲ್ಲಿ ಗೌರೀಲೋಕವನ್ನು ಸೇರುವಳು.

ಅಶ್ವಯುಜ ಶುಕ್ಲ ತದಿಗೆಯ ಧಿನದಲ್ಲಿ ಹಿಂದೆ ಹೇಳಿದ ವಿಧಾನದಿಂದಲೇ ಬೃಹದ್ಗೌರೀವ್ರತವನ್ನು ಐದು ವರ್ಷ ಆಚರಿಸಬೇಕು. ಕೊನೆಯಲ್ಲಿ ಆಚಾರ್ಯರನ್ನೂ ಇತರ ಬ್ರಾಹ್ಮಣರನ್ನೂ ಸಹ ಧನಾದಿಗಳಿಂದ ಪೂಜಿಸಬೇಕು-

೪೭-೪೯. ಹರಿಭಕ್ತರಾದ ಐದು ಜನ ಮುತ್ತೈದೆಯರಿಗೆ ವಸ್ತ್ರ, ಆಭರಣ, ಗಂಧ, ಕುಪ್ಪಸ, ಕರ್ಣಾಭರಣ, ಮಾಂಗಲ್ಯ ಇವುಗಳನ್ನು ಕೊಟ್ಟು ಅವರನ್ನು ಪೂಜಿಸಬೇಕು.

ಗೋಧೂಮಪಿಷ್ಟಜಾತಂ ಚ ನವಾಪೂಪಂ ಫಲಾದಿಕಂ |
ವಾಯನಾನಿ ಚ ಪಂಚೈವ ತಾಭ್ಯೋ ದದ್ಯಾಚ್ಚ ಭೋಜಯೇತ್ || ೪೯ ||

ಅರ್ಘ್ಯಂ ದತ್ವಾ ವಾಯನಾನಿ ಪಶ್ಚಾದ್ಭುಂಜೀತ ವಾಗ್ಯತಾ |
ತತ್ಫಲಂ ಧಾರಯೇತ್ಕಂಠೇ ಸರ್ವಕಾಮಸಮೃದ್ಧಯೇ || ೫೦ ||

ತತಃ ಪ್ರಾತಃ ಸಮುತ್ಥಾಯ ಸಾಲಂಕಾರಾ ಸಖೀಜನೈಃ |
ಗೀತವಾದ್ಯಯುತಾ ನದ್ಯಾಂ ಗೌರೀಂ ತಾಂ ತು ವಿಸರ್ಜಯೇತ್ || ೫೧ ||

ಆಹೂತಾಸಿ ಯಥಾ ಭದ್ರೇ ಪೂಜಿತಾ ಚ ಯಥಾವಿಧಿ |
ಮಮ ಸೌಭಾಗ್ಯದಾನಾಯ ಯಥೇಷ್ಟಂ ಗಮ್ಯತಾಂ ತ್ವಯಾ || ೫೨ ||

---

ಬಳಿಕ ಸಿಂದೂರ, ಜೀರಿಗೆ, ಸೌಭಾಗ್ಯ ದ್ರವ್ಯ, ಗೋಧಿಹಿಟ್ಟು, ನವಾಪೂಪ ಮತ್ತು ಹಣ್ಣುಮುಂತಾದುವುಗಳ ಸಹಿತವಾಗಿ ಐದು ಮರದಬಾಗಿನಗಳನ್ನು ದಾರದಿಂದ ಸುತ್ತಿ ಆ ಮುತ್ತೈದೆಯರಿಗೆ ಕೊಟ್ಟು ಭೋಜನವಮಾಡಿಸಬೇಕು.

೫೦. ಹೀಗೆ ವಾಯನಗಳನ್ನು ಕೊಟ್ಟನಂತರ ವಾಙ್ನಿಯಮಯುಕ್ತಳಾಗಿ ತಾನು ಊಟಮಾಡಬೇಕು. ಸಕಲ ಇಷ್ಟಾರ್ಥಸಮೃದ್ಧಿಗಾಗಿ ಅದನ್ನು ಕಂಠದಲ್ಲಿ ಧಾರಣೆಮಾಡಬೇಕು.

೫೧. ಬಳಿಕ ಬೆಳಗ್ಗೆ ಎದ್ದು ಅಲಂಕಾರಮಾಡಿಕೊಂಡು ಸಖೀಜನರಿಂದ ಸಹಿತಳಾಗಿ ಗಾನವಾದ್ಯಗಳಸಹಿತ ನದಿಗೆ ಹೋಗಿ ಅಲ್ಲಿ ಆ ಗೌರಿಯನ್ನು ವಿಸರ್ಜನೆಮಾಡಬೇಕು.

೫೨. ಮಂಗಳಕರ ದೇವಿಯೇ! ನನಗೆ ಸೌಭಾಗ್ಯವನ್ನು ಅನುಗ್ರಹಿಸುವುದಕ್ಕಾಗಿ ಆಹ್ವಾನಿಸಲ್ಪಟ್ಟು ವಿಧಾನೋಕ್ತಪ್ರಕಾರ ಪೂಜಿಸಲ್ಪಟ್ಟಿರುವೆ. ಇನ್ನು ನೀನು ಯಥೇಷ್ಟವಾಗಿ ದಯಮಾಡಿಸಬಹುದು ಎಂದು ಪ್ರಾರ್ಥಿಸಬೇಕು.

ಏವಂ ವೃತ್ವಾ ವ್ರತಂ ಭಕ್ತ್ಯಾ ದ್ವಿಜ ದೇವೀಪ್ರಸಾದತಃ ।
ಭುಕ್ತ್ವಾ ಭೋಗಾಂಸ್ತು ದೇಹಾಂತೇ ಗೌರೀಲೋಕಮವಾಪ್ನುಯಾತ್ ॥

ಊರ್ಜಶುಕ್ಲತೃತೀಯಾಯಾಂ ವಿಷ್ಣುಗೌರೀವ್ರತಂ ಚರೇತ್ ।
ಪೂಜಯಿತ್ವಾ ಜಗದ್ವಂದ್ಯಾಂ ಉಪಚಾರೈಃ ಪೃಥಗ್ವಿಧೈಃ ॥ ೫೪ ॥

ಸುವಾಸಿನೀಂ ಭೋಜಯಿತ್ವಾ ಮಂಗಲದ್ರವ್ಯಪೂಜಿತಾಂ ।
ವಿಸರ್ಜಯೇತ್ಪ್ರಣಮ್ಯೈನಾಂ ವಿಷ್ಣುಗೌರೀಪ್ರತುಷ್ಟಯೇ ॥ ೫೫ ॥

ಮಾರ್ಗಶುಕ್ಲತೃತೀಯಾಯಾಂ ಹರಗೌರೀವ್ರತಂ ಶುಭಂ ।
ಕೃತ್ವಾ ಪೂರ್ವವಿಧಾನೇನ ಪೂಜಯೇಜ್ಜಗದಂಬಿಕಾಂ ॥ ೫೬ ॥

ಏತದ್ವ್ರತಪ್ರಭಾವೇಣ ಭುಕ್ತ್ವಾ ಭೋಗಾನ್ಮನೋರಮಾನ್ ।
ದೇವೀಲೋಕಂ ಸಮಾಸಾದ್ಯ ಮೋದತೇ ಚ ತಯಾ ಸಹ ॥ ೫೭ ॥

---

೫೩. ದ್ವಿಜನೇ! ಈ ರೀತಿ ಭಕ್ತಿಯಿಂದ ವ್ರತವನ್ನಾಚರಿಸುವವಳು ಭೋಗಗಳನ್ನನುಭವಿಸಿ ಕೊನೆಗೆ ದೇವಿಯ ಅನುಗ್ರಹದಿಂದ ಗೌರಿಯ ಲೋಕವನ್ನು ಹೊಂದುವಳು.

೫೪-೫೫. ಕಾರ್ತಿಕ ಶುಕ್ಲ ತದಿಗೆಯ ದಿನದಲ್ಲಿ ವಿಷ್ಣುಗೌರೀವ್ರತವನ್ನಾಚರಿಸಬೇಕು. ಜಗದ್ವಂದ್ಯಳಾದ ದೇವಿಯನ್ನು ನಾನಾ ವಿಧೋಪಚಾರಗಳಿಂದ ಪೂಜಿಸಿ, ಮುತ್ತೈದೆಯನ್ನು ಮಂಗಳದ್ರವ್ಯಗಳಿಂದ ಸತ್ಕರಿಸಿ, ಭೋಜನಮಾಡಿಸಿ ವಿಷ್ಣುಗೌರೀದೇವಿಯ ಪ್ರೀತ್ಯರ್ಥವಾಗಿ ಮುತ್ತೈದೆಗೆ ನಮಸ್ಕಾರಮಾಡಿ ಗೌರಿಯನ್ನು ವಿಸರ್ಜನೆಮಾಡಬೇಕು-

೫೬. ಮಾರ್ಗಶೀರ್ಷ ಶುಕ್ಲ ತದಿಗೆಯ ದಿನದಲ್ಲಿ ಶುಭವಾದ ಹರಗೌರೀವ್ರತವನ್ನು ಪೂರ್ವೋಕ್ತ ವಿಧಾನದಿಂದ ಮಾಡಿ ಜಗದಂಬಿಕೆಯನ್ನು ಪೂಜಿಸಬೇಕು

೫೭. ಈ ವ್ರತಪ್ರಭಾವದಿಂದ ಮನೋಹರಭೋಗಗಳನ್ನು ಅನುಭವಿಸಿ ನಂತರ ದೇವೀಲೋಕಕ್ಕೆ ಹೋಗಿ ಆ ದೇವಿಯೊಡನೆ ಸುಖಭಾಗಿನಿಯಾಗುವಳು.

ಪೌಷಶುಕ್ಲತೃತೀಯಾಯಾಂ ಬ್ರಹ್ಮಗೌರೀವ್ರತಂ ಚರೇತ್ ।
ಪೂರ್ವೋಕ್ತೇನ ವಿಧಾನೇನ ಪೂಜಿತಾಪಿ ದ್ವಿಜೋತ್ತಮ ॥ ೫೮ ॥

ಬ್ರಹ್ಮಗೌರೀ ಪ್ರಸಾದೇನ ಮೋದತೇ ತತ್ರ ಸಂಗತಾ ।
ಮಾಘಶುಕ್ಲತೃತೀಯಾಯಾಂ ಪೂಜ್ಯಾ ಸೌಭಾಗ್ಯಸುಂದರೀ ॥ ೫೯ ॥

ಪೂರ್ವೋಕ್ತೇನ ವಿಧಾನೇನ ನಾರಿಕೇಲಾರ್ಘ್ಯದಾನತಃ ।
ಪ್ರಸನ್ನಾ ದಿಶತಿ ಸ್ವೀಯಂ ಲೋಕಂ ತು ವ್ರತತೋಷಿತಾ ॥ ೬೦ ॥

ಫಾಲ್ಗುನಸ್ಯ ಸಿತೇ ಪಕ್ಷೇ ತೃತೀಯಾ ಕುಲಸೌಖ್ಯದಾ ।
ಪೂಜಿತಾ ಗಂಧಪುಷ್ಪಾದ್ಯೈಃ ಸರ್ವಮಂಗಲದಾ ಭವೇತ್ ॥ ೬೧ ॥

ಸರ್ವಾಸು ಚ ತೃತೀಯಾಸು ವಿಧಿಃ ಸಾಧಾರಣೋ ಮುನೇ ।
ದೇವೀಪೂಜಾ ವಿಪ್ರಪೂಜಾ ದಾನಂ ಹೋಮೋ ವಿಸರ್ಜನಂ ॥ ೬೨ ॥

---

೫೮-೬೦. ಪುಷ್ಯ ಶುಕ್ಲ ತದಿಗೆಯ ದಿನದಲ್ಲಿ ಪೂರ್ವೋಕ್ತ ವಿಧಾನದಿಂದ ಬ್ರಹ್ಮಗೌರಿಯನ್ನು ಪೂಜಿಸಿ ವ್ರತವನ್ನಾಚರಿಸಬೇಕು. ದ್ವಿಜಶ್ರೇಷ್ಠನೇ! ಹಾಗೆ ವ್ರತಮಾಡಿದರೆ ಬ್ರಹ್ಮಗೌರೀಪ್ರಸಾದದಿಂದ ಆಕೆಯೊಡನೆ ಸುಖಭಾಗಿನಿಯಾಗುವಳು.

ಮಾಘ ಶುಕ್ಲ ತದಿಗೆಯ ದಿನದಲ್ಲಿ ಸೌಭಾಗ್ಯಸುಂದರಿಯನ್ನು ಪೂರ್ವೋಕ್ತ ವಿಧಾನದಿಂದ ಪೂಜಿಸಿ, ಎಳನೀರಿನಿಂದ ಅರ್ಘ್ಯಯನ್ನು ಕೊಡಬೇಕು. ಆ ವ್ರತದಿಂದ ಸಂತುಷ್ಟಳಾದ ದೇವಿಯು ಪೂಜಕರಿಗೆ ಪ್ರಸನ್ನಳಾಗಿ ತನ್ನ ಲೋಕವನ್ನು ಕೊಡುವಳು.

೬೧. ಫಾಲ್ಗುಣಮಾಸದ ಶುಕ್ಲ ತದಿಗೆಯ ದಿನದಲ್ಲಿ ಕುಲಸೌಖ್ಯದಾ ದೇವಿಯನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಿದರೆ ದೇವಿಯು ಸಕಲ ಮಂಗಳಗಳನ್ನೂ ಕೊಡುವಳು.

೬೨. ನಾರದಮುನಿಯೇ! ಸಕಲ ತೃತೀಯಾ ವ್ರತಗಳಲ್ಲಿಯೂ ದೇವೀಪೂಜೆ. ಬ್ರಾಹ್ಮಣಪೂಜೆ, ದಾನ, ಹೋಮ, ವಿಸರ್ಜನೆ ಇವುಗಳು ಕರ್ತವ್ಯಗಳು.

ಇತ್ಯೇವಂ ಕಥಿತಾನೀಹ ತೃತೀಯಾಯಾ ವ್ರತಾನಿ ತೇ ।
ಭಕ್ತ್ಯಾ ಕೃತಾನಿ ಚೇಷ್ಟಾಂಸ್ತು ಕಾಮಾನ್ ದದ್ಯುರ್ಮನೋಗತಾನ್॥ ೬೩ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಚತುರ್ಥಪಾದೇ ದ್ವಾದಶಮಾಸತೃತೀಯಾವ್ರತಕಥನಂ ನಾಮ
ದ್ವಾದಶಾಧಿಕಶತತಮೋಽಧ್ಯಾಯಃ

---

೬೩. ಈ ಪ್ರಕಾರವಾಗಿ ತೃತೀಯಾ ವ್ರತವಿಧಾನಗಳೆಲ್ಲವನ್ನೂ ನಿನಗೆ ಹೇಳಿರುವೆನು. ಇವನ್ನು ಭಕ್ತಿಯಿಂದ ಆಚರಿಸಿದರೆ ಗೌರೀದೇವಿಯು ಮನೋಗತವಾದ ಇಷ್ಟಾರ್ಥಗಳೆಲ್ಲವನ್ನೂ ಕೊಡುವಳು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ
ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳುಗಳ ತದಿಗೆಯ ವ್ರತಕಥನೆ
ಯೆಂಬ ನೂರುಹನ್ನೆರಡನೆಯ ಅಧ್ಯಾಯವು ಮುಗಿದುದು.

## ವಿಷಯಸಂಗ್ರಹ

ಚೈತ್ರಶುಕ್ಲತದಿಗೆಯಿಂದ ಫಾಲ್ಗುಣ ಶುಕ್ಲ ತದಿಗೆಯವರೆಗೂ ಪ್ರತಿಯೊಂದು ತದಿಗೆಯಲ್ಲಿ ಮಾಡಬೇಕಾದ ತೃತೀಯಾವ್ರತ, ಅಲ್ಲಿ ಪೂಜಿಸಬೇಕಾದ ದೇವತೆ, ಪೂಜಾದ್ರವ್ಯ, ದಾನ, ಹೋಮ, ಫಲಗಳು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ.

---

# ತ್ರಯೋದಶಾಧಿಕಶತತಮೋಽಧ್ಯಾಯಃ

**ಸನಾತನ ಉವಾಚ**

**ಶೃಣು ವಿಪ್ರ ಪ್ರವಕ್ಷ್ಯಾಮಿ ಚತುರ್ಥ್ಯಾಸ್ತೇ ವ್ರತಾನ್ಯಹಂ ।**
**ಯಾನಿ ಕೃತ್ವಾ ನರಾ ನಾರ್ಯೋಽಭೀಷ್ಟಾನ್ಕಾಮಾನವಾಪ್ನುಯುಃ ॥ ೧ ॥**

**ಚೈತ್ರಮಾಸಚತುರ್ಥ್ಯಾಂ ತು ವಾಸುದೇವಸ್ವರೂಪಿಣಂ ।**
**ಗಣಪಂ ಸಮ್ಯಗಭ್ಯರ್ಚ್ಯ ದತ್ವಾ ಕಾಂಚನದಕ್ಷಿಣಾಂ ॥ ೨ ॥**

**ವಿಪ್ರಾಯ ವಿಷ್ಣುಲೋಕಂ ತು ಗಚ್ಛೇದೇವ ನಮಸ್ಕೃತಃ ।**
**ವೈಶಾಖಸ್ಯ ಚತುರ್ಥ್ಯಾಂ ತು ಪ್ರಾರ್ಥ್ಯ ಸಂಕರ್ಷಣಾಹ್ವಯಂ ॥ ೩ ॥**

**ಗೃಹಸ್ಥದ್ವಿಜಮುಖ್ಯೇಭ್ಯಃ ಶಂಖಂ ದತ್ವಾ ವಿಧಾನವಿತ್ ।**
**ಪ್ರಾಪ್ಯ ಸಂಕರ್ಷಣಂ ಲೋಕಂ ಮೋದತೇ ಬಹುಕಲ್ಪಕಂ ॥ ೪ ॥**

---

## ನೂರುಹದಿಮೂರನೆಯ ಅಧ್ಯಾಯವು.

೧. ಸನಾತನನು ಹೇಳಿದನು:—ಬ್ರಾಹ್ಮಣನಾದ ನಾರದನೇ ! ಕೇಳು. ಯಾವ ವ್ರತಗಳನ್ನಾಚರಿಸಿ ನರನಾರಿಯರು ಬಯಸಿದ ಅಭೀಷ್ಟಗಳೆಲ್ಲವನ್ನೂ ಹೊಂದಿದರೋ ಅಂತಹ ಚತುರ್ಥೀವ್ರತಗಳನ್ನು ನಿನಗೆ ಹೇಳುವೆನು

೨-೪. ಚೈತ್ರಮಾಸದ ಶುಕ್ಲ ಚೌತಿಯ ದಿನದಲ್ಲಿ ವಾಸುದೇವರೂಪಿಯಾದ ಗಣಪನನ್ನು ಚೆನ್ನಾಗಿ ಪೂಜಿಸಿ, ಸುವರ್ಣದಕ್ಷಿಣೆಯನ್ನು ಬ್ರಾಹ್ಮಣನಿಗೆ ಕೊಟ್ಟರೆ ಅವನು ವಿಷ್ಣುಲೋಕಕ್ಕೆ ಒಯ್ಯಲ್ಪಟ್ಟು, ಅಲ್ಲಿ ಸತ್ಕರಿಸಲ್ಪಡುವನು.

ವೈಶಾಖ ಶುಕ್ಲ ಚೌತಿಯ ದಿನದಲ್ಲಿ ಸಂಕರ್ಷಣನೆಂಬ ದೇವನನ್ನು ಪೂಜಿಸಿ ಗೃಹಸ್ಥದ್ವಿಜರು ಮುಂತಾದವರಿಗೆ ಶಂಖವನ್ನು ದಾನಮಾಡಿದರೆ ಅವನು ಸಂಕರ್ಷಣಲೋಕಕ್ಕೆ ಹೋಗಿ ಬಹು ಕಲ್ಪಗಳಪರ್ಯಂತವಾಗಿ ಸುಖಪಡುವನು.

ಜ್ಯೇಷ್ಠಮಾಸಚತುರ್ಥ್ಯಾಂ ತು ಪ್ರಾರ್ಚ್ಯ ಪ್ರದ್ಯುಮ್ನರೂಪಿಣಂ ।
ಫಲಂ ಮೂಲಂ ಚ ಯೋಧೇಭ್ಯೋ ದತ್ವಾ ಸ್ವರ್ಗಂ ಲಭೇನ್ನರಃ ॥ ೫ ॥

ಆಷಾಢಸ್ಯ ಚತುರ್ಥ್ಯಾಂ ತು ಸಂಪ್ರಪೂಜ್ಯಾನಿರುದ್ಧಕಂ ।
ಯತಿಭ್ಯೋಲಾಬುಪಾತ್ರಾಣಿ ದತ್ವಾಭೀಷ್ಟಂ ಲಭೇನ್ನರಃ ॥ ೬ ॥

ಚತುರ್ಮೂರ್ತಿವ್ರತಾನ್ಯೇವಂ ಕೃತ್ವಾ ದ್ವಾದಶವತ್ಸರಂ ।
ಉದ್ಯಾಪನಂ ವಿಧಾನೇನ ಕರ್ತವ್ಯಂ ಫಲಮಿಚ್ಛತಾ ॥ ೭ ॥

ಅನ್ಯಜ್ಜ್ಯೇಷ್ಠಚತುರ್ಥ್ಯಾಂ ತು ಸತೀವ್ರತಮನುತ್ತಮಂ ।
ಕೃತ್ವಾ ಗಣಪತೇರ್ಮಾತುರ್ಲೋಕೇ ಮೋದೇತ ತತ್ಸಮಂ ॥ ೮ ॥

---

೫. ಜ್ಯೇಷ್ಠಮಾಸದ ಚೌತಿಯ ದಿನದಲ್ಲಿ ಪ್ರದ್ಯುಮ್ನರೂಪಿಯಾದ ದೇವನನ್ನು ಪೂಜಿಸಿ ವಾನಪ್ರಸ್ಥರಿಗೆ ಫಲಮೂಲಗಳನ್ನು ದಾನಮಾಡುವ ಮನುಷ್ಯನು ಸ್ವರ್ಗವನ್ನು ಹೊಂದುವನು.

೬. ಆಷಾಢಮಾಸದ ಚೌತಿಯ ದಿನದಲ್ಲಿ ಅನಿರುದ್ಧನನ್ನು ಪೂಜಿಸಿ, ಯತಿಗಳಿಗೆ ಅಲಾಬು (ಸೋರೆ) ಪಾತ್ರೆಗಳನ್ನು ದಾನಮಾಡುವ ಮನುಷ್ಯನು ಅಭೀಷ್ಟವನ್ನು ಹೊಂದುವನು

೭. ಈ ರೀತಿಯಾಗಿ ವಾಸುದೇವಾದಿ ಚತುರ್ಮೂರ್ತಿವ್ರತವನ್ನು ಹನ್ನೆರಡು ವರ್ಷಗಳು ಮಾಡಿ ಅದರ ಫಲವನ್ನು ಬಯಸುವವನು ವಿಧಾನೋಕ್ತ ರೀತಿಯಾಗಿ ಉದ್ಯಾಪನೆಯನ್ನು ಮಾಡಬೇಕು

೮. ಜ್ಯೇಷ್ಠಮಾಸದ ಚೌತಿಯ ದಿನದಲ್ಲಿ ಶ್ರೇಷ್ಠವಾದ ಸತೀವ್ರತವೆಂಬ ಇನ್ನೊಂದು ವ್ರತವಿದೆ. ಅದನ್ನು ಮಾಡುವವನು ಗಣಪತಿಯ ತಾಯಿಯಾದ ಪಾರ್ವತೀದೇವಿಯ ಲೋಕದಲ್ಲಿ ಆಕೆಯ ಸಾಯುಜ್ಯವನ್ನು ಪಡೆಯುವನು.

ತಥಾಷಾಢಚತುರ್ಥ್ಯಾಂ ತು ವ್ರತಮನ್ಯಚ್ಛುಭಾವಹಂ |
ರಥಂತರಾಖ್ಯಕಲ್ಪಸ್ಯ ಹ್ಯಾದಿಭೂತಂ ದಿನಂ ಹ್ಯತಃ || ೯ ||

ಶ್ರದ್ಧಾಪೂತೇನ ಮನಸಾ ಗಣೇಶಂ ವಿಧಿನಾ ನರಃ |
ಪೂಜಯಿತ್ವಾ ಲಭೇಚ್ಚಾಪಿ ಫಲಂ ದೇವಾದಿದುರ್ಗಮಂ || ೧೦ ||

ಶ್ರಾವಣಸ್ಯ ಚತುರ್ಥ್ಯಾಂ ತು ಜಾತೇ ಚಂದ್ರೋದಯೇ ಮುನೇ || ೧೧ ||

ಗಣೇಶಾಯ ಪ್ರದದ್ಯಾಚ್ಚ ಹ್ಯರ್ಘ್ಯಂ ವಿಧಿವಿದಾಂ ವರಃ |
ಲಂಬೋದರಂ ಚತುರ್ಬಾಹುಂ ತ್ರಿನೇತ್ರಂ ರಕ್ತವರ್ಣಕಂ || ೧೨ ||

ನಾನಾರತ್ನವಿಭೂಷಾಢ್ಯಂ ಪ್ರಸನ್ನಾಸ್ಯಂ ವಿಚಿಂತಯೇತ್ |
ಆವಾಹನಾದಿಭಿಃ ಸರ್ವೈರುಪಚಾರೈಃ ಸಮರ್ಚಯೇತ್ || ೧೩ ||

೯. ಅಂತೆಯೇ ಆಷಾಢ ಚೌತಿಯ ದಿನವು ರಥಂತರ ಕಲ್ಪಾದಿ ತಿಥಿಯಾದ್ದರಿಂದ ಆ ದಿನದಲ್ಲಿ ಮಂಗಳಕರವಾದ ಬೇರೊಂದು ವ್ರತವಿದೆ.

೧೦. ಅದರಲ್ಲಿ ಪರಿಶುದ್ಧವಾದ ಮನಸ್ಸಿನಿಂದ ಗಣೇಶನನ್ನು ವಿಧಿವತ್ತಾಗಿ ಶ್ರದ್ಧೆಯಿಂದ ಪೂಜಿಸುವ ಮನುಷ್ಯನೂ ಸಹ ದೇವಾದಿಗಳಿಗೆ ಹೊಂದಲಶಕ್ಯವಾದ ಫಲವನ್ನು ಪಡೆಯುವನು.

೧೧-೧೩. ಶ್ರಾವಣಮಾಸದ ಚೌತಿಯ ದಿನದಲ್ಲಿ ವಿಧಾನಜ್ಞವರ್ಯನು ಚಂದ್ರೋದಯವಾದಮೇಲೆ ಗಣೇಶನಿಗೆ ಅರ್ಘ್ಯಕೊಡಬೇಕು. ಬಳಿಕ ನಾಲ್ಕು ಬಾಹುಗಳು ಮತ್ತು ಮೂರು ಕಣ್ಣುಗಳೂ ಉಳ್ಳ, ಕೆಂಪುಬಣ್ಣದ, ನಾನಾರತ್ನ ಖಚಿತವಾದ ಆಭರಣಗಳಿಂದ ಯುಕ್ತನಾದ, ಪ್ರಸನ್ನಮುಖನಾದ ಲಂಬೋದರನನ್ನು ಧ್ಯಾನಿಸಿ ಅವನನ್ನು ಆವಾಹನೆ ಮುಂತಾದ ಸಕಲೋಪಚಾರಗಳಿಂದಲೂ ಪೂಜಿಸಬೇಕು.

ನೈವೇದ್ಯಂ ಮೋದಕಂ ದದ್ಯಾದ್ಗಣೇಶಪ್ರೀತಿದಾಯಕಂ ।
ಏವಂ ವ್ರತಂ ವಿಧಾಯಾಥ ಭುಕ್ತ್ವಾ ಮೋದಕಮೇವ ಚ　　॥ ೧೪ ॥

ಸುಖಂ ಸ್ವಪ್ಯಾನ್ನಿಶಾಯಾಂ ತು ಭೂಮಾವೇವಕೃತಾರ್ಚನಃ ।
ವ್ರತಸ್ಯಾಸ್ಯ ಪ್ರಭಾವೇಣ ಕಾಮಾನ್ಮನಸಿ ಚಿಂತಿತಾನ್　　॥ ೧೫ ॥

ಲಬ್ಧ್ವಾ ಲೋಕೇ ಪರಂ ಚಾಪಿ ಗಣೇಶಪದಮಾಪ್ನುಯಾತ್ ।
ನಾನೇನ ಸದೃಶಂ ಚಾನ್ಯದ್ವ್ರತಮಸ್ತಿ ಜಗತ್ರಯೇ　　॥ ೧೬ ॥

ತಸ್ಮಾತ್ಕಾರ್ಯಂ ಪ್ರಯತ್ನೇನ ಸರ್ವಾನ್ಕಾಮಾನಭೀಪ್ಸತಾ ।
ಅಥಾಸ್ಮಿನ್ನೇವ ದಿವಸೇ ದೂರ್ವಾಗಣಪತಿಂ ವ್ರತಂ　　॥ ೧೭ ॥

ಕೇಚಿದಿಚ್ಛಂತಿ ದೇವರ್ಷೇ ತದ್ವಿಧಾನಂ ವದಾಮಿ ತೇ ।
ಹೈಮಂ ನಿರ್ಮಾಯ ಗಣಪಂ ತಾಮ್ರಪಾತ್ರೋಪರಿಸ್ಥಿತಂ　　॥ ೧೮ ॥

---

೧೪-೧೫　ಗಣೇಶನಿಗೆ ಪ್ರೀತಿಕರವಾದ ಮೋದಕವನ್ನು (ಕಡುಬನ್ನು) ನೈವೇದ್ಯಮಾಡಬೇಕು. ಈರೀತಿ ವ್ರತವನ್ನಾಚರಿಸಿದನಂತರ ತಾನು ಮೋದಕವನ್ನೇ ತಿಂದು ರಾತ್ರಿಯಲ್ಲಿ ಪೂಜೆಮಾಡಿದವನಾಗಿ ನೆಲದಮೇಲೆ ಸುಖವಾಗಿ ಮಲಗಬೇಕು. ಈರೀತಿ ಆರಾಧಿಸುವವನು ಈ ವ್ರತ ಪ್ರಭಾವದಿಂದ ಮನಸ್ಸಿನಲ್ಲಿ ನೆನೆಸಿದ ಇಷ್ಟಾರ್ಥಗಳೆಲ್ಲವನ್ನೂ ಪಡೆಯುವನು.

೧೬. ಈ ಲೋಕದಲ್ಲಿ ಭೋಗಪಟ್ಟು ಉತ್ತಮವಾದ ಗಣೇಶಸ್ಥಾನವನ್ನು ಹೊಂದುವನು ಮೂರು ಲೋಕಗಳಲ್ಲಿಯೂ ಇದಕ್ಕೆ ಸಮಾನವಾದ ಬೇರೆ ವ್ರತವಿಲ್ಲ.

೧೭-೨೩. ಆದಕಾರಣ ಸಕಲಾಭೀಷ್ಟಗಳನ್ನು ಬಯಸುವವನು ಪ್ರಯತ್ನಪೂರ್ವಕವಾಗಿ ಈ ವ್ರತವನ್ನು ಮಾಡಬೇಕು.

ಕೆಲವರು ಈದಿನದಲ್ಲಿಯೇ ದೂರ್ವಾಗಣಪತಿವ್ರತವನ್ನಾಚರಿಸಬೇಕೆಂದು ಅಭಿಪ್ರಾಯಪಡುವರು. ದೇವರ್ಷಿಯೇ! ಅದರ ವಿಧಾನವನ್ನು ನಿನಗೆ ಹೇಳುವೆನು.

**ವೇಷ್ಟಿತಂ ರಕ್ತವಸ್ತ್ರೇಣ ಸರ್ವತೋಭದ್ರಮಂಡಲೇ |**
**ಪೂಜಯೇದ್ರಕ್ತಕುಸುಮೈಃ ಪತ್ರಿಕಾಭಿಶ್ಚ ಪಂಚಭಿಃ ॥ ೧೯ ॥**

**ಬಿಲ್ವಪತ್ರಮಪಾಮಾರ್ಗಂ ಶಮೀದೂರ್ವಾಹರಿಪ್ರಿಯಾ |**
**ಆಭಿರನ್ಯೈಶ್ಚ ಕುಸುಮೈರಭ್ಯರ್ಚ್ಯ ಫಲಮೋದಕೈಃ ॥ ೨೦ ॥**

**ಉಪಹಾರಂ ಪ್ರಕಲ್ಪ್ಯಾಥ ದದ್ಯಾದರ್ಘ್ಯಂ ಸಮುದ್ಯತೇ |**
**ತತಃ ಸಂಪ್ರಾರ್ಥ್ಯ ವಿಘ್ನೇಶಮೂರ್ತಿಂ ಸೋಪಸ್ಕರಾಂ ಮುನೇ ॥ ೨೧ ॥**

**ಆಚಾರ್ಯಾಯ ವಿಧಿಜ್ಞಾಯ ಸತ್ಕೃತ್ಯ ವಿನಿವೇದಯೇತ್ |**
**ಕೃತ್ವೈವಂ ಪಂಚ ವರ್ಷಾಣಿ ಸಮುಪಾಸ್ಯ ಯಥಾವಿಧಿ ॥ ೨೨ ॥**

**ಭುಕ್ತ್ವೇಹ ಭೋಗಾನಖಿಲಾನ್ ಲೋಕಂ ಗಣಪತೇರ್ವ್ರಜೇತ್ |**
**ಅಥ ಭಾದ್ರಚತುರ್ಥ್ಯಾಂ ತು ಬಹುಲಾಧೇನುಸಂಜ್ಞಕಂ ॥ ೨೩ ॥**

---

ಬಂಗಾರದಿಂದ ಗಣಪತಿಯ ವಿಗ್ರಹವನ್ನು ಮಾಡಿ ಸರ್ವತೋ ಭದ್ರ ಮಂಡಲದಲ್ಲಿ ತಾಮ್ರದ ಕಲಶವನ್ನಿಟ್ಟು ಅದರಮೇಲೆ ಸುವರ್ಣಗಣಪತಿಯನ್ನು ಸ್ಥಾಪಿಸಿ, ಕೆಂಪುವಸ್ತ್ರವನ್ನು ಹೊದಿಸಿ ರಕ್ತಕುಸುಮಗಳಿಂದಲೂ, ಬಿಲ್ವಪತ್ರೆ, ಉತ್ತರಣಿ, ಬನ್ನಿ, ದೂರ್ವೆ, ಹರಿಪ್ರಿಯಾ ಎಂಬ ಐದು ಪತ್ರೆಗಳಿಂದಲೂ, ಇತರ ಪುಷ್ಪಗಳಿಂದಲೂ ಪೂಜಿಸಬೇಕು. ಬಳಿಕ ಹಣ್ಣು ಮೋದಕಗಳನ್ನು ನೈವೇದ್ಯ ಮಾಡಿ ಅರ್ಘ್ಯವನ್ನರ್ಪಿಸಬೇಕು ತರುವಾಯ ಪ್ರಾರ್ಥನೆಮಾಡಿಕೊಂಡು ಪರಿಕರಸಹಿತವಾಗಿ ಆ ವಿಘ್ನೇಶಮೂರ್ತಿಯನ್ನು ವಿಧಾನಜ್ಞರಾದ ಆಚಾರ್ಯರಿಗೆ ಸತ್ಕಾರಪೂರ್ವಕವಾಗಿ ದಾನಮಾಡಬೇಕು.

ಈಪ್ರಕಾರ ಐದು ವರ್ಷಗಳು ವಿಧಿವತ್ತಾಗಿ ವ್ರತವನ್ನಾಚರಿಸಿದರೆ ಅವನು ಇಲ್ಲಿ ಸಕಲಭೋಗಗಳನ್ನೂ ಅನುಭವಿಸಿ ಗಣಪತಿಲೋಕಕ್ಕೆ ಹೋಗಿ ಸುಖಿಯಾಗುವನು.

ಭಾದ್ರಪದಮಾಸದ ಚೌತಿಯ ದಿನದಲ್ಲಿ ಬಹುಲಾಧೇನುನಾಮಕ ವ್ರತವನ್ನು ಆಚರಿಸಬೇಕು

ಪೂಜನೀಯೋತ್ರ ಯತ್ನೇನ ಸ್ರಗ್ಗಂಧಯವಸಾದಿಭಿಃ |
ತತಃ ಪ್ರದಕ್ಷಿಣೀಕೃತ್ಯ ಶಕ್ತಶ್ಚೇದ್ದಾನಮಾಚರೇತ್ || ೨೪ ||

ಅಶಕ್ತಃ ಪುನರೇತಾಂ ತು ನಮಸ್ಕೃತ್ಯ ವಿಸರ್ಜಯೇತ್ |
ಪಂಚಾಬ್ದಂ ವಾ ದಶಾಬ್ದಂ ವಾ ಷೋಡಶಾಬ್ದಮಥಾಪಿ ವಾ || ೨೫ ||

ವ್ರತಂ ಕೃತ್ವಾ ಸಮುದ್ಯಾಪ್ಯ ಧೇನುಂ ದದ್ಯಾತ್ಪಯಸ್ವಿನೀಂ |
ಪ್ರಭಾವೇಣ ವ್ರತಸ್ಯಾಸ್ಯ ಭುಕ್ತ್ವಾ ಭೋಗಾನ್ಮನೋರಮಾನ್ || ೨೬ ||

ಸತ್ಕೃತೋ ದೇವತಾವೃಂದೈರ್ಗೋಲೋಕಂ ಸಮವಾಪ್ನುಯಾತ್ |
ಅಥ ಶುಕ್ಲಚತುರ್ಥ್ಯಾಂ ತು ಸಿದ್ಧಿವೈನಾಯಕವ್ರತಂ || ೨೭ ||

ಆವಾಹನಾದಿಭಿಃ ಸರ್ವೈರುಪಚಾರೈಃ ಸಮರ್ಚನಂ |
ಏಕಾಗ್ರಮಾನಸೋ ಭೂತ್ವಾ ಧ್ಯಾಯೇತ್ಸಿದ್ಧಿವಿನಾಯಕಂ || ೨೮ ||

---

೨೪. ಈ ವ್ರತದಲ್ಲಿ ಹಾರ, ಗಂಧ, ಹುಲ್ಲುಗಳಿಂದ ಧೇನುವನ್ನು ಪೂಜಿಸಬೇಕು. ಬಳಿಕ ಪ್ರದಕ್ಷಿಣೆಮಾಡಿ ಅನುಕೂಲವಿದ್ದರೆ ದಾನ ಕೊಡಬೇಕು.

೨೫-೨೭. ದಾನಕೊಡಲು ಅಶಕ್ತನಾದರೆ ಈ ಧೇನುವನ್ನು ನಮಸ್ಕರಿಸಿ ವಿಸರ್ಜಿಸಬೇಕು ಐದುವರ್ಷ ಅಥವಾ ಹತ್ತುವರ್ಷ ಇಲ್ಲವೆ ಹದಿನಾರು ವರ್ಷಗಳು ಈ ವ್ರತಮಾಡಿ ಉದ್ಯಾಪನೆಮಾಡಿ, ಹಾಲು ಕರೆಯುವ ಗೋವನ್ನು ದಾನಮಾಡಬೇಕು. ಈ ವ್ರತಪ್ರಭಾವದಿಂದ ಅವನು ಇಲ್ಲಿ ದಿವ್ಯಭೋಗಗಳನ್ನನುಭವಿಸಿ ದೇವ ಸಮೂಹಗಳಿಂದ ಸತ್ಕರಿಸಲ್ಪಟ್ಟು ಗೋಲೋಕವನ್ನು ಹೊಂದುವನು

ಭಾದ್ರಪದಮಾಸದ ಶುಕ್ಲಪಕ್ಷ ಚೌತಿಯ ದಿನದಲ್ಲಿ ಸಿದ್ಧಿವಿನಾಯಕ ವ್ರತವನ್ನು ಆಚರಿಸಬೇಕು.

೨೮-೨೯. ಆವಾಹನೆ ಮುಂತಾದ ಸಕಲೋಪಚಾರಗಳಿಂದ ಸಿದ್ಧಿವಿನಾಯಕನನ್ನು ಪೂಜಿಸಿ, ಏಕಾಗ್ರಚಿತ್ತನಾಗಿ, ಏಕದಂತನು, ಶೂರ್ಪಕರ್ಣನು,

**ಏಕದಂತಂ ಶೂರ್ಪಕರ್ಣಂ ಗಜವಕ್ತ್ರಂ ಚತುರ್ಭುಜಂ ।**
**ಪಾಶಾಂಕುಶಧರಂ ದೇವಂ ತಪ್ತಕಾಂಚನಸಂನಿಭಂ ॥ ೨೯ ॥**

**ಏಕವಿಂಶತಿಪತ್ರಾಣಿ ಚೈಕವಿಂಶತಿನಾಮಭಿಃ ।**
**ಸಮರ್ಪಯೇದ್ಭಕ್ತಿಯುಕ್ತಸ್ತಾನಿ ನಾಮಾನಿ ವೈ ಶೃಣು ॥ ೩೦ ॥**

**ಸುಮುಖಾಯ ಶಮೀಪತ್ರಂ ಗಣಾಧೀಶಾಯ ಭೃಂಗಜಂ ।**
**ಉಮಾಪುತ್ರಾಯ ಬೈಲ್ವಂ ತು ದುರ್ವಾಂ ಗಜಮುಖಾಯ ಚ ॥ ೩೧ ॥**

**ಲಂಬೋದರಾಯ ಬದರೀಂ ಧತ್ತೂರಂ ಹರಸೂನವೇ ।**
**ಶೂರ್ಪಕರ್ಣಾಯ ತುಲಸೀಂ ವಕ್ರತುಂಡಾಯ ಶಿಂಬಿಜಂ ॥ ೩೨ ॥**

**ಗುಹಾಗ್ರಜಾಯಾಪಾಮಾರ್ಗಮೇಕದಂತಾಯ ಬಾರ್ಹತಂ ।**
**ಹೇರಂಬಾಯ ತು ಸಿಂದೂರಂ ಚತುರ್ಹೋತ್ರೇ ಚ ಪತ್ರಜಂ ॥ ೩೩ ॥**

ಆನೆಯಂತೆ ಮುಖವುಳ್ಳವನು, ನಾಲ್ಕುಭುಜಗಳುಳ್ಳವನು, ಹಸ್ತದಲ್ಲಿ ಪಾಶ, ಅಂಕುಶಗಳನ್ನು ಧರಿಸಿರುವವನು ಮತ್ತು ಕಾಯಿಸಿದ ಬಂಗಾರಕ್ಕೆ ಸಮನಾಗಿ ಹೊಳೆಯುತ್ತಿರುವವನೂ ಆಗಿರುವ ಸಿದ್ಧಿವಿನಾಯಕದೇವನನ್ನು ಧ್ಯಾನಿಸಬೇಕು.

೩೦. ಇಪ್ಪತ್ತೊಂದು ನಾಮಗಳನ್ನು ಹೇಳಿ, ಇಪ್ಪತ್ತೊಂದು ಪತ್ರೆಗಳನ್ನು ಕ್ರಮವಾಗಿ ಭಕ್ತಿಯಿಂದ ವಿನಾಯಕನಿಗೆ ಸಮರ್ಪಿಸಬೇಕು.

೩೧-೩೫. 'ಸುಮುಖಾಯನಮಃ' ಎಂದು ಬನ್ನೀ ಪತ್ರವನ್ನೂ, 'ಗಣಾಧೀಶಾಯನಮಃ' ಎಂದು ಭುಜಂಗ ಪತ್ರವನ್ನೂ, 'ಉಮಾಪುತ್ರಾಯ ನಮಃ' ಎಂದು ಬಿಲ್ವ ಪತ್ರೆಯನ್ನೂ, 'ಗಜಮುಖಾಯನಮಃ' ಎಂದು ಗರಿಕೆಯನ್ನೂ, 'ಲಂಬೋದರಾಯನಮಃ' ಎಂದು ಬದರೀ ಪತ್ರವನ್ನೂ, 'ಹರಸೂನವೇನಮಃ' ಎಂದು ದತ್ತೂರ ಪತ್ರವನ್ನೂ, 'ಶೂರ್ಪಕರ್ಣಾಯನಮಃ' ಎಂದು ತುಲಸೀ ಪತ್ರವನ್ನೂ, 'ವಕ್ರತುಂಡಾಯನಮಃ' ಎಂದು ಶಿಂಬಿಜ

ಸರ್ವೇಶ್ವರಾಯೊಗಸ್ತ್ಯಸ್ಯ ಪತ್ರಂ ಪ್ರೀತಿವಿವರ್ಧನಂ |
ದೂರ್ವಾಯುಗ್ಮಂ ತತೋ ಗೃಹ್ಯ ಗಂಧಪುಷ್ಪಾಕ್ಷತೈರ್ಯುತಂ || ೩೪ ||

ಪೂಜಾಂ ನಿವೇದಯೇದ್ಭಕ್ತಿಯುತೋ ಮೋದಕಪಂಚಕಂ |
ಆಚಮಯ್ಯ ನಮಸ್ಕೃತ್ಯ ಸಂಪ್ರಾರ್ಥ್ಯ ಚ ವಿಸರ್ಜಯೇತ್ || ೩೫ ||

ವಿನಾಯಕಸ್ಯ ಪ್ರತಿಮಾಂ ಹೈಮೀಂ ಸೋಪಸ್ಕರಾಂ ಮುನೇ |
ನಿವೇದಯೇಚ್ಚ ಗುರವೇ ದ್ವಿಜೇಭ್ಯೋ ದಕ್ಷಿಣಾಂ ದದೇತ್ || ೩೬ ||

ಏವಂ ಕೃತಾರ್ಚನೋ ಭಕ್ತ್ಯಾ ಪಂಚವರ್ಷಾಣಿ ನಾರದ |
ಉಪಾಸ್ಯ ಲಭತೇ ಕಾಮಾನ್ಸೈಹಿಕಾಮುಷ್ಮಿಕಾನ್ ಶುಭಾನ್ || ೩೭ ||

---

ಪತ್ರವನ್ನೂ, 'ಗುಹಾಗ್ರಜಾಯನಮಃ' ಎಂದು ಉತ್ತರಣೇ ಪತ್ರವನ್ನೂ, 'ಏಕದಂತಾಯನಮಃ' ಎಂದು ಬೃಹತೀ ಪತ್ರವನ್ನೂ, 'ಹೇರಂಬಾಯನಮಃ' ಎಂದು ಸಿಂದೂರಪತ್ರವನ್ನೂ, 'ಚತುರ್ಹೋತ್ರೇನಮಃ' ಎಂದು ಪತ್ರಜವನ್ನೂ, 'ಸರ್ವೇಶ್ವರಾಯನಮಃ' ಎಂದು ಅಗಸ್ತ್ಯಪತ್ರವನ್ನೂ ಪೂಜಿಸಬೇಕು. ಅನಂತರ ಗಣೇಶನಿಗೆ ಪ್ರಿಯವಾದ ಗರಿಕೆಯನ್ನು ಎರಡೆರಡಾಗಿ ಗಂಧ ಪುಷ್ಪಾಕ್ಷತೆಗಳಸಹಿತ ತೆಗೆದುಕೊಂಡು ಭಕ್ತಿಯಿಂದ ಪೂಜಿಸಬೇಕು ಅನಂತರ ಐದು ಕಡುಬುಗಳನ್ನು ನಿವೇದನ ಮಾಡಿ ಆಚಮನಮಾಡಿ, ನಮಸ್ಕರಿಸಿ, ಪ್ರಾರ್ಥಿಸಿ ವಿಸರ್ಜನೆಮಾಡಬೇಕು.

೩೬. ನಾರದಮುನಿಯೆ! ಬಂಗಾರದ ವಿನಾಯಕ ಪ್ರತಿಮೆಯನ್ನು ಉಪಸ್ಕರಸಹಿತವಾಗಿ ಗುರುಗಳಿಗೆ ದಾನಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು.

೩೭. ಈಪ್ರಕಾರ ಐದುವರ್ಷಗಳು ಭಕ್ತಿಯಿಂದ ಪೂಜೆಮಾಡಿದವನು ಆ ಉಪಾಸನೆಯಿಂದ ಅಭೀಷ್ಟವಾದ ಐಹಿಕಾಮುಷ್ಮಿಕ ಶ್ರೇಯಸ್ಸುಗಳನ್ನು ಪಡೆಯುವನು.

**ಅಸ್ಯಾಂ ಚತುರ್ಥ್ಯಾಂ ಶಶಿನಂ ನ ಪಶ್ಯೇಚ್ಚ ಕದಾಚನ ।**
**ಪಶ್ಯನ್ ಮಿಥ್ಯಾಭಿಶಾಪಂ ತು ಲಭತೇ ನಾತ್ರ ಸಂಶಯಃ**
**ಅಥ ತದ್ದೋಷನಾಶಾಯ ಮಂತ್ರಂ ಪೌರಾಣಿಕಂ ಪಠೇತ್ ॥ ೩೮ ॥**

**ಸಿಂಹಃ ಪ್ರಸೇನಮವಧೀತ್ಸಿಂಹೋ ಜಾಂಬವತಾ ಹತಃ ।**
**ಸುಕುಮಾರಕ ಮಾ ರೋದೀಸ್ತವ ಹ್ಯೇಷ ಸ್ಯಮಂತಕಃ ॥ ೩೯ ॥**

**ಇಷಶುಕ್ಲಚತುರ್ಥ್ಯಾಂ ತು ಕಪರ್ದೀಶಂ ವಿನಾಯಕಂ ॥ ೪೦ ॥**

**ಪೌರುಷೇಣ ತು ಸೂಕ್ತೇನ ಪೂಜಯೇದುಪಚಾರಕೈಃ ।**
**ಅಕಾರಣಾನ್ಮೃಷ್ಟಿಗತಾಂಸ್ತಂಡುಲಾನ್ಸಕಪರ್ದಿಕಾನ್ ॥ ೪೧ ॥**

---

೩೮ ಈ ಚೌತಿಯ ದಿನದಲ್ಲಿ ಚಂದ್ರನನ್ನು ಯಾವಾಗಲೂ ನೋಡಬಾರದು. ಹಾಗೂ ನೋಡಿದವನು ಮಿಥ್ಯಾಪವಾದವನ್ನು ಹೊಂದುವನು. ಸಂದೇಹವಿಲ್ಲ. ಆದಕಾರಣ ಅಂತಹ ಚಂದ್ರದರ್ಶನದೋಷವನ್ನು ಪರಿಹರಿಸಿಕೊಳ್ಳುವುದಕ್ಕೋಸ್ಕರ ಪುರಾಣೋಕ್ತವಾದ ಈ ಮಂತ್ರವನ್ನು ಪಠನೆ ಮಾಡಬೇಕು.

೩೯. ಮಂತ್ರ—
ಸಿಂಹಃ ಪ್ರಸೇನಮವಧೀತ್ಸಿಂಹೋ ಜಾಂಬವತಾ ಹತಃ ।
ಸುಕುಮಾರಕ ಮಾರೋದೀಸ್ತವ ಹ್ಯೇಷ ಸ್ಯಮಂತಕಃ ॥

ಅರ್ಥ—ಸಿಂಹವು ಪ್ರಸೇನನನ್ನು ಕೊಂದಿತು. ಆ ಸಿಂಹವು ಜಾಂಬವಂತನಿಂದ ಸಂಹರಿಸಲ್ಪಟ್ಟಿತು. ಸುಕುಮಾರನೇ! ಅಳಬೇಡ ಈ ಸ್ಯಮಂತಕವನ್ನು ನಿನಗಾಗಿ ಕೊಡುವೆನು.

೪೦–೪೪. ಆಶ್ವಯುಜ ಶುಕ್ಲ ಚೌತಿಯ ದಿನದಲ್ಲಿ ಕಪರ್ದೀಶನಾದ ವಿನಾಯಕನನ್ನು ಪುರುಷಸೂಕ್ತಹೇಳಿ ಆವಾಹನೆ ಮುಂತಾದ ಉಪಚಾರಗಳಿಂದ ಪೂಜಿಸಬೇಕು. ಬಳಿಕ ಬ್ರಾಹ್ಮಣವಟುವನ್ನು ಗಂಧಪುಷ್ಪಾದಿಗಳಿಂದ ಸತ್ಕರಿಸಿ,

ವಿಪ್ರಾಯ ವಟವೇ ದದ್ಯಾದ್ಗಂಧಪುಷ್ಪಾರ್ಚಿತಾಯ ಚ ।
ತಂಡುಲಾ ವೈಶ್ವದೇವತ್ಯಾ ಹರದೇವತ್ಯಮಿಶ್ರಿತಾಃ ॥ ೪೨ ॥

ಕಪರ್ದಿಗಣನಾಥೋಽಸೌ ಪ್ರೀಯತಾಂ ತೈಃ ಸಮರ್ಪಿತೈಃ ।
ಚತುರ್ಥ್ಯಾಂ ಕಾರ್ತಿಕೇ ಕೃಷ್ಣೇ ಕರಕಾಖ್ಯಂ ವ್ರತಂ ಸ್ಮೃತಂ ॥ ೪೩ ॥

ಸ್ತ್ರೀಣಾಮೇವಾಧಿಕಾರೋಽತ್ರ ತದ್ವಿಧಾನಮುದೀರ್ಯತೇ ।
ಪೂಜಯೇಚ್ಚ ಗಣಾಧೀಶಂ ಸ್ನಾತಾ ಸ್ತ್ರೀ ಸಮಲಂಕೃತಾ ॥ ೪೪ ॥

ತದಗ್ರೇ ಪೂರ್ಣಪಕ್ವಾನ್ನಂ ವಿನ್ಯಸೇತ್ಕರಕಾನ್ದಶ ।
ಸಮರ್ಪ್ಯ ದೇವದೇವಾಯ ಭಕ್ತ್ಯಾ ಪ್ರಯತಮಾನಸಾ ॥ ೪೫ ॥

ದೇವೋ ಮೇ ಪ್ರೀಯತಾಮೇವ ಮುಚ್ಚಾರ್ಯಾಥ ಸಮರ್ಪಯೇತ್ ।
ಸುವಾಸಿನೀಭ್ಯೋ ವಿಪ್ರೇಭ್ಯೋ ಯಥಾಕಾಮಂ ಚ ಸಾದರಂ ॥ ೪೬ ॥

---

ಅವನಿಗೆ ಕಪರ್ದಿಕಾಸಹಿತ ತಂಡುಲವನ್ನು ದಾನಮಾಡಬೇಕು "ತಂಡುಲವು ವಿಶ್ವೇದೇವತೆಗಳಿಗೆ ಅಭಿಮನ್ಯಮಾನವಾದುದು. ಅದಕ್ಕೆ ಹರದೇವತಾಕದ್ರವ್ಯವನ್ನು ಮಿಶ್ರಮಾಡಿದೆ ಇಂತಹುದನ್ನು ಸಮರ್ಪಣೆಮಾಡಿದುದರಿಂದ ಈ ಕಪರ್ದಿಗಣನಾಥನು ಸಂತುಷ್ಟನಾಗಲಿ" ಎಂದು ಅನುಸಂಧಾನಮಾಡಬೇಕು.

ಕಾರ್ತಿಕ ಕೃಷ್ಣ ಚೌತಿಯ ದಿನದಲ್ಲಿ ಕರಕವೆಂಬ ವ್ರತವು ಉಕ್ತವಾಗಿದೆ. ಈ ವ್ರತದಲ್ಲಿ ಸ್ತ್ರೀಯರಿಗೇ ಅಧಿಕಾರವು. ಅದರ ವಿಧಾನವನ್ನು ಹೇಳುವೆನು ಸ್ತ್ರೀಯು ಸ್ನಾನಮಾಡಿ ಅಲಂಕಾರ ಮಾಡಿಕೊಂಡು ಗಣಾಧೀಶನನ್ನು ಪೂಜಿಸಬೇಕು.

೪೫-೪೬. ಆ ಗಣೇಶನ ಮುಂದೆ ಪಕ್ವಾನ್ನಪೂರ್ಣವಾದ ಹತ್ತು ಕಲಶಗಳನ್ನು ಇಟ್ಟು ಅದನ್ನು ದೇವದೇವನಾದ ಗಣಪತಿಗೆ ಪ್ರಯತ ಮನಸ್ಕಳಾಗಿ ಭಕ್ತಿಯಿಂದ ಸಮರ್ಪಿಸಿ 'ದೇವನೇ! ಪ್ರೀತನಾಗು' ಎಂದು ಪ್ರಾರ್ಥಿಸಿ ಅನಂತರ ಅದನ್ನು ಮುತ್ತೈದೆಯರು ಮತ್ತು ಬ್ರಾಹ್ಮಣರಿಗೆ ಯಥೇಷ್ಟವಾಗಿ ಆದರದಿಂದ ಕೊಡಬೇಕು.

ತತಶ್ಚಂದ್ರೋದಯೇ ರಾತ್ರೌ ದತ್ವಾಽರ್ಘ್ಯಂ ವಿಧಿಪೂರ್ವಕಂ ।
ಭುಂಜೀತ ಮಿಷ್ಟಮನ್ನಂ ಚ ವ್ರತಸ್ಯ ಪರಿಪೂರ್ತಯೇ ॥ ೪೭ ॥

ಯದ್ವಾ ಕ್ಷೀರೇಣ ಕರಕಂ ಪೂರ್ಣಂ ತೋಯೇನ ವಾ ಮುನೇ ।
ಸಪೂಗಾಕ್ಷತರತ್ನಾಢ್ಯಂ ದ್ವಿಜಾಯ ಪ್ರತಿಪಾದಯೇತ್ ॥ ೪೮ ॥

ಏತತ್ಕೃತ್ವಾ ವ್ರತಂ ನಾರೀ ಷೋಡಶದ್ವಾದಶಾಬ್ದಕಂ ।
ಉದ್ಯಾಪನಂ ವಿಧಾಯಾಥ ವ್ರತಮೇತದ್ವಿಸರ್ಜಯೇತ್ ॥ ೪೯ ॥

ಯಾವಜ್ಜೀವಂ ತು ನಾರ್ಯಾ ಕಾರ್ಯಂ ಸೌಭಾಗ್ಯವಾಂಛಯಾ ।
ವ್ರತೇನಾನೇನ ಸದೃಶಂ ಸ್ತ್ರೀಣಾಂ ಸೌಭಾಗ್ಯದಾಯಕಂ ॥ ೫೦ ॥

ವಿದ್ಯತೇ ಭುವನೇಷ್ವನ್ಯತ್ರಸ್ಮಾನ್ನಿತ್ಯಮಿತಿ ಸ್ಥಿತಿಃ ।
ಊರ್ಜಶುಕ್ಲಚತುರ್ಥ್ಯಾಂ ತು ನಾಗವ್ರತಮುದಾಹೃತಂ ॥ ೫೧ ॥

---

೪೭ ಅನಂತರ ವ್ರತವು ಸಂಪೂರ್ಣವಾಗುವುದಕ್ಕಾಗಿ ರಾತ್ರಿ ಚಂದ್ರೋದಯವಾದಮೇಲೆ ವಿಧಿಪೂರ್ವಕವಾಗಿ ಅರ್ಘ್ಯವನ್ನು ಕೊಟ್ಟು ಮೃಷ್ಟಾನ್ನವನ್ನು ಭೋಜನಮಾಡಬೇಕು.

೪೮. ಅಥವಾ ಹಾಲು ಇಲ್ಲವೆ ನೀರಿನಿಂದ ಪೂರ್ಣವಾದ ಕಲಶವನ್ನು ಅಡಿಕೆ, ಅಕ್ಷತೆ, ರತ್ನಗಳಿಂದ ಸಹಿತವಾಗಿ ದ್ವಿಜನಿಗೆ ದಾನಮಾಡಬೇಕು

೪೯ ನಾರಿಯು ಈ ವ್ರತವನ್ನು ಹದಿನಾರು ಅಥವಾ ಹನ್ನೆರಡು ವರ್ಷಗಳು ಮಾಡಿ ಉದ್ಯಾಪನೆಗೈದು ವ್ರತವನ್ನು ವಿಸರ್ಜನೆ ಮಾಡಬೇಕು.

೫೦-೫೧. ಸೌಭಾಗ್ಯಾಭಿಲಾಷೆಯಿಂದ ಬದುಕಿರುವವರೆಗೂ, ನಾರಿಯು ಈ ವ್ರತವನ್ನಾಚರಿಸಬೇಕು. ಈ ವ್ರತವು ಸ್ತ್ರೀಯರಿಗೆ ಸೌಭಾಗ್ಯದಾಯಕವಾದುದು. ಯಾವ ಲೋಕದಲ್ಲಿಯೂ ಇದಕ್ಕೆ ಸಮಾನವಾದ ಸೌಭಾಗ್ಯಪ್ರದ ವ್ರತವು ಬೇರೆಯಿಲ್ಲವಾದಕಾರಣ ಈ ವ್ರತವೇ ನಿತ್ಯಾನುಷ್ಠೇಯವು.

ಪ್ರಾತರ್ವ್ರತಂ ತು ಸಂಕಲ್ಪ್ಯ ಧೇನುಶೃಂಗಜಲಂ ಶುಚಿ ।
ಪೀತ್ವಾ ಸ್ನಾತ್ವಾಽಥ ಮಧ್ಯಾಹ್ನೇ ಶಂಖಪಾಲಾದಿಪನ್ನಗಾನ್ || ೫೨ ||

ಶೇಷಂ ಚಾಹ್ವಾನಪೂರ್ವೈಸ್ತು ಪೂಜಯೇದುಪಚಾರಕೈಃ ।
ಕ್ಷೀರೇಣಾಪ್ಯಾಯನಂ ಕುರ್ಯಾದೇತನ್ನಾಗವ್ರತಂ ಸ್ಮೃತಂ || ೫೩ ||

ಏವಂ ಕೃತೇ ತು ವಿಪ್ರೇಂದ್ರ ನೃಭಿರ್ನಾಗವ್ರತೇ ಶುಭೇ ।
ವಿಷಾಣಿ ನಶ್ಯಂತ್ಯಚಿರಾನ್ನ ದಶಂತಿ ಚ ಪನ್ನಗಾಃ || ೫೪ ||

ಮಾರ್ಗಶುಕ್ಲಚತುರ್ಥ್ಯಾಂ ತು ವರ್ಷಂ ಯಾವನ್ಮುನೀಶ್ವರಂ ।
ಕ್ಷಪಯೇದೇಕಭುಕ್ತೇನ ನಕ್ತೇನಾಥ ದ್ವಿತೀಯಕಂ || ೫೫ ||

ಅಯಾಚಿತೋಪವಾಸಾಭ್ಯಾಂ ತೃತೀಯಕಚತುರ್ಥಕೇ ।
ಏವಂ ಕ್ರಮೇಣ ವಿಧಿವಚ್ಚ ಕೃತ್ವಾಯ್ದಬ್ದಾನಿ ಮಾನವಃ || ೫೬ ||

---

ಕಾರ್ತಿಕ ಶುಕ್ಲ ಚೌತಿಯ ದಿನದಲ್ಲಿ ನಾಗವ್ರತವು ವಿಹಿತವಾಗಿದೆ. ಪ್ರಾತಃಕಾಲದಲ್ಲಿ ವ್ರತ ಸಂಕಲ್ಪಮಾಡಿ ಶುಚಿಯಾದ ಗೋಶೃಂಗಜಲವನ್ನು ಪಾನಮಾಡಿ ಮಧ್ಯಾಹ್ನದಲ್ಲಿ ಸ್ನಾನಮಾಡಿ ಶಂಖಪಾಲ ಮುಂತಾದ ಪನ್ನಗರು ಮತ್ತು ಶೇಷನನ್ನು ಆಹ್ವಾನಪೂರ್ವಕವಾಗಿ ಉಪಚಾರಗಳಿಂದ ಪೂಜೆಮಾಡಿ ಹಾಲಿನಿಂದ ತೃಪ್ತಿಪಡಿಸಬೇಕು. ಇದೇ ನಾಗವ್ರತವೆಂದು ವಿಹಿತವಾಗಿದೆ.

೫೪. ವಿಪ್ರೇಂದ್ರನೇ ! ಈ ರೀತಿಯಾಗಿ ಶುಭವಾದ ನಾಗವ್ರತಗಳನ್ನು ಮಾಡಿದರೆ ಬೇಗ ವಿಷಗಳು ನಾಶವಾಗುವುವು ಅಂತಹವನನ್ನು ಸರ್ಪಗಳು ಕಚ್ಚುವುದಿಲ್ಲ.

೫೫-೫೭. ಮಾರ್ಗಶೀರ್ಷ ಶುಕ್ಲ ಚೌತಿಯ ದಿನದಲ್ಲಿ ಆರಂಭಿಸಿ ಒಂದು ವರ್ಷದವರೆಗೆ ಒಪ್ಪೊತ್ತೂಟಮಾಡಬೇಕು. ಎರಡನೆಯ ವರ್ಷದಲ್ಲಿ ನಕ್ತಭೋಜನದಿಂದಲೂ, ಮೂರನೆಯ ವರ್ಷದಲ್ಲಿ ಅಮೃತವೃತ್ತಿಯಿಂದಲೂ

ಸಮಾಪ್ಯ ಚ ತತೋಽಸ್ಯಾಂತೇ ವ್ರತಸ್ನಾತೋ ಮಹಾವ್ರತೀ ।
ಕಾರಯೇದ್ಧೇಮಘಟಿತಂ ಭೂತಲೇ ಮೂಷಕಂ ರಥಂ ॥ ೫೭ ॥

ಅಶಕ್ತೋ ವರ್ಣಕೈರೇವ ಶುಭ್ರಂ ಚಾಬ್ಜಂ ಸುಪತ್ರಕಂ ।
ತಸ್ಯೋಪರಿ ಘಟಂ ಸ್ಥಾಪ್ಯ ತಾಮ್ರಪಾತ್ರೇಣ ಸಂಯುತಂ ॥ ೫೮ ॥

ಪೂರಯೇತ್ತಂಡುಲೈಃ ಶುಭ್ರೈಸ್ತಸ್ಯೋಪರಿ ಗಣೇಶ್ವರಂ ।
ನ್ಯಸೇದ್ವಸ್ತ್ರಯುಗಾಚ್ಛನ್ನಂ ಗಂಧಾದ್ಯೈಃ ಪೂಜಯೇಚ್ಚ ತಂ ॥ ೫೯ ॥

ನೈವೇದ್ಯಂ ಮೋದಕಂ ಕಲ್ಪ್ಯಂ ಗಣೇಶಃ ಪ್ರೀಯತಾಮಿತಿ ।
ಜಾಗರೈರ್ಗೀತವಾದ್ಯಾದ್ಯೈಃ ಪುರಾಣಾಖ್ಯಾನಕೈಶ್ಚರೇತ್ ॥ ೬೦ ॥

ಪ್ರಭಾತೇ ವಿಮಲೇ ಸ್ನಾತ್ವಾ ಹೋಮಂ ಕೃತ್ವಾ ವಿಧಾನತಃ ।
ತಿಲವ್ರೀಹಿಯವಶ್ವೇತಸರ್ಷಪಾಜ್ಯೈಃ ಸಖಂಡಕೈಃ ॥ ೬೧ ॥

---

ನಾಲ್ಕನೆಯ ವರ್ಷದಲ್ಲಿ ಉಪವಾಸದಿಂದಲೂ ವರ್ತಿಸಬೇಕು. ಹೀಗೆ ನಾಲ್ಕು ವರ್ಷಗಳು ಕಳೆದನಂತರ ವ್ರತಸ್ನಾತನಾದ ಮಹಾವ್ರತಿಯು ಸುವರ್ಣಕಟ್ಟು ಗಳಿಂದ ಯುಕ್ತವಾದ ಮೂಷಕರಥಗಳನ್ನು ಮಾಡಿಸಬೇಕು.

೫೮-೫೯. ಸುವರ್ಣಾದಿಗಳಿಂದ ರಥಮಾಡಿಸಲಶಕ್ತನಾದವನು ಚಂದನ ಗಳಿಂದಲೇ ದಳಸಹಿತ ನಿರ್ಮಲ ಪದ್ಮವನ್ನು ಮಾಡಿಸಬೇಕು. ಅದರ ಮೇಲೆ ತಾಮ್ರಕಲಶವನ್ನು ಸ್ಥಾಪಿಸಿ ಅದರಲ್ಲಿ ಶುಭ್ರವಾದ ಅಕ್ಕಿಗಳನ್ನು ತುಂಬಿ ಗಣೇಶ ನನ್ನಿಟ್ಟು, ಎರಡು ವಸ್ತ್ರಗಳನ್ನು ಹೊದಿಸಿ ಗಂಧಾದಿಗಳಿಂದ ಆ ಗಣೇಶನನ್ನು ಪೂಜಿಸಬೇಕು.

೬೦. ಗಣೇಶನು ಪ್ರೀತನಾಗಲೆಂಬುದಾಗಿ ಕಡುಬು ನೈವೇದ್ಯವನ್ನು ಕಲ್ಪಿಸಬೇಕು. ಅನಂತರ ಸಂಗೀತ, ವಾದ್ಯ, ಪುರಾಣಪಠನಾದಿಗಳಿಂದ ಜಾಗರಣೆ ಮಾಡಬೇಕು.

೬೧-೬೪. ಬೆಳಗ್ಗೆ ನಿರ್ಮಲೋದಕದಲ್ಲಿ ಸ್ನಾನಮಾಡಿ ಎಳ್ಳು, ಭತ್ತ, ಯವ, ಬಿಳಿಯಸಾಸವೆ, ತುಪ್ಪ, ಸಕ್ಕರೆಗಳಿಂದ ಹೀಗೆ ಹೋಮಮಾಡಬೇಕು.

**ಗಣೋ ಗಣಾಧಿಪಶ್ಚೈವ ಕೂಷ್ಮಾಂಡಸ್ತ್ರಿಪುರಾಂತಕಃ ।**
**ಲಂಬೋದರೈಕದಂತೌ ಚ ರುಕ್ಮದಂಷ್ಟ್ರಶ್ಚ ವಿಘ್ನಪಃ　　|| ೬೨ ||**

**ಬ್ರಹ್ಮಾ ಯಮೋಥ ವರುಣಃ ಸೋಮಸೂರ್ಯ ಹುತಾಶನಾಃ ।**
**ಗಂಧಮಾದೀ ಪರಮೇಷ್ಠೀತ್ಯೇವಂ ಷೋಡಶನಾಮಭಿಃ　　|| ೬೩ ||**

**ಪ್ರಣವಾದ್ಯೈರ್ಜ್ರೇನಮೋಂತ್ರೈಃ ಪ್ರತ್ಯೇಕಂ ದಹನೇ ಹುನೇತ್ ।**
**ವಕ್ರತುಂಡೇತಿ ಜೇಂತೇನ ವರ್ಮಾಂತೇನಾಷ್ಟಯುಕ್‌ಛತಂ　　|| ೬೪ ||**

**ತತೋ ವ್ಯಾಹೃತಿಭಿಃ ಶಕ್ತ್ಯಾ ಹುತ್ವಾ ಪೂರ್ಣಾಹುತಿಂ ಚರೇತ್ ।**
**ದಿಕ್ಪಾಲಾನ್ಪೂಜಯಿತ್ವಾ ಚ ಬ್ರಾಹ್ಮಣಾನ್ಭೋಜಯೇತ್ತತಃ　　|| ೬೫ ||**

**ಚತುರ್ವಿಂಶತಿಸಂಖ್ಯಾಕಾನ್ ಮೋದಕೈಃ ಪಾಯಸೈಸ್ತಥಾ ।**
**ಸವತ್ಸಾಂ ಗಾಂ ತತೋ ದದ್ಯಾದಾಚಾರ್ಯಾಯ ಸದಕ್ಷಿಣಾಂ　　|| ೬೬ ||**

---

"ಓಂ ಗಣಾಯ ನಮಃ, ಓಂ ಗಣಾಧಿಪಾಯ ನಮಃ, ಓಂ ಕೂಷ್ಮಾಂಡಾಯ ನಮಃ, ಓಂ ತ್ರಿಪುರಾಂತಕಾಯ ನಮಃ, ಓಂ ಲಂಬೋದರಾಯ ನಮಃ ಓಂ ಏಕದಂತಾಯ ನಮಃ, ಓಂ ರುಕ್ಮದಂಷ್ಟ್ರಾಯ ನಮಃ, ಓಂ ವಿಘ್ನಪಾಯ ನಮಃ, ಓಂ ಬ್ರಹ್ಮಣೇ ನಮಃ, ಓಂ ಯಮಾಯ ನಮಃ, ಓಂ ವರುಣಾಯ ನಮಃ, ಓಂ ಸೋಮಾಯ ನಮಃ, ಓಂ ಸೂರ್ಯಾಯ ನಮಃ, ಓಂ ಹುತಾಶನಾಯ ನಮಃ, ಓಂ ಗಂಧಮಾದಿನೇ ನಮಃ, ಓಂ ಪರಮೇಷ್ಠಿನೇ ನಮಃ" ಎಂಬುದಾಗಿ ಹದಿನಾರು ನಾಮಗಳಿಂದ ಪ್ರತ್ಯೇಕವಾಗಿ ಅಗ್ನಿಯಲ್ಲಿ ಹೋಮ ಮಾಡಬೇಕು. ಬಳಿಕ 'ವಕ್ರತುಂಡಾಯ ಹುಂ' ಎಂಬ ಮಂತ್ರದಿಂದ ನೂರೆಂಟು ಹೋಮಮಾಡಬೇಕು.

೬೫-೬೭. ತರುವಾಯ ವ್ಯಾಹೃತಿಗಳಿಂದ ತನ್ನ ಶಕ್ತ್ಯನುಸಾರ ಹೋಮ ಮಾಡಿ ಪೂರ್ಣಾಹುತಿಯನ್ನು ಅರ್ಪಿಸಬೇಕು. ಅನಂತರ ಇಂದ್ರಾದಿ ದಿಕ್ಪಾಲಕರನ್ನು ಪೂಜಿಸಿ ಇಪ್ಪತ್ತುನಾಲ್ಕು ಜನ ಬ್ರಾಹ್ಮಣರಿಗೆ ಕಡುಬು ಪಾಯಸ

ಅನ್ಯೇಭ್ಯೋಽಪಿ ಯಥಾಶಕ್ತಿ ಭೂಯಸೀಂ ಚ ತತೋ ದದೇತ್ ।
ಪ್ರಣಮ್ಯ ದಕ್ಷಿಣೀಕೃತ್ಯ ಪ್ರವಿಸೃಜ್ಯ ದ್ವಿಜೋತ್ತಮಾನ್ ॥ ೬೭ ॥

ಬಂಧುಭಿಃ ಸಹ ಭುಂಜೀತ ಸ್ವಯಂ ಚ ಪ್ರೀತಮಾನಸಃ ।
ಏತದ್ವ್ರತಂ ನರಃ ಕೃತ್ವಾ ಭುಕ್ತ್ವಾ ಭೋಗಾನಿಹೋತ್ತಮಾನ್ ॥ ೬೮ ॥

ಸಾಯುಜ್ಯಂ ಲಭತೇ ವಿಷ್ಣೋರ್ಗಣೇಶಸ್ಯ ಪ್ರಸಾದತಃ ।
ಕೇಚಿದ್ವರವ್ರತಂ ನಾಮ ಪ್ರಾಹುರೇತಸ್ಯ ನಾರದ ॥ ೬೯ ॥

ವಿಧಾನಮೇತದೇವಾಪಿ ಫಲಂ ಚಾಪೀಹ ತತ್ಸಮಂ ।
ಪೌಷಮಾಸಚತುರ್ಥ್ಯಾಂ ತು ವಿಘ್ನೇಶಂ ಪ್ರಾರ್ಥ್ಯ ಭಕ್ತಿತಃ ॥ ೭೦ ॥

ವಿಪ್ರೈಕಂ ಭೋಜಯೇಚ್ಚೈವಂ ಮೋದಕೈರ್ದಕ್ಷಿಣಾಂ ದದೇತ್ ।
ಏವಂ ಕೃತೇ ಮುನೇ ಭೂಯಾದ್ವ್ರತೀ ಸಂಪತ್ತಿಭಾಜನಂ ॥ ೭೧ ॥

---

ಗಳನ್ನು ಮಾಡಿ ಭೋಜನಮಾಡಿಸಬೇಕು ಅನಂತರ ಕರುಸಹಿತವಾದ ಗೋವನ್ನು ದಕ್ಷಿಣೆಸಹಿತವಾಗಿ ಆಚಾರ್ಯರಿಗೆ ದಾನಮಾಡಬೇಕು ಇತರ ಬ್ರಾಹ್ಮಣರಿಗೂ ಸಹ ಯಥಾಶಕ್ತಿ ದಕ್ಷಿಣೆಯನ್ನು ಕೊಟ್ಟು ದ್ವಿಜೋತ್ತಮರನ್ನು ಪ್ರದಕ್ಷಿಣೆಮಾಡಿ, ನಮಸ್ಕರಿಸಿ ವಿಸರ್ಜನೆಮಾಡಬೇಕು.

೬೮-೭೧. ತರುವಾಯ ಕರ್ತನು ಸಂತೋಷಚಿತ್ತದಿಂದ ಬಂಧುಗಳೊಡನೆ ಭೋಜನಮಾಡಬೇಕು. ಈ ವ್ರತವನ್ನು ವಿಧಿವತ್ತಾಗಿ ಮಾಡಿದರೆ ಅವನು ಇಲ್ಲಿ ಉತ್ತಮ ಭೋಗಗಳನ್ನು ಅನುಭವಿಸಿ, ಗಣೇಶನ ಅನುಗ್ರಹದಿಂದ ವಿಷ್ಣು ಸಾಯುಜ್ಯವನ್ನು ಹೊಂದುವನು. ನಾರದನೇ ! ಇದಕ್ಕೆ ಕೆಲವರು ವರವ್ರತವೆಂದು ಹೆಸರನ್ನು ಹೇಳುವರು. ಆಚರಿಸುವ ವಿಧಾನ ಮತ್ತು ಫಲಗಳನ್ನು ಇದರಲ್ಲಿಯೂ ಸಮಾನವೆಂದೇ ಹೇಳುವರು.

ಪುಷ್ಯ ಶುಕ್ಲ ಚೌತಿಯ ದಿನದಲ್ಲಿ ಭಕ್ತಿಯಿಂದ ವಿಘ್ನೇಶ್ವರನನ್ನು ಪ್ರಾರ್ಥಿಸಿ ಕಡುಬುಮಾಡಿ ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಿ ದಕ್ಷಿಣೆಯನ್ನು ಕೊಡಬೇಕು. ನಾರದಮುನಿಯೇ ! ಈ ರೀತಿ ಮಾಡಿದರೆ ವ್ರತಕರ್ತನು ಸಂಪತ್ತುಗಳಿಗೆ ಭಾಗಿಯಾಗುವನು,

ಮಾಘಕೃಷ್ಣಚತುರ್ಥ್ಯಾಂ ತು ಸಂಕಷ್ಟವ್ರತಮುಚ್ಯತೇ ।
ತತ್ರೋಪವಾಸಂ ಸಂಕಲ್ಪ್ಯ ವ್ರತೀ ನಿಯಮಪೂರ್ವಕಂ || ೭೨ ||

ಚಂದ್ರೋದಯಮಭಿವ್ಯಾಪ್ಯ ತಿಷ್ಠೇತ್ಪ್ರಯತಮಾನಸಃ ।
ತತಶ್ಚಂದ್ರೋದಯೇ ಪ್ರಾಪ್ತೇ ಮೃನ್ಮಯಂ ಗಣನಾಯಕಂ || ೭೩ ||

ವಿಧಾಯ ವಿನ್ಯಸೇತ್ಪೀಠೇ ಸಾಯುಧಂ ಚ ಸವಾಹನಂ ।
ಉಪಚಾರೈಃ ಷೋಡಶಭಿಃ ಸಮಭ್ಯರ್ಚ್ಯ ವಿಧಾನತಃ || ೭೪ ||

ಮೋದಕಂ ಚಾಪಿ ನೈವೇದ್ಯಂ ಸಗುಡಂ ತಿಲಕುಟ್ಟಕಂ ।
ತತೋಽರ್ಘ್ಯಂ ತಾಮ್ರಜೇ ಪಾತ್ರೇ ರಕ್ತಚಂದನಮಿಶ್ರಿತಂ || ೭೫ ||

ಸಕುಶೇನ ಸದೂರ್ವಂ ಚ ಪುಷ್ಪಾಕ್ಷತಸಮನ್ವಿತಂ ।
ಸಶಮೀಪತ್ರದಧಿ ಚ ಕೃತ್ವಾ ಚಂದ್ರಾಯ ದಾಪಯೇತ್ || ೭೬ ||

---

೭೨-೭೪. ಮಾಘ ಕೃಷ್ಣ ಚೌತಿಯ ದಿನದಲ್ಲಿ ಸಂಕಷ್ಟವ್ರತವು ವಿಹಿತವಾಗಿದೆ. ಆ ವ್ರತದಲ್ಲಿ ಯಜಮಾನನು ಸಂಕಲ್ಪಮಾಡಿ ನಿಯಮಪೂರ್ವಕವಾಗಿ ಚಂದ್ರೋದಯವಾಗುವವರೆಗೂ ನಿಯತಚಿತ್ತನಾಗಿರಬೇಕು. ನಂತರ ಚಂದ್ರೋದಯವಾದಮೇಲೆ ಮಣ್ಣಿನಿಂದ ಗಣೇಶವಿಗ್ರಹವನ್ನು ಮಾಡಿ ಆಯುಧವಾಹನಸಹಿತವಾಗಿ ಪೀಠದಲ್ಲಿ ಸ್ಥಾಪಿಸಿ ಷೋಡಶೋಪಚಾರಗಳಿಂದ ವಿಧಾನೋಕ್ತಪ್ರಕಾರ ಪೂಜಿಸಬೇಕು.

೭೫-೭೭ ಬಳಿಕ ಕಡುಬು ಚಿಗಳಿಗಳ ನೈವೇದ್ಯವನ್ನು ಸಮರ್ಪಿಸಬೇಕು. ತರುವಾಯ ತಾಮ್ರಪಾತ್ರೆಯಲ್ಲಿ ರಕ್ತಚಂದನ, ದರ್ಭೆ ಗರಿಕೆ, ಪುಷ್ಪ, ಅಕ್ಷತೆ, ಬನ್ನಿಪತ್ರೆ, ಮೊಸರು ಇವುಗಳನ್ನು ಮಿಶ್ರಮಾಡಿ ಅರ್ಘ್ಯೆಯನ್ನು ರಚಿಸಿ ಚಂದ್ರನಿಗೆ ಸಮರ್ಪಿಸಬೇಕು ಆಗ “ ಆಕಾಶವೆಂಬ ಸಮುದ್ರದಲ್ಲಿ ಮಾಣಿಕ್ಯ

ಗಗನಾರ್ಣವಮಾಣಿಕ್ಯ ಚಂದ್ರ ದಾಕ್ಷಾಯಣೀಪತೇ ।
ಗೃಹಾಣಾರ್ಘ್ಯಂ ಮಯಾ ದತ್ತಂ ಗಣೇಶಪ್ರತಿರೂಪಕ ॥ ೭೭ ॥

ಏವಂ ದತ್ವಾ ಗಣೇಶಾಯ ದಿವ್ಯಾರ್ಘ್ಯಂ ಪಾಪನಾಶನಂ ।
ಶಕ್ತ್ಯಾ ಸಂಭೋಜ್ಯ ವಿಪ್ರಾಗ್ರ್ಯಾನ್ ಸ್ವಯಂ ಭುಂಜೀತ ಚಾಜ್ಞಯಾ ॥೭೮॥

ಏವಂ ಕೃತ್ವಾ ವ್ರತಂ ವಿಪ್ರ ಸಂಕಷ್ಟಾಖ್ಯಂ ಶುಭಾವಹಂ ।
ಸಮೃದ್ಧೋ ಧನಧಾನ್ಯೈಃ ಸ್ಯಾನ್ನ ಚ ಸಂಕಷ್ಟಮಾಪ್ನುಯಾತ್ ॥ ೭೯ ॥

ಮಾಘಶುಕ್ಲಚತುರ್ಥ್ಯಾಂ ತು ಗೌರೀವ್ರತಮನುತ್ತಮಂ ।
ತಸ್ಯಾಂ ತು ಗೌರೀ ಸಂಪೂಜ್ಯಾ ಸಂಯುಕ್ತಾ ಯೋಗಿನೀಗಣೈಃ ॥ ೮೦ ॥

ನರೈಃ ಸ್ತ್ರೀಭಿರ್ವಿಶೇಷೇಣ ಕುಂದಪುಷ್ಪೈಃ ಸಕುಂಕುಮೈಃ ।
ರಕ್ತಸೂತ್ರೈ ರಕ್ತಪುಷ್ಪೈಸ್ತಥೈವಾಲಕ್ತಕೇನ ಚ ॥ ೮೧ ॥

---

ದಂತಿರುವ ಗಣೇಶಪ್ರತಿರೂಪಕನಾದ ದಾಕ್ಷಾಯಿಣೀಪತಿಯೇ ! ನನ್ನಿಂದರ್ಪಿಸಲ್ಪಟ್ಟ ಅರ್ಘ್ಯೆಯನ್ನು ಸ್ವೀಕರಿಸಬೇಕು " ಎಂದು ಪ್ರಾರ್ಥಿಸಬೇಕು.

೭೮ ಈರೀತಿ ಗಣೇಶನಿಗೆ ದಿವ್ಯಾರ್ಘ್ಯೆಯನ್ನು ಕೊಟ್ಟು ತನ್ನ ಶಕ್ತ್ಯನುಸಾರವಾಗಿ ಬ್ರಾಹ್ಮಣವರ್ಯರಿಗೆ ಭೋಜನಮಾಡಿಸಿ ಅವರ ಅಪ್ಪಣೆಯನ್ನು ಪಡೆದು ತಾನು ಭೋಜನಮಾಡಬೇಕು.

೭೯. ಬ್ರಾಹ್ಮಣನೇ ! ಈ ರೀತಿಯಾಗಿ ಸಂಕಷ್ಟವೆಂಬ ಶುಭಪ್ರದವ್ರತವನ್ನು ಮಾಡಿದರೆ ಧನಧಾನ್ಯಗಳಿಂದ ಪೂರ್ಣನಾಗುವನು. ಕಷ್ಟವನ್ನು ಹೊಂದುವುದಿಲ್ಲ.

೮೦-೮೨. ಮಾಘ ಶುಕ್ಲ ಚೌತಿಯ ದಿನದಲ್ಲಿ ಉತ್ಕೃಷ್ಟವಾದ ಗೌರೀವ್ರತವನ್ನಾಚರಿಸಬೇಕು. ಆ ದಿನದಲ್ಲಿ ಯೋಗಿನೀಗಣಸಹಿತವಾಗಿ ಗೌರಿದೇವಿಯನ್ನು ಪುರುಷರು ವಿಶೇಷವಾಗಿ ಸ್ತ್ರೀಯರು ಕುಂದಪುಷ್ಪ, ಕುಂಕುಮ, ಕೆಂಪು

ಧೂಪೈರ್ದೀಪೈಶ್ಚ ಬಲಿಭಿಃ ಸಗುಡೇನಾರ್ದ್ರಕೇಣ ಚ ।
ಪಯಸಾ ಪಾಯಸೇನಾಪಿ ಲವಣೇನ ಚ ಪಾಲಕ್ಯೈಃ ॥ ೮೨ ॥

ಪೂಜ್ಯಾಶ್ಚಾವಿಧವಾ ನಾರ್ಯಸ್ತಥಾ ವಿಪ್ರಾಃ ಸುಶೋಭನಾಃ ।
ಸೌಭಾಗ್ಯವೃದ್ಧಯೇ ಚಾಥ ಭೋಕ್ತವ್ಯಂ ಬಂಧುಭಿಃ ಸಹ ॥ ೮೩ ॥

ಇದಂ ಗೌರೀವ್ರತಂ ವಿಪ್ರ ಸೌಭಾಗ್ಯಾರೋಗ್ಯವರ್ಧನಂ ।
ಪ್ರತಿವರ್ಷಂ ಪ್ರಕರ್ತವ್ಯಂ ನಾರೀಭಿಶ್ಚ ನರೈಸ್ತಥಾ ॥ ೮೪ ॥

ಢುಂಢಿವ್ರತಂ ಪರೈಃ ಪ್ರೋಕ್ತಂ ಕೈಶ್ಚಿತ್ಕುಂಡವ್ರತಂ ಸ್ಮೃತಂ ।
ಲಲಿತಾವ್ರತಮಿತ್ಯನ್ಯೈಃ ಶಾಂತಿವ್ರತಮಥಾಪರೈಃ ॥ ೮೫ ॥

---

ದಾರ, ಕೆಂಪುಹೂವು, ಅರಗು, ಧೂಪ, ದೀಪ, ಬಲಿ, ಶುಂಠಿ, ಬೆಲ್ಲ, ಹಾಲು, ಪಾಯಸ ಮತ್ತು ಲವಣ ಮುಂತಾದುವುಗಳಿಂದ ಪೂಜಿಸಬೇಕು.

೮೩. ವಿಧವಾಸ್ತ್ರೀಯರು ಮತ್ತು ಶೋಭನಬ್ರಾಹ್ಮಣರೂ ಸಹ ಸೌಭಾಗ್ಯವೃದ್ಧಿಗಾಗಿ ಸತ್ಕರಿಸಲ್ಪಡಬೇಕು. ಅನಂತರ ಬಂಧುಗಳೊಡನೆ ಭೋಜನಮಾಡಬೇಕು.

೮೪. ವಿಪ್ರನೇ ! ಸೌಭಾಗ್ಯ ಮತ್ತು ಆರೋಗ್ಯಗಳನ್ನು ಅಭಿವೃದ್ಧಿಪಡಿಸುವಂತಹ ಈ ಗೌರೀವ್ರತವನ್ನು ಪ್ರತಿವರ್ಷವೂ ಪುರುಷಸ್ತ್ರೀಯರೆಲ್ಲರೂ ಮಾಡಬೇಕು.

೮೫. ಕೆಲ್ಲವರು ಇದನ್ನು ಢುಂಢಿವ್ರತವೆನ್ನುವರು. ಇತರ ಕೆಲವರು ಕುಂಡವ್ರತವೆನ್ನುವರು. ಅನ್ಯರು ಲಲಿತಾವ್ರತವೆನ್ನುವರು. ಇನ್ನು ಕೆಲವರು ಶಾಂತಿವ್ರತವೆನ್ನುವರು. ಹೀಗೆ ಈ ವ್ರತವನ್ನು ನಾನಾವಿಧವಾಗಿ ವರ್ಣಿಸುವರು.

ಸ್ನಾನಂ ದಾನಂ ಜಪೋ ಹೋಮಃ ಸರ್ವಮಸ್ಯಾಂ ಕೃತಂ ಮುನೇ ।
ಭವೇತ್ಸಹಸ್ರಗುಣಿತಂ ಪ್ರಸಾದಾದ್ದಂತಿನಃ ಸದಾ ॥ ೮೬ ॥

ಚತುರ್ಥ್ಯಾಂ ಫಾಲ್ಗುನೇ ಮಾಸಿ ಢುಂಢಿರಾಜವ್ರತಂ ಶುಭಂ ।
ತಿಲಪಿಷ್ಟೈರ್ದ್ವಿಜಾ ಭೋಜ್ಯಾ ಸ್ವಯಂ ಚಾಶ್ನೀತ ಮಾನವಃ ॥ ೮೭ ॥

ಗಣೇಶಾರಾಧನಪರೋ ದಾನಹೋಮಪ್ರಪೂಜನೈಃ ।
ತಿಲೈರೇವ ಕೃತೈಃ ಸಿದ್ಧಿಂ ಪ್ರಾಪ್ನುಯಾತ್ತತ್ಪ್ರಸಾದತಃ ॥ ೮೮ ॥

ಸೌವರ್ಣಂ ಗಜವಕ್ತ್ರಂ ಚ ಕೃತ್ವಾ ಸಂಪೂಜ್ಯ ಯತ್ನತಃ ।
ದ್ವಿಜಾಗ್ರ್ಯಾಯ ಪ್ರದಾತವ್ಯಂ ಸರ್ವಸಂಪತ್ಸಮೃದ್ಧಯೇ ॥ ೮೯ ॥

---

೮೬. ಮುನಿಯೇ ! ಈ ವ್ರತದಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ ಮುಂತಾದುವೆಲ್ಲವೂ ಗಣೇಶನ ಅನುಗ್ರಹದಿಂದ ಸಾವಿರದಷ್ಟು ಅಧಿಕ ಫಲಪ್ರದವಾಗುವುದು.

೮೭. ಫಾಲ್ಗುಣಮಾಸದ ಚೌತಿಯ ದಿನದಲ್ಲಿ ಶುಭವಾದ ಢುಂಢಿರಾಜ ವ್ರತವನ್ನಾಚರಿಸಬೇಕು. ಆ ದಿನ ತಿಲಪಿಷ್ಟಗಳಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಿ ತಾನೂ ಭೋಜನಮಾಡಬೇಕು.

೮೮. ಗಣೇಶಪೂಜಾನಿರತನು ತಿಲದಾನ ಹೋಮ ಪೂಜೆಮಾಡುವುದ ರಿಂದ ಗಣೇಶಾನುಗ್ರಹವುಂಟಾಗಿ ಸಿದ್ಧಿಯನ್ನು ಪಡೆಯುವನು.

೮೯. ಬಂಗಾರದ ಗಜಾನನನನ್ನು ಮಾಡಿಸಿ ಪೂಜೆಮಾಡಿ ಅದನ್ನು ಸಕಲೈಶ್ವರ್ಯಸಿದ್ಧಿಗಾಗಿ ಶ್ರೇಷ್ಠರಾದ ಬ್ರಾಹ್ಮಣರಿಗೆ ದಾನಮಾಡಬೇಕು.

ಯಸ್ಮಿನ್ಕಸ್ಮಿನ್ಭವೇನ್ಮಾಸಿ ಚತುರ್ಥೀ ರವಿವಾರಯುಕ್ |
ಸಾಂಗಾರಕಾ ವಾ ವಿಪ್ರೇಂದ್ರ ಸಾ ವಿಶೇಷಫಲಪ್ರದಾ || ೯೦ ||

ಸರ್ವಾಸು ಚ ಚತುರ್ಥೀಷು ಶುಕ್ಲಾಸ್ವಪ್ಯಸಿತಾಸು ಚ |
ವಿಘ್ನೇಶ ಏವ ದೇವೇಶಃ ಸಂಪೂಜ್ಯೋ ಭಕ್ತಿತತ್ಪರೈಃ || ೯೧ ||

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸ ಚತುರ್ಥೀವ್ರತ ನಿರೂಪಣಂ ನಾಮ ತ್ರಯೋದಶಾಧಿಕಶತತಮೋಽಧ್ಯಾಯಃ

---

೯೦. ಯಾವ ತಿಂಗಳಿನಲ್ಲಿಯಾದರೂ ಚೌತಿಯು ಭಾನುವಾರ ಅಥವಾ ಮಂಗಳವಾರದಿಂದ ಕೂಡಿದ್ದರೆ ಅದು ವಿಶೇಷಫಲಪ್ರದವು.

೯೧. ಶುಕ್ಲ ಅಥವಾ ಕೃಷ್ಣಪಕ್ಷದ ಸಕಲ ಚೌತಿ ತಿಥಿಗಳಲ್ಲಿಯೂ ಭಕ್ತಿ ತತ್ಪರರಾದವರಿಂದ ವಿನಾಯಕದೇವೇಶನೇ ಪೂಜಿಸಲ್ಪಡಬೇಕು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ದ್ವಾದಶಮಾಸಗಳ ಚತುರ್ಥೀವ್ರತ ನಿರೂಪಣೆಯೆಂಬ ನೂರುಹದಿಮೂರನೆಯ ಅಧ್ಯಾಯವು ಮುಗಿದುದು.



# ಚತುರ್ದಶಾಧಿಕಶತತಮೋಽಧ್ಯಾಯಃ

## ಸನಾತನ ಉವಾಚ

ಶೃಣು ವಿಪ್ರ ಪ್ರವಕ್ಷ್ಯಾಮಿ ಪಂಚಮ್ಯಾಸ್ತೇ ವ್ರತಾನ್ಯಹಂ ।
ಯಾನಿ ಭಕ್ತ್ಯಾ ಸಮಾಸ್ಥಾಯ ಸರ್ವಾನ್ಕಾಮಾನವಾಪ್ನುಯಾತ್ ॥ ೧ ॥

ಪ್ರೋಕ್ತಾ ಮತ್ಸ್ಯಜಯಂತೀ ತು ಪಂಚಮೀ ಮಾಘಶುಕ್ಲಗಾ !
ಅಸ್ಯಾಂ ಮತ್ಸ್ಯಾವತಾರಾರ್ಚಾ ಭಕ್ತೈಃ ಕಾರ್ಯಾ ಮಹೋತ್ಸವಾ ॥

ಶ್ರೀಪಂಚಮೀತಿ ಚೈಷೋಕ್ತಾ ತತ್ರ ಕಾರ್ಯಂ ಶ್ರಿಯೋರ್ಚನಂ ।
ಗಂಧಾದ್ಯೈರುಪಚಾರೈಸ್ತು ನೈವೇದ್ಯೈಃ ಪಾಯಸಾದಿಭಿಃ ॥ ೩ ॥

ಯೋ ಲಕ್ಷ್ಮೀಂ ಪೂಜಯೇಚ್ಚಾತ್ರ ತಂ ವೈ ಲಕ್ಷ್ಮೀರ್ನ ಮುಂಚತಿ ।
ಪೃಥ್ವೀವ್ರತಂ ತಥಾ ಚಾಂದ್ರಂ ಹಯಗ್ರೀವವ್ರತಂ ತಥಾ ॥ ೪ ॥

## ನೂರುಹದಿನಾಲ್ಕನೆಯ ಅಧ್ಯಾಯವು.

೧ ಸನಾತನನು ಹೇಳಿದನು :—ನಾರದನೇ ! ಕೇಳು, ಯಾವ ವ್ರತಗಳನ್ನು ಭಕ್ತಿಯಿಂದ ಆಚರಿಸಿದರೆ ಸಕಲಾಭೀಷ್ಟಗಳೂ ಲಭಿಸುವುವೋ ಅಂತಹ ಪಂಚಮೀ ವ್ರತಗಳನ್ನು ನಿನಗೆ ಹೇಳುವೆನು

೨. ಚೈತ್ರ ಶುಕ್ಲ ಪಂಚಮಿಯು ಮತ್ಸ್ಯಜಯಂತೀ ಎಂದು ವಿಹಿತವಾಗಿದೆ. ಈ ದಿನದಲ್ಲಿ ಭಕ್ತರು ಮಹೋತ್ಸವದಿಂದ ಮತ್ಸ್ಯಾವತಾರ ಪೂಜೆಯನ್ನು ಆಚರಿಸಬೇಕು.

೩. ಈ ಪಂಚಮಿಯೇ ಶ್ರೀಪಂಚಮೀ ಎಂದೂ ಉಕ್ತವಾಗಿದೆ. ಆ ದಿನದಲ್ಲಿ ಗಂಧಾದ್ಯುಪಚಾರ, ಪಾಯಸಾದಿ ನೈವೇದ್ಯಗಳಿಂದ ಶ್ರೀದೇವಿಯನ್ನು ಅರ್ಚಿಸಬೇಕು.

೪-೭. ಈ ದಿನದಲ್ಲಿ ಲಕ್ಷ್ಮೀಪೂಜೆಯನ್ನು ಮಾಡುವವನನ್ನು ಲಕ್ಷ್ಮೀದೇವಿಯು ಬಿಡುವದಿಲ್ಲ. ಎಂದರೆ ಆ ದೇವಿಯ ಅನುಗ್ರಹದಿಂದ ಅವನು ಐಶ್ವರ್ಯವಂತನಾಗುವನೆಂದು ಭಾವ.

ಕಾರ್ಯಂ ತತ್ತದ್ವಿಧಾನೇನ ತತ್ತತ್ಸಿದ್ಧಿಮಭೀಪ್ಸುಭಿಃ ।
ಅಥ ವೈಶಾಖಪಂಚಮ್ಯಾಂ ಶೇಷಂ ಚಾಭ್ಯರ್ಚ್ಯ ಮಾನವಃ ॥ ೫ ॥

ಸರ್ವೈರ್ನಾಗಗಣೈರ್ಯುಕ್ತಂ ಸೋಽಭೀಷ್ಟಂ ಲಭತೇ ಫಲಂ ।
ತಥಾ ಜ್ಯೇಷ್ಠಸ್ಯ ಸಪ್ತಮ್ಯಾಂ ಪಿತ್ರ್ನಭ್ಯರ್ಚಯೇತ್ಸುಧೀಃ ॥ ೬ ॥

ಸರ್ವಕಾಮಫಲಾವಾಪ್ತಿರ್ಭವೇದ್ವೈ ವಿಪ್ರಭೋಜನೈಃ ।
ಆಷಾಢಸ್ಯ ಪಂಚಮ್ಯಾಂ ವಾಯುಂ ಸರ್ವಗತಂ ಮುನೇ ॥ ೭ ॥

ಗ್ರಾಮಾದ್ಬಹಿರ್ವಿನಿರ್ಗತ್ಯ ಧರೋಪಸ್ಥೇ ಸಮಾಸ್ಥಿತಃ ।
ಧ್ವಜಂ ಚ ಪಂಚವರ್ಣಂ ತು ವಂಶದಂಡಾಗ್ರಸಂಸ್ಥಿತಂ ॥ ೮ ॥

ಸಮುಚ್ಛ್ರಿತಂ ನಿದಧ್ಯಾತ್ತು ಕಲ್ಪಿತಾಬ್ಜೇ ತು ಮಧ್ಯತಃ ।
ತತಸ್ತನ್ಮೂಲದೇಶೇ ತು ದಿಕ್ಷು ಸರ್ವಾಸು ನಾರದ ॥ ೯ ॥

---

ಇದೇ ದಿನದಲ್ಲಿಯೇ ಆಯಾಯಾ ವಿಧಾನದಿಂದ ಪೃಥ್ವೀವ್ರತ, ಚಾಂದ್ರ ವ್ರತ ಇವನ್ನು ಅದರದರ ಸಿದ್ಧಿಯನ್ನು ಬಯಸುವವರು ಆಚರಿಸಬೇಕು.

ವೈಶಾಖಮಾಸದ ಪಂಚಮಿಯ ದಿನದಲ್ಲಿ ಸಕಲ ನಾಗಗಣಗಳಿಂದ ಸಹಿತ ನಾದ ಶೇಷನನ್ನು ಪೂಜಿಸುವ ಮನುಷ್ಯನು ಇಷ್ಟಾರ್ಥವನ್ನು ಪಡೆಯುವನು.

ಹಾಗೆಯೇ ಜ್ಞಾನಿಯು ಜ್ಯೇಷ್ಠಮಾಸದ ಪಂಚಮಿಯ ದಿನದಲ್ಲಿ ಪಿತೃ ಗಳನ್ನು ಪೂಜಿಸಿ, ಬ್ರಾಹ್ಮಣಭೋಜನ ಮಾಡಿಸಿದರೆ ಸಕಲೇಷ್ಟಾರ್ಥಗಳೂ ಲಭಿಸುವುವು.

ಆಷಾಢ ಪಂಚಮಿಯ ದಿನದಲ್ಲಿ ಸರ್ವಗತ ವಾಯುವನ್ನು ಪೂಜಿಸಬೇಕು.

೮-೧೩. ಅದರ ವಿಧಾನ :—ಊರಿನಿಂದ ಹೊರಕ್ಕೆ ಹೋಗಿ ಭೂಮಿಯ ಮೇಲೆ ಕುಳಿತು ನೆಲದಮೇಲೆ ಕಮಲವನ್ನು ರಚಿಸಿ, ಅದರ ಮಧ್ಯದಲ್ಲಿ ಬಿದಿರು ಕೋಲಿನ ಕೊನೆಯಲ್ಲಿ ಕಟ್ಟಿದ ಪಂಚವರ್ಣದ ಧ್ವಜವನ್ನು ಎತ್ತಿ ನಿಲ್ಲಿಸಬೇಕು.

ಲೋಕಪಾಲಾನ್ಸಮಭ್ಯರ್ಚ್ಯ ಕುರ್ಯಾದ್ವಾಯುಪರೀಕ್ಷಣಂ ।
ಪ್ರಥಮಾದಿಷು ಯಾಮೇಷು ಯೋಯೋ ವಾಯುಃ ಪ್ರವರ್ತತೇ ॥

ತಸ್ಮೈತಸ್ಮೈ ದಿಗೀಶಾಯ ಪೂಜಾಂ ಸಮ್ಯಕ್ಪ್ರಕಲ್ಪಯೇತ್ ।
ಏವಂ ಸ್ಥಿತ್ವಾ ನಿರಾಹಾರಸ್ತತ್ರ ಯಾಮಚತುಷ್ಟಯಂ ॥ ೧೧ ॥

ಸಾಯಮಾಗತ್ಯ ಗೇಹಂ ಸ್ವಂ ಭುಕ್ತ್ವಾ ಸ್ವಲ್ಪಂ ಸಮಾಹಿತಃ ।
ಲೋಕಪಾಲಾನ್ನಮಸ್ಕೃತ್ಯ ಸ್ವಪ್ಯಾದ್ಭೂಮಿತಲೇ ಶುಚೌ ॥ ೧೨ ॥

ಯಃ ಸ್ವಪ್ನೋ ಜಾಯತೇ ತಸ್ಯಾಂ ರಾತ್ರೌ ಯಾಮೇ ಚತುರ್ಥಕೇ ।
ಸ ಏವ ಭವಿತಾ ನೂನಂ ಸ್ವಪ್ನ ಇತ್ಯಾಹ ವೈ ಶಿವಃ ॥ ೧೩ ॥

ಅಶುಭೇ ತು ಸಮುತ್ಪನ್ನೇ ಶಿವಪೂಜಾಪರಾಯಣಃ ।
ಸೋಪವಾಸೋ ನಯೇದಷ್ಟಯಾಮಂ ತದ್ದಿನಮೇವ ವಾ ॥ ೧೪ ॥

---

ಬಳಿಕ ಅದರ ಮೂಲಭಾಗದಲ್ಲಿ ಎಲ್ಲಾ ದಿಕ್ಕುಗಳಲ್ಲಿಯೂ ಲೋಕಪಾಲಕರನ್ನು ಪೂಜಿಸಿ ವಾಯುಪರೀಕ್ಷೆಯನ್ನು ಮಾಡಬೇಕು. ಪ್ರತಿಯೊಂದು ಯಾಮಗಳಲ್ಲಿಯೂ ಯಾವಯಾವ ದಿಕ್ಕುಗಳಿಂದ ವಾಯು ಬರುತ್ತದೆಯೋ ಆಯಾಯಾ ದಿಗೀಶರನ್ನು ಆಗ ಚೆನ್ನಾಗಿ ಪೂಜೆಮಾಡಬೇಕು. ಈ ರೀತಿ ಅಲ್ಲಿ ನಾಲ್ಕು ಯಾಮಗಳ ವರೆಗೆ ನಿರಾಹಾರನಾಗಿದ್ದು, ಸಾಯಂಕಾಲ ಮನೆಗೆ ಬಂದು ಮಿತವಾಗಿ ಭೋಜನಮಾಡಿ ಸಮಾಧಾನ-ಚಿತ್ತದಿಂದ ಲೋಕಪಾಲಕರನ್ನು ನಮಸ್ಕರಿಸಿ ನಿರ್ಮಲಪ್ರದೇಶದಲ್ಲಿ ಮಲಗಬೇಕು.

೧೩. ಆ ರಾತ್ರಿ ನಾಲ್ಕನೆಯ ಯಾಮದಲ್ಲಿ ಸ್ವಪ್ನವಾಗುವುದು. ಅದರಂತೆಯೇ ಫಲವಾಗುವುದು. ಹೀಗೆಂದು ಶಿವನು ಹೇಳಿರುವನು.

೧೪. ಒಂದುವೇಳೆ ಆಗ ಅಶುಭಸ್ವಪ್ನವಾದರೆ ಅವನು ಉಪವಾಸದಿಂದ ಎಂಟು ಯಾಮಗಳು ಅಥವಾ ಆ ಹಗಲು ಪೂರ್ತಿಯಾದರೂ ಕಳೆದು ಅನಂತರ

ಭೋಜಯಿತ್ವಾ ದ್ವಿಜಾನಷ್ಟೌ ತತಃ ಶುಭಫಲಂ ಲಭೇತ್ ।
ವ್ರತಮೇತತ್ಸಮುದಿತಂ ಶುಭಾಶುಭನಿದರ್ಶನಂ　　　　|| ೧೫ ||

ನೃಣಾಂ ಸೌಭಾಗ್ಯಜನಕಮಿಹ ಲೋಕೇ ಪರತ್ರ ಚ ।
ಶ್ರಾವಣೇ ಕೃಷ್ಣಪಂಚಮ್ಯಾಂ ವ್ರತಂ ಹ್ಯನ್ನಸಮೃದ್ಧಿದಂ　　　　|| ೧೬ ||

ಚತುರ್ಥೀದಿನಶೇಷೇ ತು ಸರ್ವಾಣ್ಯನ್ನಾನಿ ನಾರದ ।
ಪೃಥಕ್ ಪಾತ್ರೇಷು ಸಂಸ್ಥಾಪ್ಯ ಜಲೈರಾಪ್ಲಾವಯೇತ್ ಸುಧೀಃ　　|| ೧೭ ||

ತತೋ ಯಾಮಾಂತಗೇ ತತ್ತು ನಿಷ್ಕಾಸ್ಯಾಂಬು ನಿಧಾಪಯೇತ್ ।
ಪ್ರಾತರ್ಭಾನೌ ಸಮುದಿತೇ ಪಿತ್ರ್ಯಾಂಶ್ಚೈವ ತಥಾ ಋಷೀನ್　　　|| ೧೮ ||

ದೇವಾಂಶ್ಚಾಭ್ಯರ್ಚ್ಯ ಸುಸ್ನಾತಂ ಕೃತ್ವಾ ನೈವೇದ್ಯಮಗ್ರತಃ ।
ತದನ್ನಂ ಯಾಚಕೇಭ್ಯಸ್ತು ಪ್ರಯಚ್ಛೇತ್ಪ್ರೀತಮಾನಸಃ　　　　|| ೧೯ ||

---

ಎಂಟುಜನ ಬ್ರಾಹ್ಮಣರಿಗೆ ಭೋಜನಮಾಡಿಸಿದರೆ ಶುಭಫಲವಾಗುವುದು. ಈ ವ್ರತವು ಶುಭಾಶುಭಗಳನ್ನು ಸೂಚಿಸುವ ವ್ರತವೆಂದು ಉಕ್ತವಾಗಿದೆ. ಈ ವ್ರತವು ಮನುಷ್ಯರಿಗೆ ಇಹಪರಗಳಲ್ಲಿ ಸೌಭಾಗ್ಯಪ್ರದವು.

ಶ್ರಾವಣ ಕೃಷ್ಣ ಪಂಚಮಿಯ ದಿನದಲ್ಲಿ ಅನ್ನಸಮೃದ್ಧಿಪ್ರದ ವ್ರತವನ್ನಾಚರಿಸಬೇಕು. ಅದರ ವಿಧಾನ :—

ಚೌತಿಯ ದಿನ ಸಾಯಂಕಾಲದಲ್ಲಿ ಅನ್ನಗಳನ್ನೆಲ್ಲಾ ಬೇರೆ ಬೇರೆ ಪಾತ್ರೆಗಳಲ್ಲಿಟ್ಟು ನೀರು ಹಾಕಬೇಕು. ಯಾಮವಾದಮೇಲೆ ನೀರನ್ನು ಬಸಿದು ಅನ್ನವನ್ನು ಮುಚ್ಚಿಡಬೇಕು. ಪ್ರಾತಃಕಾಲ ಸೂರ್ಯೋದಯವಾದಮೇಲೆ ಪಿತೃ, ಋಷಿ, ದೇವತೆಗಳನ್ನು ಪೂಜಿಸಿ ಚೆನ್ನಾಗಿ ತೊಳೆದ ಆ ಅನ್ನವನ್ನು ನೈವೇದ್ಯಮಾಡಿ ಅದನ್ನು ಸಂತೋಷವಾಗಿ ಭಿಕ್ಷುಕರಿಗೆ ಕೊಡಬೇಕು.

ಸರ್ವಂ ದಿನಂ ಕ್ಷಿಪೇದೇವಂ ಪ್ರದೋಷೇ ತು ಶಿವಾಲಯೇ ।
ಗತ್ವಾ ಸಂಪೂಜಯೇದ್ದೇವಂ ಲಿಂಗರೂಪಿಣಮೀಶ್ವರಂ ॥ ೨೦ ॥

ಗಂಧಪುಷ್ಪಾದಿಭಿಃ ಸಮ್ಯಕ್ಪೂಜಯಿತ್ವಾ ಮಹೇಶ್ವರಂ ।
ಜಪೇತ್ಪಂಚಾಕ್ಷರೀಂ ವಿದ್ಯಾಂ ಶತಂ ಚಾಪಿ ಸಹಸ್ರಕಂ ॥ ೨೧ ॥

ಜಪಂ ನಿವೇದ್ಯ ದೇವಾಯ ಭವಾಯ ಭವರೂಪಿಣೇ ।
ಸ್ತುತ್ವಾ ಸರ್ವೈರ್ವೈದಿಕೈಶ್ಚ ಪೌರಾಣೈರ್ಬಾಷ್ಪತಾಕುಲಃ ॥ ೨೨ ॥

ಪ್ರಾರ್ಥಯೇದ್ದೇವಮೀಶಾನಂ ಶಶ್ವತ್ಸರ್ವಾನ್ನಸಿದ್ಧಯೇ ।
ಶಾರದೀಯಾನಿ ಚಾನ್ನಾನಿ ತಥಾ ವಾಸಂತಿಕಾನ್ಯಪಿ ॥ ೨೩ ॥

ಯಾನಿ ಸ್ಯುಸ್ತೈಃ ಸಮೃದ್ಧೋಽಹಂ ಭೂಯಾಂ ಜನ್ಮನಿಜನ್ಮನಿ ।
ಏವಂ ಸಂಪ್ರಾರ್ಥ್ಯ ದೇವೇಶಂ ಗೃಹಮಾಗತ್ಯ ವೈ ಸ್ವಕಂ ॥ ೨೪ ॥

೨೦. ಹಗಲೆಲ್ಲಾ ಹೀಗೆ ಕಳೆದು ಪ್ರದೋಷಕಾಲದಲ್ಲಿ ಶಿವಾಲಯಕ್ಕೆ ಹೋಗಿ ಲಿಂಗರೂಪಿಯಾದ ಈಶ್ವರನನ್ನು ಪೂಜಿಸಬೇಕು.

೨೧-೨೨. ಗಂಧ, ಹೂವು ಮುಂತಾದುವುಗಳಿಂದ ಮಹೇಶ್ವರನನ್ನು ಚೆನ್ನಾಗಿ ಪೂಜಿಸಿ ಆ ಜಪವನ್ನು ಭವರೂಪಿಯಾದ ಈಶ್ವರದೇವನಿಗೆ ಸಮರ್ಪಿಸಿ ಸಕಲ ವೇದಪುರಾಣಗಳ ಸ್ತೋತ್ರಗಳಿಂದ ಸ್ತುತಿಸಿ, ಕಣ್ಣಿನಲ್ಲಿ ಆನಂದಬಾಷ್ಪ ಗಳನ್ನು ಸುರಿಸುವವನಾಗಬೇಕು.

೨೩-೨೪. ಅನಂತರ ಈಶ್ವರದೇವನನ್ನು ಯಾವಾಗಲೂ ಸರ್ವಾನ್ನ ಸಿದ್ಧಿಯನ್ನು ಪಡೆಯುವುದಕ್ಕಾಗಿ ಶರತ್ಕಾಲದ ಮತ್ತು ವಸಂತಕಾಲದ ಸಕಲಾನ್ನ ಗಳಿಂದಲೂ ನಾನು ಎಲ್ಲಾ ಜನ್ಮಗಳಲ್ಲಿಯೂ ಪರಿಪೂರ್ಣನಾಗಿರುವಂತೆ ಅನು ಗ್ರಹಿಸಬೇಕೆಂದು ಪ್ರಾರ್ಥಿಸಬೇಕು.

ದತ್ವಾನ್ನಂ ಬ್ರಾಹ್ಮಣಾದಿಭ್ಯಃ ಪಕ್ವಂ ಭುಂಜೀತ ವಾಗ್ಯತಃ ।
ಏತದನ್ನವ್ರತಂ ವಿಪ್ರ ವಿಧಿನಾಚರಿತಂ ನೃಭಿಃ ॥ ೨೫ ॥

ಸರ್ವಾನ್ನಸಂಪಜ್ಜನಕಂ ಪರಲೋಕೇ ಗತಿಪ್ರದಂ ।
ಶ್ರಾವಣೇ ಶುಕ್ಲಪಂಚಮ್ಯಾಂ ನೃಭಿರಾಸ್ತಿಕ್ಯತತ್ಪರೈಃ ॥ ೨೬ ॥

ದ್ವಾರಸ್ಯೋಭಯತೋ ಲೇಖ್ಯಾ ಗೋಮಯೇನ ವಿಷೋಲ್ಬಣಾಃ ।
ಗಂಧಾದ್ಯೈಃ ಪೂಜಯೇತ್ತಾಂಶ್ಚ ತಥೇಂದ್ರಾಣೀಮನಂತರಂ ॥ ೨೭ ॥

ಸಂಪೂಜ್ಯ ಸ್ವರ್ಣರೂಪ್ಯಾದಿಪಧ್ಯಕ್ಷತಕುಶಾಂಬುಭಿಃ ।
ಗಂಧೈಃ ಪುಷ್ಪೈಸ್ತಥಾ ಧೂಪೈರ್ನೈವೇದ್ಯಸಂಚಯೈಃ ॥ ೨೮ ॥

ತತಃ ಪ್ರದಕ್ಷಿಣೀಕೃತ್ಯ ತದ್ದ್ರವ್ಯಂ ಸಂಪ್ರಣಮ್ಯ ಚ ।
ಸಂಪ್ರಾರ್ಥ್ಯ ಭಕ್ತಿಭಾವೇನ ವಿಪ್ರಾಗ್ರ್ಯೇಷು ಸಮರ್ಪಯೇತ್ ॥ ೨೯ ॥

---

ಈರೀತಿ ದೇವೇಶ್ವರನನ್ನು ಪ್ರಾರ್ಥಿಸಿ, ತನ್ನ ಮನೆಗೆ ಬಂದು ಬ್ರಾಹ್ಮಣಾದಿಗಳಿಗೆ ಪಕ್ವಾನ್ನ ಭೋಜನಮಾಡಿಸಿ, ತಾನು ವಾಙ್ಮಯಮದಿಂದ ಊಟ ಮಾಡಬೇಕು.

ನಾರದನೇ! ಈ ಅನ್ನವ್ರತವನ್ನು ವಿಧಿವತ್ತಾಗಿ ಆಚರಿಸಿದರೆ ಅದು ಆರಾಧಕ ಮನುಜರಿಗೆ ಇಲ್ಲಿ ಅನ್ನಸಂಪತ್ತನ್ನೆಲ್ಲಾ ಕೊಟ್ಟು ಪರಲೋಕದಲ್ಲಿ ಸದ್ಗತಿಯನ್ನೂ ಸಹ ಕೊಡುತ್ತದೆ.

ಶ್ರಾವಣ ಶುಕ್ಲ ಪಂಚಮಿಯ ದಿನದಲ್ಲಿ ಆಸ್ತಿಕ ಜನರು ಬಾಗಿಲಿನ ಉಭಯಭಾಗಗಳಲ್ಲಿಯೂ ಗೋಮಯದಿಂದ ಸರ್ಪಗಳನ್ನು ಬರೆದು ಅವನ್ನು ಪೂಜಿಸಬೇಕು, ತರುವಾಯ ಇಂದ್ರಾಣೀದೇವಿಯನ್ನು ಬಂಗಾರ, ಬೆಳ್ಳಿ, ಮೊಸರು, ಅಕ್ಷತೆ, ದರ್ಭೆ, ಜಲ ಇವುಗಳಿಂದಲೂ, ಗಂಧಪುಷ್ಪಗಳಿಂದಲೂ, ಪೂಜಿಸಿ, ಧೂಪ ದೀಪ ನೈವೇದ್ಯಗಳನ್ನು ಮಾಡಿ ಪ್ರದಕ್ಷಿಣೆ ನಮಸ್ಕಾರ ಮಾಡಿ, ಭಕ್ತಿಭಾವದಿಂದ ಪ್ರಾರ್ಥಿಸಿ, ಆ ದ್ರವ್ಯಗಳನ್ನೆಲ್ಲಾ ಬ್ರಾಹ್ಮಣಶ್ರೇಷ್ಠರಿಗೆ ಸಮರ್ಪಿಸಬೇಕು.

ಯದಿದಂ ಸ್ವರ್ಣರೌಪ್ಯಾದಿ ದ್ರವ್ಯಂ ವೈ ವಿಪ್ರಸಾತ್ಕೃತಂ ।
ತದನಂತಫಲಂ ಭೂಯಾನ್ಮಮ ಜನ್ಮನಿಜನ್ಮನಿ ॥ ೩೦ ॥

ಇತ್ಯೇವಂ ದದತೋ ದ್ರವ್ಯಂ ಭಕ್ತಿಭಾವೇನ ನಾರದ ।
ಪ್ರಸನ್ನಃ ಸ್ಯಾದ್ಧನಾಧ್ಯಕ್ಷಃ ಸ್ವರ್ಣಾದಿಕಸಮೃದ್ಧಿದಃ ॥ ೩೧ ॥

ಏತದ್ವ್ರತಂ ನರಃ ಕೃತ್ವಾ ವಿಪ್ರಾನ್ಸಂಭೋಜ್ಯ ಭಕ್ತಿತಃ ।
ಪಶ್ಚಾತ್ಸ್ವಯಂ ತು ಭುಂಜೀತ ದಾರಾಪತ್ಯಸುಹೃದ್ವೃತಃ ॥ ೩೨ ॥

ಭಾದ್ರೇ ತು ಕೃಷ್ಣಪಂಚಮ್ಯಾಂ ನಾಗಾನ್ ಕ್ಷೀರೇಣ ತರ್ಪಯೇತ್ ॥ ೩೩ ॥

ಯಸ್ತಸ್ಯಾಽಸಮಂ ಯಾವತ್ಕುಲಂ ಸರ್ಪಾತ್ಸನಿರ್ಭಯಂ ।
ಭಾದ್ರಸ್ಯ ಶುಕ್ಲಪಂಚಮ್ಯಾಂ ಪೂಜಯೇದೃಷಿಸತ್ತಮಾನ್ ॥ ೩೪ ॥

---

೩೦-೩೧. ಬ್ರಾಹ್ಮಣರಿಗೆ ದಾನಮಾಡಿದ ಈ ಸುವರ್ಣರಜತಾದಿಗಳು ನನಗೆ ಜನ್ಮ ಜನ್ಮಗಳಲ್ಲಿಯೂ ಅನಂತಫಲಪ್ರದಗಳಾಗಲಿ ಎಂಬ ಅನುಸಂಧಾನ ದಿಂದ ಭಕ್ತಿಪೂರ್ವಕವಾಗಿ ಕೊಡುವವನಿಗೆ ಧನಾಧ್ಯಕ್ಷನು ಪ್ರಸನ್ನನಾಗಿ ಸುವರ್ಣ ಸಮೃದ್ಧಿಯನ್ನುಂಟುಮಾಡುವನು.

೩೨. ಮನುಷ್ಯನು ಈ ವ್ರತವನ್ನಾಚರಿಸಿ, ಭಕ್ತಿಯಿಂದ ಬ್ರಾಹ್ಮಣ ಭೋಜನಮಾಡಿಸಿ, ಅನಂತರ ತಾನು ಹೆಂಡತಿ ಮಕ್ಕಳು ಮತ್ತು ಮಿತ್ರರೊಡನೆ ಭೋಜನಮಾಡಬೇಕು.

೩೩-೩೪. ಭಾದ್ರಪದ ಕೃಷ್ಣ ಪಂಚಮಿಯ ದಿನದಲ್ಲಿ ನಾಗಗಳನ್ನು ಹಾಲಿನಿಂದ ತೃಪ್ತಿಪಡಿಸಬೇಕು. (ತನಿ ಎರೆಯಬೇಕು) ಹಾಗೆ ಮಾಡಿದವನ ಕುಲದಲ್ಲಿ ಯಾವಾಗಲೂ, ಸರ್ಪಭಯವು ಉಂಟಾಗುವುದಿಲ್ಲ.

ಭಾದ್ರಪದ ಶುಕ್ಲ ಪಂಚಮಿಯ ದಿನದಲ್ಲಿ ಶ್ರೇಷ್ಠ ಋಷಿಗಳನ್ನು ಪೂಜಿಸಬೇಕು.

ಪ್ರಾತರ್ನದ್ಯಾದಿಕೇ ಸ್ನಾತ್ವಾ ಕೃತ್ವಾ ನಿತ್ಯಮತಂದ್ರಿತಃ |
ಗೃಹಮಾಗತ್ಯ ಯತ್ನೇನ ವೇದಿಕಾಂ ಕಾರಯೇನ್ಮೃದಾ || ೩೫ ||

ಗೋಮಯೇನೋಪಲಿಪ್ಯಾಥ ಕೃತ್ವಾ ಪುಷ್ಪೋಪಶೋಭಿತಾಂ |
ತತ್ರಾಸ್ತೀರ್ಯ ಕುಶಾನ್ವಿಪ್ರ ಋಷೀನ್ಸಪ್ತ ಸಮರ್ಚಯೇತ್ || ೩೬ ||

ಗಂಧೈಶ್ಚ ವಿವಿಧೈಃ ಪುಷ್ಪೈರ್ಧೂಪೈರ್ದೀಪೈಃ ಸುಶೋಭಿತೈಃ |
ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರೋಽಥ ಗೌತಮಃ || ೩೭ ||

ಜಮದಗ್ನಿರ್ವಸಿಷ್ಠಶ್ಚ ಸಪ್ತೈತೇ ಋಷಯಃ ಸ್ಮೃತಾಃ |
ಏತೇಭ್ಯೋಽರ್ಘ್ಯಂ ಚ ವಿಧಿವತ್ಕಲ್ಪಯಿತ್ವಾ ಪ್ರದಾಯ ಚ || ೩೮ ||

ನೈವೇದ್ಯಂ ವಿಪಚೇದ್ಧೀಮಾನ್ ಶ್ಯಾಮಾಕಾದ್ಯೈರಕೃಷ್ಟಕೈಃ |
ತನ್ನಿವೇದ್ಯ ವಿಸೃಜ್ಯೈನಾನ್ ಸ್ವಯಂ ಚಾದ್ಯಾತ್ತದೇವ ಹಿ || ೩೯ ||

ವಿಧಾನ:—ಆಲಸ್ಯಾದಿರಹಿತನಾಗಿ ಪ್ರಾತಃಕಾಲದಲ್ಲಿ ನದ್ಯಾದಿಗಳಲ್ಲಿ ಸ್ನಾನ ಮಾಡಿ ನಿತ್ಯಾಹ್ನಿಕಮಾಡಿಕೊಂಡು, ಮನೆಗೆ ಬಂದು ಮಣ್ಣಿನಿಂದ ವೇದಿಕೆಯನ್ನು ರಚಿಸಿ ಗೋಮಯದಿಂದ ಸಾರಿಸಿ, ಹೂವಿನಿಂದಲಂಕರಿಸಿ, ಅಲ್ಲಿ ದರ್ಭೆಗಳನ್ನು ಹಾಸಿ, ಅದರಮೇಲೆ ಸಪ್ತಋಷಿಗಳನ್ನು ಸ್ಥಾಪಿಸಿ, ನಾನಾವಿಧ ಸುಗಂಧ, ಪುಷ್ಪ, ಧೂಪ, ದೀಪಗಳಿಂದ ಪೂಜಿಸಬೇಕು.

ಈ ವ್ರತದಲ್ಲಿ ಪೂಜಿಸಬೇಕಾದ ಸಪ್ತಋಷಿಗಳು— ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಮತ್ತು ವಸಿಷ್ಠ ಎಂಬಿವರು ಸಪ್ತಋಷಿಗಳೆಂದು ಉಕ್ತರಾಗಿರುವರು.

ಇವರಿಗೆ ವಿಧಿವತ್ತಾಗಿ ಅರ್ಘ್ಯೆಯನ್ನು ಕಲ್ಪಿಸಿ ಕೊಟ್ಟು ಶ್ಯಾಮಕಾದಿ ಅಕೃಷ್ಟಪದಾರ್ಥಗಳನ್ನು ಪಚನಮಾಡಿ ನೈವೇದ್ಯವನ್ನರ್ಪಿಸಿ, ಆ ಋಷಿಗಳನ್ನು ವಿಸರ್ಜನೆಮಾಡಿ ತಾನು ಅದನ್ನೇ ತಿನ್ನಬೇಕು.

ಅನೇನ ವಿಧಿನಾ ಸಪ್ತ ವರ್ಷಾಣಿ ಪ್ರತಿವತ್ಸರಂ ।
ಕೃತ್ವಾ ವ್ರತಾಂತೇ ವರಯೇದಾಚಾರ್ಯಾನ್ ಸಪ್ತ ವೈದಿಕಾ ॥ ೪೦ ॥

ಪ್ರತಿಮಾಃ ಸಪ್ತಕುರ್ವೀತ ಸುವರ್ಣೇನ ಸ್ವಶಕ್ತಿತಃ ।
ಜಟಿಲಾಃ ಸಾಕ್ಷಸೂತ್ರಾಶ್ಚ ಕಮಂಡಲುಸಮನ್ವಿತಾಃ ॥ ೪೧ ॥

ಸಂಸ್ಥಾಪ್ಯ ಕಲಶೇಷ್ವೇತಾಸ್ತಾಮ್ರೇಷು ಮೃನ್ಮಯೇಷು ವಾ ।
ಸ್ನಾಪಯೇದ್ವಿಧಿವದ್ಭಕ್ತ್ಯಾ ಪೃಥಕ್ ಪಂಚಾಮೃತೈರಪಿ ॥ ೪೨ ॥

ಉಪಚಾರೈಃ ಷೋಡಶಭಿಸ್ತತಃ ಸಂಪೂಜ್ಯ ಭಕ್ತಿತಃ ।
ಅರ್ಘ್ಯಂ ದತ್ವಾ ತತೋ ಹೋಮಂ ತಿಲವ್ರೀಹಿಯವಾದಿಭಿಃ ॥ ೪೩ ॥

ಸಹಸ್ರೋಮಾ ಇತಿ ಋಚಾ ನಾಮಮಂತ್ರೈಸ್ತು ವಾ ಪೃಥಕ್ ।
ಪುಣ್ಯೈರ್ಮಂತ್ರೈಸ್ತಥೈವಾನ್ಯೈರ್ಹುತ್ವಾ ಪೂರ್ಣಾಹುತಿಂ ಚರೇತ್ ॥೪೪ ॥

೪೦-೪೨. ಈ ವಿಧಾನದಿಂದ ಏಳುವರ್ಷಗಳವರೆಗೆ ಪ್ರತಿವರ್ಷವೂ ಪೂಜೆಮಾಡಿ ಕೊನೆಯಲ್ಲಿ ಬಂಗಾರದಿಂದ ಜಟೆ, ಜಪಮಾಲೆ, ಕಮಂಡಲುಗಳ ಸಹಿತವಾಗಿ ಈ ಏಳು ಋಷಿಗಳ ಪ್ರತಿಮೆಗಳನ್ನು ಮಾಡಿಸಿ, ಏಳು ತಾಮ್ರ ಅಥವಾ ಮಣ್ಣಿನ ಕಲಶಗಳನ್ನು ಸ್ಥಾಪಿಸಿ, ಅದರಲ್ಲಿ ಆ ಪ್ರತಿಮೆಗಳನ್ನಿಟ್ಟು ಪ್ರತ್ಯೇಕವಾಗಿ ಒಂದೊಂದು ಕಲಶವನ್ನೂ ಪಂಚಾಮೃತಗಳಿಂದ ಭಕ್ತಿಪೂರ್ವಕವಾಗಿ ಸ್ನಾನಮಾಡಿಸಬೇಕು.

೪೩-೪೪. ಭಕ್ತಿಪೂರ್ವಕವಾಗಿ ಆವಾಹನೆ ಮುಂತಾದ ಷೋಡಶೋಪಚಾರಗಳಿಂದ ಪೂಜಿಸಿ, ಅರ್ಘ್ಯಕೊಟ್ಟು ಎಳ್ಳು ಬತ್ತ ಯವಗಳಿಂದ ಹೋಮವನ್ನು 'ಸಹಸ್ರೋಮಾ' ಎಂಬ ಋಕ್ಕಿನಿಂದಲೂ, ನಾಮಮಂತ್ರಗಳಿಂದಲೂ, ಇತರ ಪುಣ್ಯಮಂತ್ರಗಳಿಂದಲೂ, ಪ್ರತ್ಯೇಕವಾಗಿ ಮಾಡಿ ಪೂರ್ಣಾಹುತಿಯನ್ನರ್ಪಿಸಬೇಕು.

ತತಸ್ತು ಸಪ್ತ ಗಾ ದದ್ಯಾದ್ವಸ್ತ್ರಾಲಂಕಾರಸಂಯುತಾಃ |
ಆಚಾರ್ಯಂ ಪೂಜಯೇಚ್ಚೈವ ವಸ್ತ್ರಾಲಂಕಾರಭೂಷಣೈಃ ॥ ೪೫ ॥

ಅನುಜ್ಞಯಾ ಗುರೋಃ ಪಶ್ಚಾನ್ಮೂರ್ತೀರ್ವಿಪ್ರೇಷು ಚಾರ್ಪಯೇತ್ |
ಭೋಜಯಿತ್ವಾ ತು ತಾನ್ಭಕ್ತ್ಯಾ ಪ್ರಣಿಪತ್ಯ ವಿಸರ್ಜಯೇತ್ ॥ ೪೬ ॥

ತತಶ್ಚೇಷ್ಟೈಃ ಸಮಾಸೀನಃ ಸ್ವಯಂ ಬ್ರಾಹ್ಮಣಶೇಷಿತಂ |
ಭುಕ್ತ್ವಾನ್ನೈ ಷಡ್ರಸೋಪೇತಂ ಪ್ರಮುದ್ಯಾತ್ಸಹ ಬಂಧುಭಿಃ ॥ ೪೭ ॥

ಏತತ್ಕೃತ್ವಾ ವ್ರತಂ ಸಾಂಗಂ ಭೋಗಾನ್ಭುಕ್ತ್ವಾಥ ವಾಂಛಿತಾನ್ |
ಸಪ್ತರ್ಷೀಣಾಂ ಪ್ರಸಾದೇನ ವಿಮಾನವರಗೋ ಭವೇತ್ ॥ ೪೮ ॥

೪೫. ಅನಂತರ ವಸ್ತ್ರಾಭರಣಗಳಸಹಿತವಾಗಿ ಏಳುಗೋವುಗಳನ್ನು ದಾನಮಾಡಬೇಕು ಮತ್ತು ವಸ್ತ್ರ, ಅಲಂಕಾರ, ಭೂಷಣಾದಿಗಳಿಂದ ಆಚಾರ್ಯರನ್ನು ಪೂಜಿಸಬೇಕು.

೪೬. ತರುವಾಯ ಆಚಾರ್ಯರ ಅಪ್ಪಣೆಪಡೆದು ಸಪ್ತರ್ಷಿಮೂರ್ತಿಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಅವರಿಗೆ ಭಕ್ತಿಯಿಂದ ಭೋಜನಮಾಡಿಸಿ, ನಮಸ್ಕಾರಮಾಡಿ ವಿಸರ್ಜನೆಮಾಡಬೇಕು.

೪೭. ಅನಂತರ ಇಷ್ಟಮಿತ್ರರೊಡನೆ ಕುಳಿತು ಷಡ್ರಸಯುಕ್ತವಾದ ಬ್ರಾಹ್ಮಣಭುಕ್ತಶೇಷವನ್ನು ತಾನೂ ಭೋಜನಮಾಡಿ, ಬಂಧುಗಳೊಡನೆ ಸಂತೋಷಿಸಬೇಕು.

೪೮. ಈ ವ್ರತವನ್ನು ಸಾಂಗವಾಗಿ ಮಾಡಿದರೆ ಇಲ್ಲಿ ಅಪೇಕ್ಷಿತ ಭೋಗಗಳನ್ನನುಭವಿಸಿ, ಸಪ್ತರ್ಷಿಗಳ ಅನುಗ್ರಹದಿಂದ ಶ್ರೇಷ್ಠವಿಮಾನಗಳಲ್ಲಿ ಸಂಚರಿಸುವವರಾಗುವರು.

ಆಶ್ವಿನೇ ಶುಕ್ಲಪಂಚಮ್ಯಾಮುಪಾಂಗಲಲಿತಾವ್ರತಂ || ೪೯ ||

ತಸ್ಯಾಃ ಸ್ವರ್ಣಮಯೀಂ ಮೂರ್ತಿಂ ಶಕ್ತ್ಯಾ ನಿರ್ಮಾಯ ನಾರದ ।
ಉಪಚಾರೈಃ ಷೋಡಶಭಿಃ ಪೂಜಯೇತ್ತಾಂ ವಿಧಾನತಃ || ೫೦ ||

ಪಕ್ವಾನ್ನಂ ಫಲಸಂಯುಕ್ತಂ ಸಘೃತಂ ದಕ್ಷಿಣಾನ್ವಿತಂ ।
ದ್ವಿಜವರ್ಯಾಯ ದಾತವ್ಯಂ ವ್ರತಸಂಪೂರ್ತಿಹೇತವೇ || ೫೧ ||

ಸವಾಹನಾ ಶಕ್ತಿಯುತಾ ವರದಾ ಪೂಜಿತಾ ಮಯಾ ।
ಮಾತರ್ಮಾಮನುಗೃಹ್ಯಾಥ ಗಮ್ಯತಾಂ ನಿಜಮಂದಿರಂ || ೫೨ ||

ಕಾರ್ತಿಕೇ ಶುಕ್ಲಪಂಚಮ್ಯಾಂ ಜಯಾವ್ರತಮನುತ್ತಮಂ ।
ಕರ್ತವ್ಯಂ ಪಾಪನಾಶಾಯ ಶ್ರದ್ಧಯಾ ದ್ವಿಜಸತ್ತಮ || ೫೩ ||

---

೪೯-೫೦. ಆಶ್ವಯುಜ ಶುಕ್ಲ ಪಂಚಮಿಯಲ್ಲಿ ಉಪಾಂಗಲಲಿತಾವ್ರತವು ವಿಹಿತವಾಗಿದೆ. ವಿಧಾನ—ನಾರದನೇ! ತನ್ನ ಶಕ್ತ್ಯನುಸಾರವಾಗಿ ಮನುಷ್ಯನು ಉಪಾಂಗಲಲಿತೆಯ ವಿಗ್ರಹವನ್ನು ಬಂಗಾರದಿಂದ ಮಾಡಿಸಿ, ಅದನ್ನು ವಿಧಿವತ್ತಾಗಿ ಆವಾಹನೆ ಮುಂತಾದ ಷೋಡಶೋಪಚಾರಗಳಿಂದ ಪೂಜಿಸಬೇಕು.

೫೧. ಆಚರಿಸಿದ ವ್ರತವು ಸಂಪೂರ್ಣವಾಗುವುದಕ್ಕಾಗಿ ಫಲ, ಘೃತ, ದಕ್ಷಿಣೆಗಳ ಸಹಿತವಾಗಿ ಪಕ್ವಾನ್ನವನ್ನು ಉತ್ತಮ ಬ್ರಾಹ್ಮಣನಿಗೆ ದಾನ ಮಾಡಬೇಕು.

೫೨. ಅನಂತರ 'ತಾಯಿಯೇ! ವಾಹನ ಶಕ್ತಿಸಹಿತವಾಗಿ ವರದಳಾದ ನಿನ್ನನ್ನು ಪೂಜಿಸಿರುವೆನು, ಆದರಿಂದ ನೀನು ಸಂತುಷ್ಟಳಾಗಿ ನನ್ನನ್ನು ಅನುಗ್ರಹಿಸಿ, ನಿನ್ನ ಸ್ಥಾನಕ್ಕೆ ದಯಮಾಡಿಸಬೇಕು' ಎಂದು ಪ್ರಾರ್ಥಿಸಬೇಕು.

೫೩. ದ್ವಿಜವರ್ಯನೇ! ಕಾರ್ತಿಕ ಶುಕ್ಲ ಪಂಚಮಿಯ ದಿನದಲ್ಲಿ ಪಾಪಪರಿಹಾರಕ್ಕಾಗಿ ಶ್ರದ್ಧೆಯಿಂದ ಉತ್ಕೃಷ್ಟವಾದ ಜಯಾವ್ರತವನ್ನಾಚರಿಸಬೇಕು.

ಪೂಜಯಿತ್ವಾ ಜಯಾಂ ವಿಪ್ರ ಯಥಾವಿಧಿ ಸಮಾಹಿತಃ |
ಉಪಚಾರೈಃ ಷೋಡಶಭಿಸ್ತತಃ ಶುಚಿರಲಂಕೃತಃ || ೫೪ ||

ವಿಪ್ರೈಕಂ ಭೋಜಯೇಚ್ಚಾಪಿ ತಸ್ಮೈ ದತ್ವಾ ಚ ದಕ್ಷಿಣಾಂ |
ವಿಸರ್ಜಯೇತ್ತತಃ ಪಶ್ಚಾತ್ಸ್ವಯಂ ಭುಂಜೀತ ವಾಗ್ಯತಃ || ೫೫ ||

ಯಸ್ತು ವೈ ಭಕ್ತಿಸಂಯುಕ್ತಃ ಸ್ನಾನಂ ಕುರ್ಯಾಜ್ಜಯಾದಿನೇ |
ನಶ್ಯಂತಿ ತಸ್ಯ ಪಾಪಾನಿ ಸಿಂಹಾಕ್ರಾಂತಾ ಮೃಗಾ ಯಥಾ || ೫೬ ||

ಯದಶ್ವಮೇಧಾವಭೃಥೇ ಫಲಂ ಸ್ನಾನೇನ ಕೀರ್ತಿತಂ |
ತತ್ಫಲಂ ಪ್ರಾಪ್ಯತೇ ವಿಪ್ರ ಸ್ನಾನೇನಾಪಿ ಜಯಾದಿನೇ || ೫೭ ||

ಅಪುತ್ರೋ ಲಭತೇ ಪುತ್ರಂ ವಂಧ್ಯಾ ಗರ್ಭಂ ಚ ವಿಂದತಿ |
ರೋಗೀ ರೋಗಾತ್ಪ್ರಮುಚ್ಯೇತ ಬದ್ಧೋ ಮುಚ್ಯೇತ ಬಂಧನಾತ್ || ೫೮ ||

---

೫೪-೫೫. ಬ್ರಾಹ್ಮಣನೇ! ಆ ದಿನದಲ್ಲಿ ಸಮಾಧಾನಮನಸ್ಕನಾಗಿ, ಅಲಂಕಾರಮಾಡಿಕೊಂಡು ಮಡಿಯಿಂದ ಜಯಾದೇವಿಯನ್ನು ವಿಧಿವತ್ತಾಗಿ ಆವಾಹನೆ ಮುಂತಾದ ಷೋಡಶೋಪಚಾರಗಳಿಂದ ಪೂಜಿಸಿ, ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಿ, ದಕ್ಷಿಣೆಕೊಟ್ಟು ವಿಸರ್ಜನೆಯನ್ನು ಮಾಡಬೇಕು. ತರುವಾಯ ತಾನು ಭೋಜನಮಾಡಬೇಕು.

೫೬. ಜಯಾವ್ರತದಿನದಲ್ಲಿ ಭಕ್ತಿಯುಕ್ತನಾಗಿ ಸ್ನಾನಮಾಡುವ ಮನುಷ್ಯನ ಪಾಪಗಳು ಸಿಂಹವು ಹಿಡಿದ ಮೃಗಗಳಂತೆ ನಾಶವಾಗುವುವು.

೫೭. ಅಶ್ವಮೇಧಯಜ್ಞಮಾಡಿ ಅವಭೃಥ ಸ್ನಾನಮಾಡುವುದರಿಂದು ಲಭಿಸುವ ಫಲವು ಜಯಾದಿನದಲ್ಲ ಸ್ನಾನಮಾಡುವುದರಿಂದ ಲಭಿಸುವುದು.

೫೮. ಆ ಸ್ನಾನದಿಂದ ಮಕ್ಕಳಿಲ್ಲದವನು ಮಗನನ್ನೂ, ಗೊಡ್ಡಿಯು ಗರ್ಭವನ್ನೂ ಪಡೆಯುವರು. ರೋಗಿಗೆ ರೋಗವು ವಾಸಿಯಾಗುವುದು ಬದ್ಧನು ಬಂಧನದಿಂದ ಮುಕ್ತನಾಗುವನು.

**ಮಾರ್ಗಶುಕ್ಲೇ ಚ ಪಂಚಮ್ಯಾಂ ನಾಗಾನಿಷ್ಟ್ವಾ ವಿಧಾನತಃ |**
**ನಾಗೇಭ್ಯೋ ಹ್ಯಭಯಂ ಲಬ್ಧ್ವಾ ಮೋದತೇ ಸಹ ಬಾಂಧವೈಃ || ೫೯ ||**

**ಪೌಷೇಪಿ ಶುಕ್ಲಪಂಚಮ್ಯಾಂ ಶುಕ್ಲೇ ಕೃಷ್ಣೇ ಚ ನಾರದ |**
**ಪಿತ್ರೂಣಾಂ ಪೂಜನಂ ಶಸ್ತಂ ನಾಗಾನಾಂ ಚಾಪಿ ಸರ್ವಥಾ || ೬೦ ||**

**ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸಸ್ಥ ಪಂಚಮೀವ್ರತನಿರೂಪಣಂ ನಾಮ ಚತುರ್ದಶಾಧಿಕಶತತಮೋಽಧ್ಯಾಯಃ**

---

೫೯. ಮಾರ್ಗಶೀರ್ಷಮಾಸದ ಶುಕ್ಲ ಪಂಚಮಿಯದಿನದಲ್ಲಿ ವಿಧ್ಯುಕ್ತ ಪ್ರಕಾರವಾಗಿ ನಾಗಗಳನ್ನು ಪೂಜಿಸಿದರೆ ಅವುಗಳ ದೆಸೆಯಿಂದ ಅಭಯಹೊಂದಿ, ಬಂಧುಗಳೊಡನೆ ಸುಖಿಯಾಗಿ ಬಾಳುವನು.

೬೦. ಪುಷ್ಯಮಾಸದ ಶುಕ್ಲ ಕೃಷ್ಣ ಪಂಚಮಿಗಳೆರಡರಲ್ಲೂ ಪಿತೃ ಮತ್ತು ನಾಗಗಳ ಪೂಜೆಮಾಡುವುದು ಸರ್ವವಿಧದಿಂದಲೂ ಪ್ರಶಸ್ತವು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ದ್ವಾದಶಮಾಸ ಪಂಚಮೀವ್ರತ ನಿರೂಪಣೆಯೆಂಬ ನೂರುಹದಿನಾಲ್ಕನೆಯ ಅಧ್ಯಾಯವು ಮುಗಿದುದು.

## ವಿಷಯಸಂಗ್ರಹ

ಚೈತ್ರಾದಿ ಹನ್ನೆರಡು ತಿಂಗಳುಗಳ ಪಂಚಮೀದಿನದಲ್ಲಿ ಮಾಡಬೇಕಾದ ವ್ರತಗಳು, ಪೂಜ್ಯದೇವತೆ, ಕರ್ತವ್ಯವಿಧಾನ, ಹೋಮ ಮುಂತಾದ ವಿಧಾನಗಳು ಫಲಸಹಿತವಾಗಿ ವಿವರಿಸಲ್ಪಟ್ಟವೆ.



## ಪಂಚದಶಾಧಿಕಶತತಮೋಽಧ್ಯಾಯಃ

### ಸನಾತನ ಉವಾಚ

ಶೃಣು ವಿಪ್ರ ಪ್ರವಕ್ಷ್ಯಾಮಿ ಷಷ್ಠ್ಯಾಂ ಚೈವ ವ್ರತಾನಿ ತೇ ।
ಯಾನಿ ಸಮ್ಯಗ್ವಿಧಾಯಾತ್ರ ಲಭೇತ್ಸರ್ವಾನ್ಮನೋರಥಾನ್ ॥ ೧ ॥

ಚೈತ್ರಮಾಸೇ ಶುಕ್ಲಷಷ್ಠ್ಯಾಂ ಕುಮಾರವ್ರತಮುತ್ತಮಂ ।
ತತ್ರೇಷ್ಟ್ವಾ ಷಣ್ಮುಖಂ ದೇವಂ ನಾನಾಪೂಜಾವಿಧಾನತಃ ॥ ೨ ॥

ಪುತ್ರಂ ಸರ್ವಗುಣೋಪೇತಂ ಪ್ರಾಪ್ನುಯಾಚ್ಚಿರಜೀವಿನಂ ।
ವೈಶಾಖಶುಕ್ಲಷಷ್ಠ್ಯಾಂ ಚ ಪೂಜಯಿತ್ವಾ ಚ ಕಾರ್ತಿಕಂ ॥ ೩ ॥

ಲಭತೇ ಮಾತೃಜಂ ಸೌಖ್ಯಂ ನಾತ್ರ ಕಾರ್ಯಾ ವಿಚಾರಣಾ ।
ಜ್ಯೇಷ್ಠಮಾಸೇ ಶುಕ್ಲಷಷ್ಠ್ಯಾಂ ವಿಧಿನೇಷ್ಟ್ವಾ ದಿವಾಕರಂ ॥ ೪ ॥

### ನೂರುಹದಿನೈದನೆಯ ಅಧ್ಯಾಯವು.

೧. ಸನಾತನನು ಹೇಳಿದನು :—ಬ್ರಾಹ್ಮಣನಾದ ನಾರದನೇ! ಕೇಳು; ಯಾವ ವ್ರತಗಳನ್ನು ಚೆನ್ನಾಗಿ ಆಚರಿಸಿ ಮನುಷ್ಯನು ಇಲ್ಲಿ ಸಕಲ ಮನೋರಥಗಳನ್ನೂ ಪಡೆಯುವನೋ ಅಂತಹ ಷಷ್ಠೀವ್ರತಗಳನ್ನು ನಿನಗೆ ಹೇಳುವೆನು.

೨-೬. ಚೈತ್ರಮಾಸದ ಶುಕ್ಲ ಷಷ್ಠಿಯ ದಿನದಲ್ಲಿ ಉತ್ತಮವಾದ ಕುಮಾರ ವ್ರತವನ್ನಾಚರಿಸಬೇಕು. ಆ ವ್ರತದಲ್ಲಿ ನಾನಾಪೂಜಾವಿಧಾನಗಳಿಂದ ಷಣ್ಮುಖದೇವನನ್ನು ಪೂಜಿಸಿದರೆ ಸಕಲ ಗುಣಶಾಲಿಯೂ ದೀರ್ಘಕಾಲ ಬದುಕಿರುವವನೂ ಆದ ಮಗನನ್ನು ಪಡೆಯುವನು.

ಲಭತೇ ವಾಂಛಿತಾನ್ಕಾಮಾನ್ ತತ್ಪ್ರಸಾದಾನ್ನ ಸಂಶಯಃ ।
ಆಷಾಢಶುಕ್ಲಷಷ್ಠ್ಯಾಂ ವೈ ಸ್ಕಂದವ್ರತಮನುತ್ತಮಂ ॥ ೫ ॥

ಉಪೋಷ್ಯ ಪೂಜಯಿತ್ವೈನಂ ಶಿವೋಮಾಪ್ರಿಯಮಾತ್ಮಜಂ ।
ಲಭತೇಽಭೀಪ್ಸಿತಾನ್ಕಾಮಾನ್ಪುತ್ರಪೌತ್ರಾದಿಸಂತತೀಃ ॥ ೬ ॥

ಶ್ರಾವಣೇ ಶುಕ್ಲಷಷ್ಠ್ಯಾಂ ತು ಶರಜನ್ಮಾನಮರ್ಚಯೇತ್ ।
ಉಪಚಾರೈಃ ಷೋಡಶಭಿರ್ಭಕ್ತ್ಯಾ ಪರಮಯಾನ್ವಿತಃ ॥ ೭ ॥

ಲಭತೇಭೀಪ್ಸಿತಾನರ್ಥಾನ್ಷಣ್ಮುಖಸ್ಯ ಪ್ರಸಾದತಃ ।
ಭಾದ್ರಮಾಸೇ ಕೃಷ್ಣಷಷ್ಠ್ಯಾಂ ಲಲಿತಾವ್ರತಮುಚ್ಯತೇ ॥ ೮ ॥

---

ವೈಶಾಖ ಶುಕ್ಲ ಷಷ್ಠಿಯ ದಿನದಲ್ಲಿ ಕಾರ್ತಿಕನನ್ನು ಪೂಜಿಸಿದರೆ ತಾಯಿ ಯಿಂದಾಗುವ ಸೌಖ್ಯವು ಲಭಿಸುವುದು ಸಂದೇಹವಿಲ್ಲ.

ಜ್ಯೇಷ್ಠ ಶುಕ್ಲ ಷಷ್ಠಿಯ ದಿನದಲ್ಲಿ ವಿಧಿವತ್ತಾಗಿ ಸೂರ್ಯನನ್ನು ಪೂಜಿಸಿದರೆ ಅವನ ಅನುಗ್ರಹದಿಂದ ಅಪೇಕ್ಷಿಸಿದ ಫಲಗಳೆಲ್ಲವೂ ಲಭಿಸುವುದು ಸಂದೇಹವಿಲ್ಲ.

ಆಷಾಢ ಶುಕ್ಲ ಷಷ್ಠಿಯ ದಿನದಲ್ಲಿ ಉತ್ಕೃಷ್ಟ ಸ್ಕಂದವ್ರತವು ಆಚರಿಸಲ್ಪಡಬೇಕು. ರುದ್ರಪಾರ್ವತೀಯರ ಪ್ರಿಯಕುಮಾರನಾದ ಈ ಸ್ಕಂದಸ್ವಾಮಿಯನ್ನು ಆ ದಿನ ಉಪವಾಸದಿಂದ ಪೂಜಿಸಿದರೆ ಪುತ್ರಪೌತ್ರಾದಿ ಸಂತತಿ ಮತ್ತು ಅಪೇಕ್ಷಿಸಿದ ಅಭೀಷ್ಟಗಳೆಲ್ಲವೂ ಲಭಿಸುವುವು

೭-೧೦. ಶ್ರಾವಣ ಶುಕ್ಲ ಷಷ್ಠಿಯ ದಿನದಲ್ಲಿ ಉತ್ತಮಭಕ್ತಿಯುಕ್ತನಾಗಿ ಶರಜನ್ಮನಾದ ಷಣ್ಮುಖಸ್ವಾಮಿಯನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು ಇದರಿಂದ ಷಣ್ಮುಖನ ಅನುಗ್ರಹವುಂಟಾಗಿ ಇಷ್ಟಾರ್ಥಗಳೆಲ್ಲವೂ ಲಭಿಸುವುವು.

ಭಾದ್ರಪದಮಾಸದ ಕೃಷ್ಣ ಷಷ್ಠಿಯ ದಿನದಲ್ಲಿ ಲಲಿತಾವ್ರತವು ವಿಹಿತವಾಗಿದೆ.

ಪ್ರಾತಃ ಸ್ನಾತ್ವಾ ವಿಧಾನೇನ ನಾರೀ ಶುಕ್ಲಾಂಬರಾವೃತಾ ।
ಶುಕ್ಲಮಾಲ್ಯಧರಾ ವಾಪಿ ನದ್ಯಾಃ ಸಂಗಮವಾಲುಕಾನ್ ॥ ೯ ॥

ಗೃಹೀತ್ವಾ ವಂಶಪಾತ್ರೇ ತು ಧೃತ್ವಾ ಪಿಂಡಾಕೃತಿಂ ಚ ತಾಂ ।
ಪಂಚಧಾ ಲಲಿತಾ ತತ್ರ ಧ್ಯಾಯೇದ್ವನವಿಲಾಸಿನೀಂ ॥ ೧೦ ॥

ಪಂಕಜಂ ಕರವೀರಂ ಚ ನೇಪಾಲೀಂ ಮಾಲತೀಂ ತಥಾ ।
ನೀಲೋತ್ಪಲಂ ಕೇತಕೀಂ ಚ ಸಂಗೃಹ್ಯ ತಗರಂ ತಥಾ ॥ ೧೧ ॥

ಏಕೈಕಾಷ್ಟಶತಂ ಗ್ರಾಹ್ಯಮಷ್ಟಾವಿಂಶತಿರೇವ ಚ ।
ಅಕ್ಷತಾಃ ಕಲಿಕಾ ಗೃಹ್ಯ ತಾಭಿರ್ದೇವೀಂ ಪ್ರಪೂಜಯೇತ್ ॥ ೧೨ ॥

ಪ್ರಾರ್ಥಯೇದಗ್ರತಃ ಸ್ಥಿತ್ವಾ ದೇವೀಂ ತಾಂ ಗಿರಿಶಪ್ರಿಯಾಂ ।
ಗಂಗಾದ್ವಾರೇ ಕುಶಾವರ್ತೇ ಬಿಲ್ವಕೇ ನೀಲಪರ್ವತೇ ॥ ೧೩ ॥

ವಿಧಾನ :— ನಾರಿಯು ಪ್ರಾತಃಕಾಲದಲ್ಲಿ ವಿಧಾನಾನುಸಾರವಾಗಿ ಸ್ನಾನ ಮಾಡಿ, ಬಿಳಿಯ ವಸ್ತ್ರವನ್ನುಟ್ಟು, ಬಿಳಿಯ ಮಾಲಿಕೆಯನ್ನು ಧರಿಸಿ. ನದಿಯ ಸಂಗಮಸ್ಥಾನದ ಮರಳನ್ನು ವಂಶಪಾತ್ರೆ(ಬಿದಿರಿನ ಬುಟ್ಟಿ)ಯಲ್ಲಿ ತೆಗೆದುಕೊಂಡು ಬಂದು ಅದನ್ನು ಐದು ಉಂಡೆಗಳನ್ನಾಗಿ ಮಾಡಿ ಅದರಲ್ಲಿ ವನವಿಲಾಸಿನಿಯಾದ ಲಲಿತೆಯನ್ನು ಧ್ಯಾನಿಸಬೇಕು.

೧೧-೧೨ ಕಮಲ, ಕರವೀರ, ನೇಪಾಲೀ, ಮಾಲತೀ, ಕನ್ನೈದಿಲೆ, ಕೇದಿಗೆ ಮತ್ತು ತಗರಪುಷ್ಪಗಳನ್ನು ಒಂದೊಂದನ್ನೂ ನೂರೆಂಟು ಅಥವಾ ಇಪ್ಪತ್ತೆಂಟರಂತೆ ಸಂಗ್ರಹಿಸಿ ಅವುಗಳಿಂದಲೂ, ಅಕ್ಷತೆ, ಕಲಿಕಾಗಳಿಂದಲೂ ಸಹ ದೇವಿಯನ್ನು ಪೂಜಿಸಬೇಕು.

೧೩-೨೧. ನಂತರ ಮುಂದೆ ನಿಂತು ಗಿರಿಶಪ್ರಿಯಳಾದ ಆ ದೇವಿಯನ್ನು ಪ್ರಾರ್ಥಿಸಬೇಕು.

ಸ್ನಾತ್ವಾ ಕನಖಲೇ ದೇವಿ ಹರಿಂ ಲಬ್ಧವತೀ ಪ್ರಿಯಂ ।
ಲಲಿತೇ ಶುಭಗೇ ದೇವಿ ಸುಖಸೌಭಾಗ್ಯದಾಯಿನಿ ॥ ೧೪ ॥

ಅನಂತಂ ದೇಹಿ ಸೌಭಾಗ್ಯಂ ಮಹ್ಯಂ ತುಭ್ಯಂ ನಮೋನಮಃ ।
ಮಂತ್ರೇಣಾನೇನ ಕುಸುಮೈಶ್ಚಂಪಕಸ್ಯ ಸುಶೋಭನೈಃ ॥ ೧೫ ॥

ಅಭ್ಯರ್ಚ್ಯ ವಿಧಿವತ್ತಸ್ಯಾ ನೈವೇದ್ಯಂ ಪುರತೋ ನ್ಯಸೇತ್ ।
ತ್ರಪುಷ್ಯೈರಪಿ ಕೂಷ್ಮಾಂಡ್ಯೈರ್ನಾರಲಿಕೇರೈಃ ಸುದಾಡಿಮೈಃ ॥ ೧೬ ॥

ಬೀಜಪೂರೈಃ ಸುತುಂಡೀರೈಃ ಕಾರವೇಲ್ಲೈಃ ಸಚಿರ್ಭಟೈಃ ।
ಫಲೈಸ್ತತ್ಕಾಲಸಂಭೂತೈಃ ಕೃತ್ವಾ ಶೋಭಾಂ ತದಗ್ರತಃ ॥ ೧೭ ॥

ವಿರೂಢಧಾನ್ಯಾಂಕುರಕೈಃ ಸುದೀಪಾವಲಿಭಿಸ್ತಥಾ ।
ಸಾರ್ಧಂ ಸಗಣಕೈರ್ಧೂಪೈಃ ಸೌಹಾಲಕಕರಂಜಕೈಃ ॥ ೧೮ ॥

ದೇವಿಯೇ ! "ನೀನು ಗಂಗೆಗೆ ದ್ವಾರಭೂತವಾದ ಕುಶ ಮತ್ತು ಬಿಲ್ವ ವೃಕ್ಷಗಳಿಂದಾವೃತವಾದ, ನೀಲಪರ್ವತದಲ್ಲಿನ ಕನಖಲತೀರ್ಥದಲ್ಲಿ ಸ್ನಾನಮಾಡಿ ಹರಿಯನ್ನು ಪತಿಯನ್ನಾಗಿ ಪಡೆದಿರುವ ಶೋಭನಳು, ಸುಖಸೌಭಾಗ್ಯ ದಾಯಕಳೂ ಆದ ಲಲಿತಾದೇವಿಯೇ, ನಿನಗೆ ನಮಸ್ಕಾರ, ನಮಸ್ಕಾರ. ನನಗೆ ಅನಂತಸೌಭಾಗ್ಯವನ್ನು ದಯಪಾಲಿಸು" ಎಂಬೀ ಮಂತ್ರದಿಂದ ಒಳ್ಳೆಯ ಸಂಪಿಗೇಹೂವುಗಳನ್ನು ಪೂಜಿಸಿ ಆ ದೇವಿಯ ಮುಂದೆ ವಿಹಿತ ನೈವೇದ್ಯವನ್ನಿಡ ಬೇಕು.

ಸೌತೇಕಾಯಿ, ಕುಂಬಳಕಾಯಿ, ತೆಂಗಿನಕಾಯಿ, ದಾಳಿಂಬರೆ, ಮಾದಾಳ ತೊಂಡೇಹಣ್ಣು, ಹಾಗಲಕಾಯಿ, ಸಚಿರ್ಭಟಫಲ ಇವುಗಳಿಂದಲೂ, ಆಕಾಲದಲ್ಲಿ ಬೆಳೆಯುವ ವಿರೂಢಧಾನ್ಯಾಂಕುರಗಳಿಂದಲೂ, ಸಾಲುದೀಪಗಳಿಂದಲೂ, ಸೌಹಾ ಲಕ, ಕರಂಜಕ, ಹಿಪ್ಪೆಹೂವು ಮುಂತಾದ ಸುಗಂಧದ್ರವ್ಯಗಳಿಂದಲೂ ದೇವಿಯ

ಗುಡಪುಷ್ಪೈಃ ಕರ್ಣವೇಷ್ಟೈರ್ಮೋದಕೈರುಪಮೋದಕೈಃ ।
ಬಹುಪ್ರಕಾರೈರ್ನೈವೇದ್ಯೈರ್ಯಥಾವಿಭವಸಾರತಃ ॥ ೧೯ ॥

ಏವಮಭ್ಯರ್ಚ್ಯ ವಿಧಿವದ್ರಾತ್ರೌ ಜಾಗರಣೋತ್ಸವಂ ।
ಗೀತವಾದ್ಯನಟೈರ್ನೃತ್ಯೈಃ ಪ್ರೇಕ್ಷಣೀಯೈರನೇಕಧಾ ॥ ೨೦ ॥

ಸಖೀಭಿಃ ಸಹಿತಾ ಸಾಧ್ವೀ ತಾಂ ರಾತ್ರಿಂ ಪ್ರಸಭಂ ನಯೇತ್ ।
ನ ಚ ಸಂಮ್ಮೀಲಯೇನ್ನೇತ್ರೇ ನಾರೀ ಯಾಮಚತುಷ್ಟಯಂ ॥ ೨೧ ॥

ದುರ್ಭಗಾ ದುಷ್ಕೃತಾ ವಂಧ್ಯಾ ನೇತ್ರಸಂಮೀಲನಾದ್ಭವೇತ್ ।
ಏವಂ ಜಾಗರಣಂ ಕೃತ್ವಾ ಸಪ್ತಮ್ಯಾಂ ಸರಿತಂ ನಯೇತ್ ॥ ೨೨ ॥

ಗಂಧಪುಷ್ಪೈಸ್ತಥಾಭ್ಯರ್ಚ್ಯ ಗೀತವಾದ್ಯಪುರಸ್ಸರೈಃ ।
ತಚ್ಚ ದದ್ಯಾದ್ದ್ವಿಜೇಂದ್ರಾಯ ನೈವೇದ್ಯಾದಿ ದ್ವಿಜೋತ್ತಮ ॥ ೨೩ ॥

---

ಮುಂಭಾಗದಲ್ಲಿ ಅಲಂಕಾರಮಾಡಿ ತನ್ನ ವಿಭವಾನುಸಾರವಾಗಿ ಕಡುಬು ಮುಂತಾದ ನಾನಾವಿಧ ನೈವೇದ್ಯಗಳಿಂದ ದೇವಿಯನ್ನು ಪೂಜಿಸಿ, ರಾತ್ರಿಯಲ್ಲಿ ಗಾನ, ವಾದ್ಯ, ನರ್ತನ, ನಾನಾವಿಧ ಪ್ರೇಕ್ಷಣೀಯವಸ್ತುದರ್ಶನ ಇವುಗಳಿಂದ ಸಖೀಜನಸಹಿತವಾಗಿ ಜಾಗರಣೋತ್ಸವವನ್ನಾಚರಿಸಿ, ಆ ರಾತ್ರಿಯೆಲ್ಲಾ ಎಚ್ಚರದಿಂದಲೇ ಕಳೆಯಬೇಕು. ನಾರಿಯು ನಾಲ್ಕುಯಾಮಗಳಲ್ಲಿಯೂ ಕಣ್ಣು ಮುಚ್ಚಕೂಡದು.

೨೨-೨೩. ಕಣ್ಣುಮುಚ್ಚಿದರೆ ಆ ನಾರಿಯು ದುರ್ಭಗಳೂ, ಪಾಪಿಯೂ ಗೊಡ್ಡಿಯೂ ಆಗುವಳು. ಈ ರೀತಿ ರಾತ್ರಿಯೆಲ್ಲಾ ಜಾಗರಣೆಮಾಡಿ ಸಪ್ತಮಿಯ ದಿನ ಬೆಳಗ್ಗೆ ನೈವೇದ್ಯಾದಿಸಹಿತವಾಗಿ ಲಲಿತಾದೇವಿಯನ್ನು ನದಿಯಬಳಿಗೆ ಒಯ್ಯಬೇಕು. ಅಲ್ಲಿ ಗೀತವಾದ್ಯಾದಿಪೂರ್ವಕವಾಗಿ ಗಂಧಪುಷ್ಪಾಕ್ಷತೆಗಳಿಂದ ಪುನಃ ಪೂಜೆಮಾಡಿ ಆ ನೈವೇದ್ಯಾದಿಗಳನ್ನು ದ್ವಿಜೇಂದ್ರನಿಗೆ ದಾನಮಾಡಬೇಕು.

ಸ್ನಾತ್ವಾ ಗೃಹಂ ಸಮಾಗತ್ಯ ಹುತ್ವಾ ವೈಶ್ವಾನರಂ ತತಃ ।
ದೇವಾನ್ ಪಿತೃಮನುಷ್ಯಾಂಶ್ಚ ಪೂಜಯಿತ್ವಾ ಸುವಾಸಿನೀಃ ॥ ೨೪ ॥

ಕನ್ಯಕಾಶ್ಚೈವ ಸಂಭೋಜ್ಯ ಬ್ರಾಹ್ಮಣಾನ್ದಶ ಪಂಚ ಚ ।
ಭಕ್ಷ್ಯಭೋಜ್ಯೈರ್ಬಹುವಿಧೈರ್ದತ್ವಾ ದಾನಾನಿ ಭೂರಿಶಃ ॥ ೨೫ ॥

ಲಲಿತಾ ಮೇಸ್ತು ಸುಪ್ರೀತಾ ಇತ್ಯುಕ್ತ್ವಾ ತಾನ್ವಿಸರ್ಜಯೇತ್ ।
ಯಃ ಕಶ್ಚಿದಾಚರೇದೇತದ್ವ್ರತಂ ಸೌಭಾಗ್ಯದಂ ಪರಂ ॥ ೨೬ ॥

ನರೋ ವಾ ಯದಿ ವಾ ನಾರೀ ತಸ್ಯ ಪುಣ್ಯಫಲಂ ಶೃಣು ।
ಯದ್ವ್ರತೈಶ್ಚ ತಪೋಭಿಶ್ಚ ದಾನೈರ್ವಾ ನಿಯಮೈರಪಿ ॥ ೨೭ ॥

೨೪-೨೫. ಬಳಿಕ ಸ್ನಾನಮಾಡಿ ಮನೆಗೆ ಬಂದು ಬೆಂಕಿಹೊತ್ತಿಸಿ ಅಡಿಗೆ ಮಾಡಿ ದೇವ ಪಿತೃ ಮನುಷ್ಯರನ್ನು ಪೂಜಿಸಿ, ಸುವಾಸಿನೀಕನ್ಯೆಯರನ್ನೂ ಹದಿನೈದು ಜನ ಬ್ರಾಹ್ಮಣರನ್ನೂ ಬಹುವಿಧಭಕ್ಷ್ಯಭೋಜ್ಯಗಳಿಂದ ಭೋಜನ ಮಾಡಿಸಿ ಬಹುವಾಗಿ ದಾನಮಾಡಬೇಕು.

೨೬-೨೯. ಲಲಿತಾದೇವಿಯು ನನಗೆ ಪ್ರಸನ್ನಳಾಗಬೇಕೆಂದು ಪ್ರಾರ್ಥಿಸಿ ವಿಸರ್ಜನೆಮಾಡಬೇಕು.

ಪುರುಷ ಅಥವಾ ಸ್ತ್ರೀಯು ಯಾರಾದರೂ ಸರಿಯೆ ಸೌಭಾಗ್ಯಪ್ರದವಾದ ಈ ಉತ್ತಮವ್ರತವನ್ನಾಚರಿಸಿದರೆ ಅವನಿಗೆ ಬರುವ ಪುಣ್ಯಫಲಗಳನ್ನು ಹೇಳುವೆನು ಕೇಳು.

ನಾರದನೇ ! ಲೋಕದಲ್ಲಿ ಪ್ರಸಿದ್ಧವಾದ ವ್ರತ, ತಪಸ್ಸು, ದಾನ ಮತ್ತು ನಿಯಮಗಳೆಲ್ಲದರಿಂದಲೂ ಉಂಟಾಗುವ ಫಲವು ಇದೊಂದರಿಂದಲೇ ಲಭಿಸುವುದು. ಹೆಚ್ಚು ಹೇಳಿದುದರಿಂದೇನು ! ಈ ಲಲಿತಾರಾಧಕನು ಇಲ್ಲಿ ಭೋಗ

ತದೇತೇನೇಹ ಲಭ್ಯೇತ ಕಿಂ ಬಹೂಕ್ತೇನ ನಾರದ ।
ಮೃತೇರನಂತರಂ ಪ್ರಾಪ್ಯ ಶಿವಲೋಕಂ ಸನಾತನಂ || ೨೮ ||

ಮೋದತೇ ಲಲಿತಾದೇವ್ಯಾ ಶೈವೇ ವೈ ಸಖಿವಚ್ಚಿರಂ ।
ನಭಸ್ಯೇ ಮಾಸಿ ಯಾ ಶುಕ್ಲಾ ಷಷ್ಠೀ ಸಾ ಚಂದನಾಹ್ವಯಾ || ೨೯ ||

ತಸ್ಯಾಂ ದೇವೀಂ ಸಮಭ್ಯರ್ಚ್ಯ ಲಭತೇ ತತ್ಸಲೋಕತಾಂ ।
ರೋಹಿಣೀಪಾತಭೌಮೈಸ್ತು ಸಂಯುತಾ ಕಪಿಲಾ ಭವೇತ್ || ೩೦ ||

ತಸ್ಯಾಂ ರವಿಂ ಸಮಭ್ಯರ್ಚ್ಯ ವ್ರತೀ ನಿಯಮತತ್ಪರಃ ।
ಲಭತೇ ವಾಂಛಿತಾನ್ಕಾಮಾನ್ ಭಾಸ್ಕರಸ್ಯ ಪ್ರಸಾದತಃ || ೩೧ ||

ಅನ್ನದಾನಂ ಜಪೋ ಹೋಮಂ ಪಿತೃದೇವರ್ಷಿತರ್ಪಣಂ ।
ಸರ್ವಮೇವಾಕ್ಷಯಂ ಜ್ಞೇಯಂ ಕೃತಂ ದೇವರ್ಷಿಸತ್ತಮಃ || ೩೨ ||

---

ಗಳನ್ನನುಭವಿಸಿ ಸತ್ತಮೇಲೆ ಪುರಾತನವಾದ ಶಿವಲೋಕಕ್ಕೆ ಹೋಗಿ ಲಲಿತಾ ದೇವಿಯ ಸಖಿಯಂತೆ ಬಹುಕಾಲಪರ್ಯಂತವಾಗಿ ಸುಖಪಡುವನು.

ಭಾದ್ರಪದಮಾಸದ ಶುಕ್ಲಷಷ್ಠೀಗೆ ಚಂದನಷಷ್ಠಿಯೆಂದು ಹೆಸರು.

೩೦. ಆ ದಿನದಲ್ಲಿ ದೇವಿಯನ್ನು ಪೂಜಿಸಿದರೆ ದೇವೀಲೋಕನಿವಾಸವು ಸಿಕ್ಕುವುದು. ಆ ಷಷ್ಠಿಯು ರೋಹಿಣೀನಕ್ಷತ್ರ, ವ್ಯತೀಪಾತ, ಮಂಗಳವಾರ ಗಳಿಂದ ಯುಕ್ತವಾದರೆ ಅದು ಕಪಿಲಾಷಷ್ಠಿಯೆಂದು ವಿಹಿತವಾಗಿದೆ.

೩೧. ಆ ದಿನದಲ್ಲಿ ವ್ರತಿಯು ನಿಯಮದಿಂದ ಸೂರ್ಯನನ್ನು ಪೂಜಿಸಿದರೆ ಅವನ ಅನುಗ್ರಹದಿಂದ ಇಷ್ಟಾರ್ಥಗಳು ಲಭಿಸುವುವು.

೩೨. ಆ ದಿನದಲ್ಲಿ ಮಾಡಿದ ಅನ್ನದಾನ, ಜಪ, ಹೋಮ, ಪಿತೃದೇವ ಋಷಿತರ್ಪಣ ಮುಂತಾದುವೆಲ್ಲವೂ ಅಕ್ಷಯವಾಗುವುವು ಎಂದು ತಿಳಿಯಬೇಕು.

ಕಪಿಲಾಂ ಧೇನುಮಭ್ಯರ್ಚ್ಯ ವಸ್ತ್ರಮಾಲ್ಯಾನುಲೇಪನೈಃ ।
ಪ್ರದದ್ಯಾದ್ವೇದವಿದುಷೇ ದ್ವಾದಶಾತ್ಮಪ್ರತುಷ್ಟಯೇ ॥ ೩೩ ॥

ಅಥೇಷುಶುಕ್ಲಷಷ್ಠ್ಯಾಂ ತು ಪೂಜ್ಯಾ ಕಾತ್ಯಾಯಿನೀ ದ್ವಿಜ ।
ಗಂಧಾದ್ಯೈರ್ಮಂಗಲದ್ರವ್ಯೈಃ ನೈವೇದ್ಯೈರ್ವಿವಿಧೈಸ್ತಥಾ ॥ ೩೪ ॥

ತತಃ ಕ್ಷಮಾಪ್ಯ ದೇವೇಶೀಂ ಪ್ರಣಿಪತ್ಯ ವಿಸರ್ಜಯೇತ್ ।
ಪೂಜ್ಯಾತ್ರ ಸೈಕತೀ ಮೂರ್ತಿ ರ್ಯದ್ವಾ ದ್ವಿಜಸತೀ ಮುದಾ ॥ ೩೫ ॥

ವಸ್ತ್ರಾಲಂಕರಣೈರ್ಭವ್ಯೈಃ ಕಾತ್ಯಾಯಿನ್ಯಾಃ ಪ್ರತುಷ್ಟಯೇ ।
ಕನ್ಯಾ ವರಂ ಪ್ರಾಪ್ನುಯಾಚ್ಚ ವಾಂಛಿತಂ ಪುತ್ರಮಂಗನಾ ॥ ೩೬ ॥

ಕಾತ್ಯಾಯಿನೀಪ್ರಸಾದಾದ್ವೈ ನಾತ್ರ ಕಾರ್ಯಾ ವಿಚಾರಣಾ ।
ಕಾರ್ತಿಕೇ ಶುಕ್ಲಷಷ್ಠ್ಯಾಂ ತು ಷಣ್ಮುಖೇನ ಮಹಾತ್ಮನಾ ॥ ೩೭ ॥

---

೩೩ ಕಪಿಲಗೋವನ್ನು ವಸ್ತ್ರ. ಮಾಲ್ಯ, ಗಂಧಗಳಿಂದ ಪೂಜಿಸಿ ಅದನ್ನು ಆ ದಿನದಲ್ಲಿ ವೇದವಿದ್ವಾಂಸನಿಗೆ ಸೂರ್ಯಪ್ರೀತ್ಯರ್ಥವಾಗಿ ದಾನಮಾಡಬೇಕು.

೩೪. ದ್ವಿಜನೇ! ಆಶ್ವಯುಜ ಶುಕ್ಲ ಷಷ್ಠಿಯ ದಿನದಲ್ಲಿ ಗಂಧಾದಿ ಮಂಗಳದ್ರವ್ಯಗಳಿಂದಲೂ ನಾನಾವಿಧ ನೈವೇದ್ಯಗಳಿಂದಲೂ ಕಾತ್ಯಾಯಿನೀ ದೇವಿಯನ್ನು ಪೂಜಿಸಬೇಕು.

೩೫-೩೭. ತರುವಾಯ ದೇವಿಯನ್ನು ಕ್ಷಮಾಪಣೆಬೇಡಿ ನಮಸ್ಕರಿಸಿ ವಿಸರ್ಜನೆಮಾಡಬೇಕು. ಈ ವ್ರತದಲ್ಲಿ ಮರಳಿನ ಮೂರ್ತಿಯನ್ನಾಗಲಿ, ಇಲ್ಲವೆ ದ್ವಿಜಪತ್ನಿಯನ್ನಾಗಲಿ ಕಾತ್ಯಾಯಿನೀದೇವಿಯ ಪ್ರೀತ್ಯರ್ಥವಾಗಿ ಮಂಗಳಕರಗಳಾದ ವಸ್ತ್ರಾಭರಣಗಳಿಂದ ಪೂಜಿಸಬೇಕು. ಈ ರೀತಿ ಪೂಜೆ ಮಾಡಿದರೆ ಕಾತ್ಯಾಯಿನೀದೇವಿಯ ಅನುಗ್ರಹದಿಂದ ಕನ್ಯೆಯು ವರನನ್ನೂ ಅನಪತ್ಯಳಾದ ನಾರಿಯು ಮಗನನ್ನೂ ಪಡೆಯುವಳು, ಸಂದೇಹವಿಲ್ಲ.

**ದೇವಸೇನಾ ಮಹಾಭಾಗಾ ಲಬ್ಧಾ ಸರ್ವಸುರಾರ್ಪಿತಾ |**
**ಅತಸ್ತಸ್ಯಾಂ ಸುರಶ್ರೇಷ್ಠಾಂ ದೇವಸೇನಾಂ ಚ ಷಣ್ಮುಖಂ || ೩೮ ||**

**ಸಂಪೂಜ್ಯ ನಿಖಿಲೈರೇವ ಉಪಚಾರೈರ್ಮನೋಹರೈಃ |**
**ಪ್ರಾಪ್ನುಯಾದತುಲಾಂ ಸಿದ್ಧಿಂ ಮನೋಭೀಷ್ಟಾಂ ದ್ವಿಜೋತ್ತಮ || ೩೯ ||**

**ಅತ್ರೈವ ವಹ್ನಿಪೂಜೋಕ್ತಾ ತಾಂ ಚ ಸಮ್ಯಕ್ಸಮಾಚರೇತ್ |**
**ವಿವಿಧದ್ರವ್ಯಹೋಮೈಶ್ಚ ವಹ್ನಿಪೂಜಾಪುರಸ್ಸರಂ || ೪೦ ||**

**ಮಾರ್ಗಶೀರ್ಷೇ ಶುಕ್ಲಷಷ್ಠ್ಯಾಂ ನಿಹತಸ್ತಾರಕಾಸುರಃ |**
**ಸ್ಕಂದೇನ ಸತ್ಕೃತಿಃ ಪ್ರಾಪ್ತಾ ಬ್ರಹ್ಮಾದ್ಯೈಃ ಪರಿಕಲ್ಪಿತಾ || ೪೧ ||**

**ತತೋಽಸ್ಯಾಂ ಪೂಜಯೇತ್ಸ್ಕಂದಂ ಗಂಧಪುಷ್ಪಾಕ್ಷತೈಃ ಫಲೈಃ |**
**ವಸ್ತ್ರೈರಾಭೂಷಣೈಶ್ಚಾಪಿ ನೈವೇದ್ಯೈರ್ವಿವಿಧೈಸ್ತಥಾ || ೪೨ ||**

---

ಕಾರ್ತಿಕ ಶುಕ್ಲ ಷಷ್ಠಿಯ ದಿನದಲ್ಲಿ ಮಹಾತ್ಮನಾದ ಷಣ್ಮುಖನಿಗೆ ಸಕಲ ಸುರಪೂಜಿತಳಾದ ಧನ್ಯದೇವಸೇನೆಯು ಲಭಿಸಿದಳು. ಆದಕಾರಣ ದ್ವಿಜೋತ್ತಮನೇ! ಆ ದಿವಸ ಸುರಶ್ರೇಷ್ಠಳಾದ ದೇವಸೇನೆ ಮತ್ತು ಷಣ್ಮುಖರನ್ನು ಸಮಸ್ತ ದಿವ್ಯೋಪಚಾರಗಳಿಂದ ಪೂಜಿಸಿದರೆ ಅಸದೃಶಮನೋಭೀಷ್ಟಸಿದ್ಧಿಯು ಉಂಟಾಗುವುದು.

೪೦. ಈ ದಿನದಲ್ಲಿಯೇ ವಹ್ನಿಪೂಜೆಯೂ ವಿಹಿತವಾಗಿದೆ. ಅದನ್ನು ಅಗ್ನಿಪೂಜೆಯ ಪೂರ್ವಕವಾಗಿ ನಾನಾವಿಧ ದ್ರವ್ಯಹೋಮಗಳಿಂದ ಚೆನ್ನಾಗಿ ಆಚರಿಸಬೇಕು.

೪೧. ಮಾರ್ಗಶೀರ್ಷ ಶುಕ್ಲ ಷಷ್ಠಿಯ ದಿನದಲ್ಲಿ ತಾರಕಾಸುರನು ಕೊಲ್ಲಲ್ಪಟ್ಟನು. ಸ್ಕಂದನಿಗೆ ಬ್ರಹ್ಮಾದಿಗಳಿಂದ ಸತ್ಕಾರವು ಲಭಿಸಿತು

೪೨. ಆದಕಾರಣ ಈ ಷಷ್ಠಿಯಲ್ಲಿ ಗಂಧ, ಪುಷ್ಪ, ಅಕ್ಷತೆ, ಫಲ, ವಸ್ತ್ರಾಭರಣಗಳಿಂದಲೂ ನಾನಾವಿಧ ನೈವೇದ್ಯಗಳಿಂದಲೂ ಸ್ಕಂದದೇವನನ್ನು ಪೂಜಿಸಬೇಕು.

ಶನಿವಾರೇಣ ಸಂಯುಕ್ತಾ ತಥಾ ಶತಭಿಷಾನ್ವಿತಾ ।
ವಿಷ್ಣುರೂಪೀ ಜಗತ್ತ್ರಾತಾ ಪ್ರಾದುರ್ಭೂತಃ ಸನಾತನಃ ॥ ೪೩ ॥

ಸ ತಸ್ಮಾತ್ಪೂಜನೀಯೋಽಸ್ಯಾಂ ದ್ರವ್ಯೈರ್ಗಂಧಪುರಸ್ಸರೈಃ ।
ನೈವೇದ್ಯೈರ್ವಸ್ತ್ರಭೂಷಾದ್ಯೈಃ ಸರ್ವಸೌಖ್ಯಮಭೀಪ್ಸುಭಿಃ ॥ ೪೪ ॥

ಮಾಘಮಾಸೇ ಸಿತಾ ಷಷ್ಠೀ ವಾರುಣಾಹ್ವಾ ಸ್ಮೃತಾ ತು ಸಾ ।
ತಸ್ಯಾಂ ವರುಣಮಭ್ಯರ್ಚ್ಯೇದ್ವಿಷ್ಣುರೂಪಂ ಸನಾತನಂ ॥ ೪೫ ॥

ರಕ್ತೈರ್ಗಂಧಾಂಶುಕೈಃ ಪುಷ್ಪೈರ್ನೈವೇದ್ಯೈರ್ಧೂಪದೀಪಕೈಃ ।
ಏವಮಭ್ಯರ್ಚ್ಯ ವಿಧಿವದ್ಯದ್ಯದಾಭಿಲಷೇನ್ನರಃ ॥ ೪೬ ॥

ತತ್ತತ್ಸರ್ವಂ ಫಲತೋ ಲಬ್ಧ್ವಾ ಮೋದತೇ ತತ್ಪ್ರಸಾದತಃ ।
ಫಾಲ್ಗುನೇ ಶುಕ್ಲಷಷ್ಠ್ಯಾಂ ತು ದೇವಂ ಪಶುಪತಿಂ ದ್ವಿಜ ॥ ೪೭ ॥

೪೩-೪೪. ಭಾನುವಾರ ಮತ್ತು ಶತಭಿಷಾನಕ್ಷತ್ರಸಹಿತವಾದ ಈ ಷಷ್ಠಿಯಲ್ಲಿಯೇ ಜಗದ್ರಕ್ಷಕನಾದ ಪರಮಾತ್ಮನು ವಿಷ್ಣುರೂಪಿಯಾಗಿ ಆವಿರ್ಭವಿಸಿದನು.

ಆದಕಾರಣ ಆ ಪರಮಾತ್ಮನನ್ನು ಆ ದಿನದಲ್ಲಿಯೇ ಸಕಲಸೌಖ್ಯವನ್ನು ಬಯಸುವ ಜನರು ಗಂಧಾದಿದ್ರವ್ಯ, ವಸ್ತ್ರಾಭರಣ, ನೈವೇದ್ಯಗಳನ್ನರ್ಪಿಸಿ ಪೂಜಿಸಬೇಕು

೪೫-೪೭. ಮಾಘಶುಕ್ಲಷಷ್ಠಿಯು ವಾರುಣಷಷ್ಠಿಯು ಎಂದು ವಿಹಿತವಾಗಿದೆ. ಆ ದಿನದಲ್ಲಿ ಸನಾತನವಿಷ್ಣುರೂಪಿಯಾದ ವರುಣನನ್ನು ಕೆಂಪುಗಂಧವಸ್ತ್ರಗಳಿಂದಲೂ, ಧೂಪದೀಪನೈವೇದ್ಯಗಳಿಂದಲೂ ಪೂಜಿಸಬೇಕು. ಈರೀತಿ ವಿಧಿವತ್ತಾಗಿ ಪೂಜಿಸುವ ಮನುಷ್ಯನು ಅಪೇಕ್ಷಿಸಿದ ಫಲಗಳನ್ನೆಲ್ಲಾ ಹೊಂದಿ ಆ ದೇವನ ಅನುಗ್ರಹದಿಂದ ಸುಖಪಡುವನು.

ಫಾಲ್ಗುಣಶುಕ್ಲ ಷಷ್ಠಿಯದಿನದಲ್ಲಿ ಪಶುಪತಿದೇವನನ್ನು ವಿಧಾನೋಕ್ತಪ್ರಕಾರವಾಗಿ ಮಣ್ಣಿನಿಂದ ರಚಿಸಿ ಆವಾಹನೆ ಮುಂತಾದ ಉಪಚಾರಗಳಿಂದ

ನ್ಯಸ್ಯಾಂಗಂ ವಿಧಿನಾ ಕೃತ್ವಾ ಪೂಜಯೇದುಪಚಾರಕೈಃ ।
ಸಂಸ್ನಾಪ್ಯ ಶತರುದ್ರೇಣ ಪೃಥಕ್ಪಂಚಾಮೃತೈರ್ಜಲೈಃ ॥ ೪೮ ॥

ಗಂಧೈರಾಲಿಪ್ಯ ಸುಶ್ವೇತೈರಕ್ಷತೈಃ ಶ್ವೇತಪುಷ್ಪಕೈಃ ।
ಬಿಲ್ವಪತ್ರೈಶ್ಚ ಧತ್ತೂರಕುಸುಮೈಶ್ಚ ಫಲೈಸ್ತಥಾ ॥ ೪೯ ॥

ಸಂಪೂಜ್ಯ ನಾನಾನೈವೇದ್ಯೈರ್ನೀರಾಜ್ಯ ವಿಧಿವತ್ತತಃ ।
ಕ್ಷಮಾಪ್ಯ ಪ್ರಣಿಪತ್ಯೈನಂ ಕೈಲಾಸಾಯ ವಿಸರ್ಜಯೇತ್ ॥ ೫೦ ॥

ಏವಂ ಕೃತಶಿವಾರ್ಚಸ್ತು ನರೋ ನಾರ್ಯಥವಾ ಮುನೇ ।
ಇಹ ಭುಕ್ತ್ವಾ ವರಾನ್ಭೋಗಾನಂತೇ ಶಿವಗತಿರ್ಲಭೇತ್ ॥ ೫೧ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಚತುರ್ಥಪಾದೇ ದ್ವಾದಶಮಾಸಸ್ಥಿತಷಷ್ಠೀವ್ರತನಿರೂಪಣಂ
ನಾಮ ಪಂಚದಶಾಧಿಕಶತತಮೋಽಧ್ಯಾಯಃ

---

ಪೂಜಿಸಬೇಕು ಆ ಪಶುಪತಿದೇವನನ್ನು ಶತರುದ್ರವಿಧಿಯಿಂದ ಪಂಚಾಮೃತ, ಜಲಗಳಿಂದ ಪೃಥಕ್ಕಾಗಿ ಅಭಿಷೇಕಮಾಡಿ ಗಂಧವನ್ನು ಲೇಪಿಸಿ ಬಿಳಿಯ ಅಕ್ಷತೆ ಬಿಳಿಯಹೂವು, ಬಿಲ್ವಪತ್ರೆ, ದತ್ತೂರಿಹೂಗಳನ್ನರ್ಪಿಸಿ ಫಲ ಮುಂತಾದ ನೈವೇದ್ಯಗಳನ್ನು ಸಮರ್ಪಿಸಿ ನೀರಾಜನಾದಿಗಳಿಂದ ವಿಧಿವತ್ತಾಗಿ ಪೂಜಿಸಿ ಕ್ಷಮಾಪಣೆಬೇಡಿ ದೇವನನ್ನು ನಮಸ್ಕರಿಸಿ ಕೈಲಾಸಕ್ಕಾಗಿ ವಿಸರ್ಜನೆಮಾಡಬೇಕು.

೫೧. ಈರೀತಿ ಶಿವಾರ್ಚನೆಮಾಡಿದ ಪುರುಷ ಅಥವಾ ಸ್ತ್ರೀಯು ಇಲ್ಲಿ ಭೋಗಗಳನ್ನೆಲ್ಲಾ ಅನುಭವಿಸಿ ಕೊನೆಗೆ ಶಿವನನ್ನೇ ಹೊಂದುವರು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ
ಭಾಗದ ಚತುರ್ಥಪಾದದಲ್ಲಿ ಹನ್ನೆರಡು ತಿಂಗಳುಗಳ ಷಷ್ಠೀವ್ರತ
ನಿರೂಪಣೆಯೆಂಬ ನೂರುಹದಿನೈದನೆಯ
ಅಧ್ಯಾಯವು ಮುಗಿದುದು.

## ಷೋಡಶಾಧಿಕಶತತಮೋಽಧ್ಯಾಯಃ

### ಸನಾತನ ಉವಾಚ

ಶೃಣು ನಾರದ ವಕ್ಷ್ಯಾಮಿ ಸಪ್ತಮ್ಯಾಸ್ತೇ ವ್ರತಾನ್ಯಹಂ ।
ಯಾನಿ ಕೃತ್ವಾ ನರೋ ಭಕ್ತ್ಯಾ ಸೂರ್ಯಸಾಯುಜ್ಯಮಾಪ್ನುಯಾತ್ ॥೧॥

ಚೈತ್ರೇ ತು ಶುಕ್ಲಸಪ್ತಮ್ಯಾಂ ಬಹಿಃ ಸ್ನಾನಂ ಸಮಾಚರೇತ್ ।
ಸ್ಥಂಡಿಲೇ ಗೋಮಯಾಲಿಪ್ತೇ ಗೌರೇ ಮೃತ್ತಿಕಯಾಸ್ತೃತೇ ॥ ೨ ॥

ಲಿಖಿತ್ವಾಷ್ಟದಲಂ ಪದ್ಮಂ ಕರ್ಣಿಕಾಯಾಂ ವಿಭಾವಸುಃ ।
ವಿನ್ಯಸೇತ್ಪೂರ್ವಪತ್ರೇ ತು ದೇವೌ ದ್ವೌ ಕೃತಧಾತುಕೌ ॥ ೩ ॥

ಆಗ್ನೇಯೇ ಚ ನ್ಯಸೇತ್ಪತ್ರೇ ಗಂಧರ್ವೌ ಕೃತಕಾರಕೌ ।
ದಕ್ಷಿಣೇ ಚ ನ್ಯಸೇತ್ಪತ್ರೇ ತಥೈವ ರಾಕ್ಷಸದ್ವಯಂ ॥ ೪ ॥

---

### ನೂರುಹದಿನಾರನೆಯ ಅಧ್ಯಾಯವು

೧. ಸನಾತನನು ಹೇಳಿದನು :—ನಾರದನೇ! ಯಾವ ವ್ರತಗಳನ್ನು ಭಕ್ತಿಯಿಂದ ಮಾಡಿದರೆ ಮನುಷ್ಯನು ಸೂರ್ಯಸಾಯುಜ್ಯವನ್ನು ಹೊಂದುವನೋ ಅಂತಹ ಸಪ್ತಮೀವ್ರತಗಳನ್ನು ನಿನಗೆ ನಾನು ಹೇಳುವೆನು, ಕೇಳು.

೨-೫. ಚೈತ್ರ ಶುಕ್ಲ ಸಪ್ತಮೀದಿನದಲ್ಲಿ ಬಾಹ್ಯಜಲ ಎಂದರೆ ನದೀ ತಟಾಕಾದಿಗಳಲ್ಲಿ ಸ್ನಾನಮಾಡಬೇಕು. ಬಳಿಕ ನೆಲವನ್ನು ಗೋಮಯದಿಂದ ಸಾರಿಸಿ, ಪರಿಶುದ್ಧಮಣ್ಣನ್ನು ಹರಡಿ, ಅದರಮೇಲೆ ಅಕ್ಕಿಯ ಹಿಟ್ಟನ್ನು ಹಾಕಿ, ಅದರಲ್ಲಿ ಅಷ್ಟದಳ ಪದ್ಮವನ್ನು ಬರೆದು ಅದರ ಕೋಶದಲ್ಲಿ ಅಗ್ನಿಯನ್ನು ವಿನ್ಯಾಸ ಮಾಡಬೇಕು. ಅದರ ಪೂರ್ವದಿಕ್ಕಿನ ದಳದಲ್ಲಿ ಕೃತಧಾತುಕರಾದ ಇಬ್ಬರು ದೇವತೆಗಳನ್ನೂ, ಆಗ್ನೇಯ ದಿಕ್ಕಿನ ಪತ್ರದಲ್ಲಿ ಕೃತಕಾರಕರಾದ ಇಬ್ಬರು ಗಂಧರ್ವರನ್ನೂ ವಿನ್ಯಾಸಮಾಡಬೇಕು. ಹಾಗೆಯೇ ದಕ್ಷಿಣ ದಿಗ್ದಳದಲ್ಲಿ ಇಬ್ಬರು

**ಆಕೃತೌ ದ್ವೌ ನ್ಯಸೇತ್ಪತ್ರೇ ನೈಋರ್ತೇ ಮುನಿಸತ್ತಮ ।**
**ಕಾದ್ರವೇಯೌ ಮಹಾನಾಗೌ ಪಶ್ಚಿಮೇ ಕೃತಚಾರಕೌ ॥ ೫ ॥**

**ವಾಯವ್ಯೇ ಯಾತುಧಾನೌ ದ್ವೌ ಉತ್ತರೇ ಚ ಋಷಿದ್ವಯಂ ।**
**ಐಶಾನ್ಯೇ ವಿನ್ಯಸೇತ್ಪತ್ರೇ ಗೃಹಮೇಕಂ ದ್ವಿಜೋತ್ತಮ ॥ ೬ ॥**

**ತೇಷಾಂ ಸಂಪೂಜನಂ ಕಾರ್ಯಂ ಗಂಧಮಾಲ್ಯಾನುಲೇಪನೈಃ ।**
**ದೀಪೈರ್ಧೂಪೈಃ ಸನೈವೇದ್ಯೈಸ್ತಾಂಬೂಲಕ್ರಮುಕಾದಿಭಿಃ ॥ ೭ ॥**

**ಏವಂ ಸಂಪೂಜ್ಯ ಹೋಮಂ ತು ಘೃತೇನಾಷ್ಟಶತಂ ಚರೇತ್ ।**
**ಸೂರ್ಯಸ್ಯಾಷ್ಟಾಷ್ಟ ಚಾನ್ಯೇಷಾಂ ಪ್ರದದ್ಯಾದಾಹುತೀಃ ಕ್ರಮಾತ್ ॥ ೮ ॥**

**ನಾಮಮಂತ್ರೇಣ ವೇದ್ಯಾಂ ವಾ ತತಃ ಪೂರ್ಣಾಹುತಿಂ ದದೇತ್ ।**
**ದಕ್ಷಿಣಾ ಚ ತತೋ ದೇಯಾ ದ್ವಿಜೇಭ್ಯಃ ಶಕ್ತಿತೋ ದ್ವಿಜ ॥ ೯ ॥**

---

ರಾಕ್ಷಸರನ್ನೂ, ನೈಋತ್ಯದಿಕ್ಕಿನ ದಳದಲ್ಲಿ ಎರಡು ಆಕೃತಗಳನ್ನೂ, ಪಶ್ಚಿಮ ದಿಗ್ದಳದಲ್ಲಿ ಕೃತಚಾರರಾದ ಕಾದ್ರವೇಯರೆಂಬ ನರಾಕಾರದ ದೊಡ್ಡ ಹಾವುಗಳನ್ನೂ ವಿನ್ಯಾಸಮಾಡಬೇಕು.

೬. ವಾಯುವ್ಯಮೂಲೆಯ ದಳದಲ್ಲಿ ಇಬ್ಬರು ಯಾತುಧಾನರನ್ನೂ, ಉತ್ತರದಳದಲ್ಲಿ ಇಬ್ಬರು ಋಷಿಗಳನ್ನೂ, ಈಶಾನ್ಯಮೂಲೆಯ ಪತ್ರದಲ್ಲಿ ಒಂದು ಗ್ರಹವನ್ನೂ ಗುರ್ತಿಸಬೇಕು.

೭. ಬಳಿಕ ಗಂಧ, ಮಾಲ್ಯ, ಅನುಲೇಪನ, ದೀಪ, ಧೂಪ, ನೈವೇದ್ಯ, ಅಡಿಕೆ, ವೀಳೆಯದೆಲೆ ಮುಂತಾದುವುಗಳಿಂದ ಅವರನ್ನು ಪೂಜಿಸಬೇಕು

೮. ಈರೀತಿ ಪೂಜಿಸಿ, ಸೂರ್ಯನಿಗೆ ಎಂಟುನೂರು ಘೃತಹೋಮಗಳನ್ನು ಮಾಡಬೇಕು. ಇತರರಿಗೆ ಕ್ರಮವಾಗಿ ಎಂಟೆಂಟು ಹೋಮಗಳನ್ನು ಮಾಡಬೇಕು.

೯. ತರುವಾಯ ವೇದಿಕೆಯಲ್ಲಿ ನಾಮಮಂತ್ರದಿಂದ ಪೂರ್ಣಾಹುತಿಯನ್ನು ಕೊಡಬೇಕು. ದ್ವಿಜನೇ! ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ಸಹ ಕೊಡಬೇಕು.

ಏತತ್ಕೃತ್ವಾ ವಿಧಾನಂ ತು ಸರ್ವಸೌಖ್ಯಮವಾಪ್ನುಯಾತ್ ।
ದೇಹಾಂತೇ ಮಂಡಲಂ ಭಾನೋರ್ಭಿತ್ವಾ ಗಚ್ಛೇತ್ಪರಂ ಪದಂ ॥ ೧೦ ॥

ವೈಶಾಖಶುಕ್ಲಸಪ್ತಮ್ಯಾಂ ಜಹ್ನುನಾ ಜಾಹ್ನವೀ ಸ್ವಯಂ ।
ಕ್ರೋಧಾತ್ಪೀತಾ ಪುನಸ್ತ್ಯಕ್ತಾ ಕರ್ಣರಂಧ್ರಾತ್ತು ದಕ್ಷಿಣಾತ್ ॥ ೧೧ ॥

ತಾಂ ತತ್ರ ಪೂಜಯೇತ್ ಸ್ನಾತ್ವಾ ಪ್ರತ್ಯೂಷೇ ವಿಮಲೇ ಜಲೇ ।
ಗಂಧಪುಷ್ಪಾಕ್ಷತಾದ್ಯೈಶ್ಚ ಸರ್ವೈರೇವೋಪಚಾರಕೈಃ ॥ ೧೨ ॥

ತತೋ ಘಟಸಹಸ್ರಂ ತು ದೇಯಂ ಗಂಗಾವ್ರತೇಽತ್ರಿದಂ ।
ಭಕ್ತ್ಯಾ ಕೃತಂ ಸಪ್ತಕುಲಂ ನಯೇತ್ಸ್ವರ್ಗಮಸಂಶಯಃ ॥ ೧೩ ॥

ಕಮಲವ್ರತಮತ್ರೈವ ಪ್ರೋಕ್ತಂ ತದ್ವಿಧಿರುಚ್ಯತೇ ।
ತಿಲಮಾತ್ರಂ ತು ಸೌವರ್ಣಂ ವಿಧಾಯ ಕಮಲಂ ಶುಭಂ ॥ ೧೪ ॥

---

೧೦. ಈ ವ್ರತವಿಧಾನವನ್ನಾಚರಿಸಿದರೆ ಇಲ್ಲಿ ಸಕಲ ಸೌಖ್ಯಗಳನ್ನೂ ಹೊಂದಿ ಮರಣಾನಂತರ ಸೂರ್ಯಮಂಡಲವನ್ನು ಭೇದಿಸಿಕೊಂಡು ಉತ್ತಮ ಸ್ಥಾನವನ್ನು ಪಡೆಯುವನು.

೧೧-೧೨. ವೈಶಾಖ ಶುಕ್ಲ ಸಪ್ತಮೀದಿನದಲ್ಲಿ ಕ್ರೋಧಾವಿಷ್ಟ ಜಹ್ನುವಿನಿಂದ ಗಂಗೆಯು ಪಾನಮಾಡಲ್ಪಟ್ಟು ಪುನಃ ಬಲಕಿವಿಯರಂಧ್ರದಿಂದ ಬಿಡಲ್ಪಟ್ಟಿತು. ಆದಕಾರಣ ಆದಿನ ಉಷಃಕಾಲದಲ್ಲಿ ನಿರ್ಮಲ ಗಂಗಾಜಲದಲ್ಲಿ ಸ್ನಾನಮಾಡಿ ಗಂಧ, ಪುಷ್ಪ, ಅಕ್ಷತೆ ಮುಂತಾದ ಸರ್ವೋಪಚಾರಗಳಿಂದ ಆ ಗಂಗೆಯನ್ನು ಪೂಜಿಸಬೇಕು.

೧೩. ಅನಂತರ ಸಾವಿರಕಲಶಗಳನ್ನು ದಾನಮಾಡಬೇಕು. ಈರೀತಿ ಗಂಗಾವ್ರತವನ್ನು ಭಕ್ತಿಯಿಂದಾಚರಿಸಿದರೆ ಏಳುಕುಲಗಳಿಗೆ ಸ್ವರ್ಗಪ್ರಾಪ್ತಿಯಾಗುವುದು. ಸಂದೇಹವಿಲ್ಲ.

೧೪-೧೭. ಈದಿನದಲ್ಲಿ ಕಮಲವ್ರತವೂ ವಿಹಿತವಾಗಿದೆ. ಆದರ ವಿಧಾನವನ್ನು ಹೇಳುವೆನು—ತಿಲಪುಷ್ಪದಷ್ಟು ಬಂಗಾರದ ಕಮಲವನ್ನು ಮಾಡಿ

ವಸ್ತ್ರಯುಗ್ಮಾವೃತಂ ಕೃತ್ವಾ ಗಂಧಧೂಪಾದಿನಾರ್ಚಯೇತ್ |
ನಮಸ್ತೇ ಪದ್ಮಹಸ್ತಾಯ ನಮಸ್ತೇ ವಿಶ್ವಧಾರಿಣೇ || ೧೫ ||

ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಽಸ್ತು ತೇ |
ಇತಿ ಸಂಪ್ರಾರ್ಥ್ಯ ದೇವೇಶಂ ಸೂರ್ಯೇ ಚಾಸ್ತಮುಪಾಗತೇ || ೧೬ ||

ಸೋದಕುಂಭಂ ತು ತತ್ಪದ್ಮಂ ಕಪಿಲಾಂ ಚ ದ್ವಿಜೇಽರ್ಪಯೇತ್ |
ತದ್ದಿನೇ ತೂಪವಸ್ತವ್ಯಂ ಭೋಕ್ತವ್ಯಂ ಚ ಪರೇಽಹನಿ || ೧೭ ||

ಸಂಭೋಜ್ಯ ಬ್ರಾಹ್ಮಣಾನ್ಭಕ್ತ್ಯಾ ವ್ರತಸಾಕಲ್ಯಮಾಪ್ನುಯಾತ್ |
ನಿಂಬವ್ರತಂ ಚ ತತ್ರೈವ ತದ್ವಿಧಾನಂ ಶೃಣುಷ್ವ ಮೇ || ೧೮ ||

ನಿಂಬಪತ್ರೈಃ ಸ್ಮೃತಾ ಪೂಜಾ ಭಾಸ್ಕರಸ್ಯ ದ್ವಿಜೋತ್ತಮ |
ಖಖೋಲ್ಕಾಯೇತಿ ಮಂತ್ರೇಣ ಪ್ರಣವಾದ್ಯೇನ ನಾರದ || ೧೯ ||

---

ಎರಡುವಸ್ತ್ರಗಳನ್ನು ಹೊದಿಸಿ, ಗಂಧ ಅಪೂಪಾದಿಗಳಿಂದ ಅದನ್ನು ಪೂಜೆ ಮಾಡಬೇಕು.

'ಸೂರ್ಯನೇ! ಪದ್ಮ ಹಸ್ತನಾದ ನಿನಗೆ ನಮಸ್ಕಾರ! ಪ್ರಭಾಕರನೇ! ವಿಶ್ವಧಾರಕನಾದ ನಿನಗೆ ನಮಸ್ಕಾರ! ನಮಸ್ಕಾರ! ನಿನಗೆ ಪುನಃ ಪುನಃ ನಮಸ್ಕಾರ!' ಎಂದು ದೇವೇಶನಾದ ಸೂರ್ಯನನ್ನು ಪ್ರಾರ್ಥಿಸಿ, ಸೂರ್ಯಾಸ್ತಮಯವಾದ ನಂತರ ಉದಕುಂಭ ಸಹಿತವಾಗಿ ಆ ಪದ್ಮವನ್ನು ಮತ್ತು ಕಪಿಲ ಗೋವನ್ನೂ ಸಹ ಬ್ರಾಹ್ಮಣನಿಗೆ ಸಮರ್ಪಿಸಬೇಕು. ಆದಿನವೆಲ್ಲಾ ಉಪವಾಸ ವಿದ್ದು ಮುಂದಿನ ದಿನದಲ್ಲಿ ಭೋಜನಮಾಡಬೇಕು.

೧೮. ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ. ವ್ರತವನ್ನು ಪೂರ್ತಿಗೊಳಿಸಿ, ಫಲವನ್ನು ಹೊಂದಬೇಕು. ಆದಿನದಲ್ಲಿಯೇ ನಿಂಬ ವ್ರತವೂ ವಿಹಿತವಾಗಿದೆ. ಅದರ ವಿಧಾನವನ್ನು ಹೇಳುವೆನು; ಕೇಳು.

೧೯. ನಾರದನೇ! ಈ ವ್ರತದಲ್ಲಿ ಬೇವಿನ ಎಲೆಗಳಿಂದ ಸೂರ್ಯನ ಪೂಜೆಯು 'ಓಂ ಖಖೋಲ್ಕಾಯ' ಎಂಬ ಮಂತ್ರದಿಂದ ಕರ್ತವ್ಯವೆಂದು ವಿಹಿತವಾಗಿದೆ.

ನಿಂಬಪತ್ರಂ ತತೋಽಶ್ನೀಯಾಚ್ಛಯೀದ್ಭೂಮೌ ಚ ವಾಗ್ಯತಃ ।
ದ್ವಿಜಾನ್ ಪರೇಽಹ್ನಿ ಸಂಭೋಜ್ಯ ಸ್ವಯಂ ಭುಂಜೀತ ಬಂಧುಭಿಃ ॥ ೨೦ ॥

ನಿಂಬಪತ್ರವ್ರತಂ ಚೈತತ್ಕರ್ತೄಣಾಂ ಸರ್ವಸೌಖ್ಯದಂ ।
ಸಪ್ತಮೀ ಶರ್ಕರಾಖ್ಯೈಷಾ ಪ್ರೋಕ್ತಾ ತಚ್ಚಾಪಿ ಮೇ ಶೃಣು ॥ ೨೧ ॥

ಅಮೃತಂ ಪಿಬತೋ ಹಸ್ತಾತ್ಸೂರ್ಯಸ್ಯಾಮೃತಬಿಂದವಃ ।
ನಿಷ್ಪೇತುರ್ಭುವಿ ಜಾತ್ಸ್ನಾಃ ಶಾಲಿಮುದ್ಗಯವೇಕ್ಷವಃ ॥ ೨೨ ॥

ಶರ್ಕರಾ ಚ ತತಸ್ತಸ್ಮಾದಿಕ್ಷುಸಾರಾಮೃತೋಪಮಾ ।
ಇಷ್ಟಾ ರವೇರತಃ ಪುಣ್ಯಾ ಶರ್ಕರಾ ಹವ್ಯಕವ್ಯಯೋಃ ॥ ೨೩ ॥

---

೨೦-೨೧. ಹೀಗೆ ಪೂಜೆಮಾಡಿದನಂತರ ನಿಂಬಪತ್ರವನ್ನೇ ತಿಂದು ನೆಲದಮೇಲೆ ನಿಯಮದಿಂದ ಮಲಗಬೇಕು. ಮುಂದಿನ ದಿನ ಬ್ರಾಹ್ಮಣ ಭೋಜನಮಾಡಿಸಿ ತಾನು ಬಂಧುಗಳಸಹಿತವಾಗಿ ಭೋಜನಮಾಡಬೇಕು ಇದೇ ನಿಂಬವ್ರತವು. ಇದು ಆಚರಿಸುವವರಿಗೆ ಸಕಲಸೌಖ್ಯದಾಯಕವು. ಈದಿನವು 'ಶರ್ಕರಾಸಪ್ತಮೀ' ಎಂದು ಉಕ್ತವಾಗಿದೆ. ಅದರ ವಿಧಾನವನ್ನೂ ಹೇಳುವೆನು ಕೇಳು.

೨೨. ಸೂರ್ಯನು ಅಮೃತಪಾನಮಾಡುತ್ತಿರುವಾಗ ಅವನ ಕೈಯಿಂದ ಅಮೃತಬಿಂದುಗಳು ಭೂಮಿಯಲ್ಲಿ ಬಿದ್ದವು. ಅದರಿಂದ ಬತ್ತ, ಉದ್ದು, ಯವ, ಕಬ್ಬುಗಳು ಹುಟ್ಟಿದವು.

೨೩. ಅದರಿಂದ ಸಕ್ಕರೆಯು ಆಗುತ್ತದೆಯಾದಕಾರಣ ಅಮೃತಕ್ಕೆ ಸಮನಾದ ಕಬ್ಬಿನಸಾರಭೂತವಾದ ಸಕ್ಕರೆಯು ಸೂರ್ಯನಿಗೆ ಇಷ್ಟವಾದುದು. ಆದುದರಿಂದಲೇ ಸಕ್ಕರೆಯು ಹವ್ಯಕವ್ಯಗಳಲ್ಲಿ ಪುಣ್ಯಕರವಾದುದು.

ಶರ್ಕರಾ ಸಪ್ತಮೀ ಚೈವ ವಾಜಿಮೇಧಫಲಪ್ರದಾ ।
ಸರ್ವದುಃಖೋಪಶಮನೀ ಪುತ್ರಸಂತತಿವರ್ಧನೀ || ೨೪ ||

ಅಸ್ಯಾನು ಶರ್ಕರಾದಾನಂ ಶರ್ಕರಾಭೋಜನಂ ತಥಾ ।
ಕರ್ತವ್ಯಂ ಹಿ ಪ್ರಯತ್ನೇನ ವ್ರತಮೇತದ್ರವಿಪ್ರಿಯಂ || ೨೫ ||

ಯಃ ಕುರ್ಯಾತ್ಪರಯಾ ಭಕ್ತ್ಯಾ ಸ ವೈ ಸದ್ಗತಿಮಾಪ್ನುಯಾತ್ ।
ಜ್ಯೇಷ್ಠೇ ತು ಶುಕ್ಲಸಪ್ತಮ್ಯಾಂ ಜಾತ ಇಂದ್ರೋ ರವಿಃ ಸ್ವಯಂ || ೨೬ ||

ತಂ ಸಂಪೂಜ್ಯ ವಿಧಾನೇನ ಸೋಪವಾಸೋ ಜಿತೇಂದ್ರಿಯಃ ।
ಸ್ವರ್ಗತಿಂ ಲಭತೇ ವಿಪ್ರ ದೇವೇಂದ್ರಸ್ಯ ಪ್ರಸಾದತಃ || ೨೭ ||

ಆಷಾಢ ಶುಕ್ಲಸಪ್ತಮ್ಯಾಂ ವಿವಸ್ವಾನ್ನಾಮ ಭಾಸ್ಕರಃ ।
ಜಾತಸ್ತಂ ತತ್ರ ಸಂಪ್ರಾರ್ಚ್ಯ ಗಂಧಪುಷ್ಪಾದಿಭಿಃ ಪೃಥಕ್ || ೨೮ ||

---

೨೪. ಈ ಶರ್ಕರಾಸಪ್ತಮೀವ್ರತವು ಅಶ್ವಮೇಧಫಲದಾಯಕವು, ಸಕಲ ದುಃಖಗಳನ್ನೂ ನಾಶಪಡಿಸುವುದು, ಪುತ್ರಸಂತತಿಯನ್ನಭಿವೃದ್ಧಿಪಡಿಸುವುದೂ ಆಗಿದೆ.

೨೫. ಈ ವ್ರತದಲ್ಲಿ ಸಕ್ಕರೆಯ ದಾನ ಸಕ್ಕರೆಯ ಭೋಜನಗಳನ್ನು ಯತ್ನಪೂರ್ವಕವಾಗಿ ಮಾಡಬೇಕು. ಈ ವ್ರತವು ಸೂರ್ಯನಿಗೆ ಪ್ರಿಯವಾದುದು.

೨೬-೨೭. ಉತ್ತಮಭಕ್ತಿಯಿಂದ ಈ ವ್ರತವನ್ನು ಮಾಡಿದರೆ ಅವನು ಸದ್ಗತಿಯನ್ನು ಹೊಂದುವನು.

ಜ್ಯೇಷ್ಠ ಶುಕ್ಲ ಸಪ್ತಮಿಯ ದಿನದಲ್ಲಿ ರವಿಯು ತಾನೇ ಇಂದ್ರನಾಗಿ ಹುಟ್ಟಿದನು. ಆದಕಾರಣ ಉಪವಾಸದಿಂದ ಜಿತೇಂದ್ರಿಯನಾಗಿ ವಿಧಾನೋಕ್ತ ಪ್ರಕಾರ ಆದಿನ ಇಂದ್ರನನ್ನು ಪೂಜಿಸಿದರೆ ಅವನು ದೇವೇಂದ್ರನ ಅನುಗ್ರಹದಿಂದ ಸ್ವರ್ಗವನ್ನು ಪಡೆಯುವನು.

೨೮-೩೦. ಆಷಾಢ ಶುಕ್ಲ ಸಪ್ತಮಿಯ ದಿನದಲ್ಲಿ ವಿವಸ್ವಾನ್ ಎಂಬ ಸೂರ್ಯನು ಹುಟ್ಟಿದನು ಆದಕಾರಣ ಆದಿನದಲ್ಲಿ ವಿವಸ್ವಂತನನ್ನು ಗಂಧ

ಲಭತೇ ಸೂರ್ಯಸಾಯುಜ್ಯಂ ವಿಪ್ರೇಂದ್ರಾತ್ರ ನ ಸಂಶಯಃ |
ಶ್ರಾವಣೇ ಶುಕ್ಲಸಪ್ತಮ್ಯಾಮವ್ಯಂಗಾಖ್ಯಂ ವ್ರತಂ ಶುಭಂ || ೨೯ ||

ಕಾರ್ಪಾಸಂ ತು ಚತುರ್ಹಸ್ತಂ ಸಾರ್ಧಂ ವಸ್ತ್ರಂ ಹಿ ಗೋಪತೇಃ |
ಪೂಜಾಂತೇ ಪ್ರೀತಯೇ ದೇಯಂ ವ್ರತಮೇತಚ್ಛುಭಾವಹಂ || ೩೦ ||

ಯದಿ ಚೇದ್ಧಸ್ತಯುಕ್ತೇಯಂ ತದಾ ಸ್ಯಾತ್ಪಾಪನಾಶಿನೀ |
ಅಸ್ಯಾಂ ದಾನಂ ಜಪೋ ಹೋಮಃ ಸರ್ವಂ ಚಾಕ್ಷಯ್ಯತಾಂ ವ್ರಜೇತ್ ||

ಭಾದ್ರೇ ತು ಶುಕ್ಲಸಪ್ತಮ್ಯಾಮಮುಕ್ತಾಭರಣವ್ರತಂ |
ಸೋಮಸ್ಯ ತು ಮಹೇಶಸ್ಯ ಪೂಜನಂ ಚಾತ್ರ ಕೀರ್ತಿತಂ || ೩೧ ||

ಗಂಧಾದಿಭಿಃ ಷೋಡಶಭಿರುಪಚಾರೈಃ ಸಮರ್ಚನಂ |
ಪ್ರಾರ್ಥ್ಯ ಪ್ರಣಮ್ಯ ವಿಸೃಜೇತ್ಸರ್ವಕಾಮಸಮೃದ್ಧಯೇ || ೩೨ ||

---

ಪುಷ್ಪಾದಿಗಳಿಂದ ಪೃಥಕ್ಕಾಗಿ ಪೂಜಿಸಿದರೆ ಸೂರ್ಯಸಾಯುಜ್ಯವು ದೊರಕುವುದು. ಸಂದೇಹವಿಲ್ಲ.

ಶ್ರಾವಣ ಶುಕ್ಲ ಸಪ್ತಮಿಯ ದಿನದಲ್ಲಿ ಅವ್ಯಂಗವೆಂಬ ಶುಭ ವ್ರತವು ವಿಹಿತವಾಗಿದೆ. ಆದಿವಸ ಪೂಜೆಯಾದಮೇಲೆ ಗೋಪತಿಯ ಪ್ರೀತ್ಯರ್ಥವಾಗಿ ನಾಲ್ಕೂವರೆ ಹಸ್ತದಷ್ಟು ಕಾರ್ಪಾಸ ಮತ್ತು ವಸ್ತ್ರಗಳನ್ನು ದಾನಮಾಡಬೇಕು ಈ ವ್ರತವು ಶುಭಾವಹವು.

೩೧. ಈ ಸಪ್ತಮಿಯು ಹಸ್ತನಕ್ಷತ್ರಯುಕ್ತವಾದರೆ ಆಗ ಇದು ಸಕಲ ಪಾಪನಾಶಕವಾಗುವುದು. ಆಗ ಮಾಡಿದ ದಾನ ಜಪ ಹೋಮ ಮುಂತಾದುವೆಲ್ಲವೂ ಅಕ್ಷಯವಾಗುವುದು.

೩೨. ಭಾದ್ರಪದಮಾಸದ ಶುಕ್ಲ ಸಪ್ತಮಿಯಲ್ಲಿ ಅಮುಕ್ತಾಭರಣವ್ರತವು ವಿಹಿತವು ಈ ವ್ರತದಲ್ಲಿ ಉಮಾದೇವಿಯಿಂದ ಸಹಿತನಾದ ಮಹೇಶ್ವರನ ಪೂಜೆಯು ವಿಧಿಸಲ್ಪಟ್ಟಿದೆ.

೩೩. ಗಂಧ ಮುಂತಾದ ದ್ರವ್ಯಗಳಿಂದ ಆವಾಹನಾದಿ ಷೋಡಶೋಪಚಾರಪೂರ್ವಕವಾಗಿ ಈ ಪೂಜೆಯನ್ನು ಮಾಡಬೇಕು. ಬಳಿಕ ಸಕಲೇಷ್ಟಾರ್ಥ

**ಫಲಸಪ್ತಮಿಕಾ ಚೇಯಂ ತದ್ವಿಧಾನಮುದೀರ್ಯತೇ ।**
**ನಾಲಿಕೇರಂ ಚ ವೃಂತಾಕಂ ನಾರಂಗಂ ಬೀಜಪೂರಕಂ ॥ ೩೪ ॥**

**ಕೂಷ್ಮಾಂಡಂ ಬೃಹತೀಪೂಗಮಿತಿ ಸಪ್ತಫಲಾನಿ ವೈ ।**
**ಮಹಾದೇವಸ್ಯ ಪುರತೋ ವಿನ್ಯಸ್ಯಾಪರದೋರಕಂ ॥ ೩೫ ॥**

**ಸಪ್ತತಂತುಕೃತಂ ಸಪ್ತಗ್ರಂಥಿಯುಕ್ತಂ ದ್ವಿಜೋತ್ತಮ ।**
**ಸಂಪೂಜ್ಯ ಪರಯಾ ಭಕ್ತ್ಯಾ ಧಾರಯೇದ್ವಾಮಕೇ ಕರೇ ॥ ೩೬ ॥**

**ಸ್ತ್ರೀ ನರೋ ದಕ್ಷಿಣೇ ಚೈವ ಯಾವದ್ವರ್ಷಂ ಸಮಾಪ್ಯತೇ ।**
**ಸಂಭೋಜ್ಯ ವಿಪ್ರಾನ್ಸಪ್ತೈವ ಪಾಯಸೇನ ವಿಸೃಜ್ಯ ತಾನ್ ॥ ೩೭ ॥**

**ಸ್ವಯಂ ಭುಂಜೀತ ಮತಿಮಾನ್ ವ್ರತಸಂಪೂರ್ತಿಹೇತವೇ ।**
**ಫಲಾನಿ ತಾನಿ ದೇಯಾನಿ ಸಪ್ತಸ್ವಪಿ ದ್ವಿಜೇಷು ಚ ॥ ೩೮ ॥**

---

ಸಮೃದ್ಧಿಯನ್ನು ಹೊಂದಲು ನಮಸ್ಕರಿಸಿ ಪ್ರಾರ್ಥನೆಮಾಡಿಕೊಂಡು ವಿಸರ್ಜನೆ ಮಾಡಬೇಕು.

೩೪-೩೬. ಇದು ಫಲಸಪ್ತಮಿ ಎಂತಲೂ ಉಕ್ತವಾಗಿದೆ. ಅದರ ವಿಧಾನವನ್ನು ಹೇಳುವೆನು :—

ತೆಂಗು, ಬದನೆ, ನಾರಂಗ, ಮಾದಾಳ, ಕೂಷ್ಮಾಂಡ, ಬೃಹತೀ, ಅಡಿಕೆ, ಎಂಬಿವು ಸಪ್ತಫಲಗಳು. ಅವುಗಳನ್ನೂ ಏಳುಗಂಟುಗಳುಳ್ಳ ಏಳೆಳೆಯ ದಾರವನ್ನೂ ಸಹ ಮಹಾದೇವನ ಮುಂದಿಟ್ಟು ಉತ್ಕೃಷ್ಟ ಭಕ್ತಿಯಿಂದ ಪೂಜೆಮಾಡಿ ಅದನ್ನು ಸ್ತ್ರೀಯು ಎಡಗೈಯಲ್ಲಿ ಕಟ್ಟಿಕೊಳ್ಳಬೇಕು

೩೭-೩೮. ಗಂಡಸು ಬಲಗೈಯಲ್ಲಿ ಅದನ್ನು ಧರಿಸಬೇಕು. ವರ್ಷವು ಮುಗಿದಮೇಲೆ ಪಾಯಸಮಾಡಿ ಏಳುಜನ ಬ್ರಾಹ್ಮಣರಿಗೆ ಭೋಜನಮಾಡಿಸಿ, ವಿಸರ್ಜನೆಮಾಡಿ ತಾನು ಭೋಜನಮಾಡಬೇಕು. ಬುದ್ಧಿವಂತನು ವ್ರತವನ್ನು ಪೂರ್ತಿಗೊಳಿಸುವುದಕ್ಕಾಗಿ ಆ ಫಲಗಳನ್ನು ಏಳು ಬ್ರಾಹ್ಮಣರಿಗೆ ಕೊಡಬೇಕು.

ಏವಂ ತು ಸಪ್ತವರ್ಷಾಣಿ ಕೃತ್ವೋಪಾಸ್ಯ ಯಥಾವಿಧಿ ।
ಸಾಯುಜ್ಯಂ ಲಭತೇ ವಿಪ್ರ ಮಹಾದೇವಸ್ಯ ತದ್ವ್ರತೀ ॥ ೩೯ ॥

ಆಶ್ವಿನೇ ಶುಕ್ಲಪಕ್ಷೇ ತು ವಿಜ್ಞೇಯಾ ಶುಭಸಪ್ತಮೀ ।
ತಸ್ಯಾಂ ಕೃತಸ್ನಾನಪೂಜೋ ವಾಚಯಿತ್ವಾ ದ್ವಿಜೋತ್ತಮಾನ್ ॥ ೪೦ ॥

ಆರಭ್ಯ ಕಪಿಲಾಂ ಗಾಂ ಚ ಸಂಪೂಜ್ಯ ಪ್ರಾರ್ಥಯೇತ್ತತಃ ।
ತ್ವಾಮಹಂ ದದ್ಮಿ ಕಲ್ಯಾಣಿ ಪ್ರೀಯತಾಮರ್ಯಮಾ ಸ್ವಯಂ ॥ ೪೧ ॥

ಪಾಲಯ ತ್ವಂ ಜಗತ್ಕೃತ್ಸ್ನಂ ಯತೋಽಸಿ ಧರ್ಮಸಂಭವಾ ।
ಇತ್ಯುಕ್ತ್ವಾ ವೇದವಿದುಷೇ ದತ್ವಾ ಕೃತ್ವಾ ಚ ದಕ್ಷಿಣಾಂ ॥ ೪೨ ॥

ನಮಸ್ಕೃತ್ಯ ಸ್ವಯಂ ವಿಪ್ರ ವಿಸೃಜೇತ್ಪ್ರಾಶಯೇತ್ಸ್ವಯಂ ।
ಪಂಚಗವ್ಯಂ ವ್ರತಂ ಚೇತ್ಥಂ ವಿಧಾಯ ಶ್ವೋ ದ್ವಿಜೋತ್ತಮಾನ್ ॥ ೪೩ ॥

೩೯. ಈರೀತಿ ವಿಧಿವತ್ತಾಗಿ ಏಳುವರ್ಷಗಳು ವ್ರತವನ್ನಾಚರಿಸಿದರೆ ಆ ವ್ರತಿಯು ಮಹಾದೇವನ ಸಾಯುಜ್ಯವನ್ನು ಪಡೆಯುವನು.

೪೦-೪೫ ಆಶ್ವಯುಜ ಶುಕ್ಲ ಸಪ್ತಮಿಯು ಶುಭಸಪ್ತಮೀ ಎಂದು ತಿಳಿಯಬೇಕು ಆದಿನದಲ್ಲಿ ಸ್ನಾನ ಪೂಜೆಗಳನ್ನು ಮಾಡಿಕೊಂಡು, ಸ್ತೋತ್ರ ಪಾಠಾದಿಗಳನ್ನು ಮಾಡಿಸಿ, ದ್ವಿಜೋತ್ತಮರು ಮತ್ತು ಕಪಿಲ ಗೋವುಗಳನ್ನು ಪೂಜಿಸಿ ಬಳಿಕ ಪ್ರಾರ್ಥಿಸಬೇಕು.

'ಮಂಗಳ ಧೇನುವೇ! ನಿನ್ನನ್ನು ದ್ವಿಜೋತ್ತಮರಿಗೆ ದಾನಮಾಡುವೆನು, ಇದರಿಂದ ಸೂರ್ಯನು ಸಂತುಷ್ಟನಾಗಲಿ, ನೀನು ಧರ್ಮ ಸಂಭವಳಾದ್ದರಿಂದ ಸಮಸ್ತ ಜಗತ್ತನ್ನೂ ರಕ್ಷಿಸು' ಎಂಬುದಾಗಿ ವಿಜ್ಞಾಪಿಸಿ, ವೇದವೇತ್ತೃವಾದ ಬ್ರಾಹ್ಮಣನಿಗೆ ಅದನ್ನು ದಾನಮಾಡಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ವಿಸರ್ಜನೆ ಮಾಡಬೇಕು. ತಾನು ಪಂಚಗವ್ಯವನ್ನು ಪ್ರಾಶನೆಮಾಡಬೇಕು. ಈರೀತಿ ವ್ರತವನ್ನಾಚರಿಸಿ ಮಾರನೆಯದಿನ ಬ್ರಾಹ್ಮಣೋತ್ತಮರಿಗೆ ಭೋಜನ

ಭೋಜಯಿತ್ವಾ ಸ್ವಯಂ ಚಾದ್ಯಾತ್ತದನ್ನಂ ದ್ವಿಜಶೇಷಿತಂ |
ಕೃತಂ ಹ್ಯೇತದ್ವ್ರತಂ ವಿಪ್ರ ಸುಭಾವ್ಯಂ ಶ್ರದ್ಧಯಾನ್ವಿತಃ || ೪೪ ||

ದೇವದೇವಪ್ರಸಾದೇನ ಭುಕ್ತಿಮುಕ್ತಿಮವಾಪ್ನುಯಾತ್ |
ಅಥ ಕಾರ್ತಿಕಶುಕ್ಲಾಯಾಂ ಶಾಕಾಖ್ಯಂ ಸಪ್ತಮೀವ್ರತಂ || ೪೫ ||

ತಸ್ಯಾಂ ತು ಸಪ್ತಶಾಕಾನಿ ಸಸ್ವರ್ಣಕಮಲಾನಿ ಚ |
ಪ್ರದದ್ಯಾತ್ಸಪ್ತವಿಪ್ರೇಭ್ಯಃ ಶಾಕಾಹಾರಸ್ತತಃ ಸ್ವಯಂ || ೪೬ ||

ದ್ವಿತೀಯೇಹ್ನಿ ದ್ವಿಜಾನ್ಭೋಜ್ಯ ದತ್ವಾ ತೇಭ್ಯೋನ್ನದಕ್ಷಿಣಾಂ |
ವಿಸೃಜ್ಯ ಬಂಧುಭಿಃ ಸಾರ್ಧಂ ಸ್ವಯಂ ಭುಂಜೀತ ವಾಗ್ಯತಃ || ೪೭ ||

ಮಾರ್ಗಸ್ಯ ಸಿತಸಪ್ತಮ್ಯಾಂ ಮಿತ್ರವ್ರತಮುದಾಹೃತಂ |
ಯದ್ವಿಷ್ಣೋರ್ದಕ್ಷಿಣಂ ನೇತ್ರಂ ತದೇವ ಕೃತವಾನಿಹ || ೪೮ ||

ಮಾಡಿಸಿ, ಅದರ ಶೇಷವನ್ನು ತಾನು ಭೋಜನಮಾಡಬೇಕು. ಶುಭದಾಯಕವಾದ ಈ ವ್ರತವನ್ನು ಶ್ರದ್ಧೆಯಿಂದ ಮಾಡಿದರೆ ಅವನು ದೇವದೇವಪ್ರಸಾದದಿಂದ ಭೋಗಮೋಕ್ಷಗಳನ್ನು ಹೊಂದುವನು

ಕಾರ್ತಿಕ ಶುಕ್ಲ ಸಪ್ತಮೀದಿನದಲ್ಲಿ ಶಾಕವೆಂಬ ಸಪ್ತಮೀವ್ರತವು ವಿಹಿತವಾಗಿದೆ

೪೬. ಆ ದಿನದಲ್ಲಿ ಸುವರ್ಣಕಮಲ ಸಹಿತವಾಗಿ ಏಳುಶಾಕಗಳನ್ನು ಏಳುಜನ ಬ್ರಾಹ್ಮಣರಿಗೆ ದಾನಮಾಡಿ, ಯಜಮಾನನು ಶಾಕಾಹಾರವನ್ನು ಮಾಡಬೇಕು.

೪೭. ಎರಡನೆಯ ದಿನದಲ್ಲಿ ದ್ವಿಜರಿಗೆ ಭೋಜನಮಾಡಿಸಿ ಅವರಿಗೆ ದಕ್ಷಿಣೆಯನ್ನು ಕೊಟ್ಟು ವಿಸರ್ಜನೆಮಾಡಿ ತಾನು ಬಂಧುಗಳಸಹಿತವಾಗಿ ನಿಯಮದಿಂದ ಊಟಮಾಡಬೇಕು.

೪೮-೫೦. ಮಾರ್ಗಶೀರ್ಷ ಶುಕ್ಲ ಸಪ್ತಮೀದಿನದಲ್ಲಿ ಮಿತ್ರವ್ರತವು ಉಕ್ತವಾಗಿದೆ. ವಿಷ್ಣುವಿನ ಬಲಗಣ್ಣಿನಿಂದ ಹುಟ್ಟಿದ ಸೂರ್ಯನು ಈದಿನ ಅದಿತಿ

ಅದಿತ್ಯಾಂ ಕಶ್ಯಪಾಜ್ಜಜ್ಞೇ ಮಿತ್ರೋ ನಾಮಾ ದಿವಾಕರಃ ।
ಅತೋಽಸ್ಯಾಂ ಪೂಜನಂ ತಸ್ಯ ಯಥೋಕ್ತವಿಧಿನಾ ದ್ವಿಜ ॥ ೪೯ ॥

ಕೃತ್ವಾ ದ್ವಿಜಾನ್ಭೋಜಯಿತ್ವಾ ಸಪ್ತೈವ ಮಧುರಾದಿನಾ ।
ಗುರವೇ ದಕ್ಷಿಣಾಂ ದತ್ವಾ ವಿಸೃಜ್ಯಾಶ್ನೀತ ಚ ಸ್ವಯಂ ॥ ೫೦ ॥

ಕೃತ್ವೈತದ್ವಿಧಿನಾ ಲೋಕಂ ಸೂರ್ಯಸ್ಯ ವ್ರಜತಿ ಧ್ರುವಂ ।
ದ್ವಿಜೋ ಬ್ರಾಹ್ಮಂ ತಥಾ ಶೂದ್ರಃ ಸತ್ಕುಲೇ ಜನ್ಮ ಚಾಪ್ನುಯಾತ್ ॥

ಪೌಷಸ್ಯ ಶುಕ್ಲ ಸಪ್ತಮ್ಯಾಂ ವ್ರತಂ ಚಾಭಯಸಂಜ್ಞಿತಂ ।
ಉಪೋಷ್ಯ ಭಾನುಂ ತ್ರಿಃಸಂಧ್ಯಂ ಸಮಭ್ಯರ್ಚ್ಯ ಧರಾಸ್ಥಿತಃ ॥ ೫೨ ॥

ಕ್ಷೀರಸಿಕ್ತಾನ್ನಸಂಬದ್ಧಂ ಮೋದಕಂ ಪ್ರಸ್ಥಸಂಮಿತಂ ।
ದ್ವಿಜಾಯ ದತ್ವಾ ಭೋಜ್ಯಾನ್ಯಾನ್ಸಪ್ತಾಷ್ಟಭ್ಯಶ್ಚ ದಕ್ಷಿಣಾಂ ॥ ೫೩ ॥

---

ದೇವಿಯಲ್ಲಿ ಕಶ್ಯಪರಿಂದ ಮಿತ್ರನಾಮಕನಾಗಿ ಹುಟ್ಟಿದನು. ಆದಕಾರಣ ಈ ತಿಥಿಯಲ್ಲಿ ಉಕ್ತ ವಿಧಾನುಸಾರವಾಗಿ ಆ ಮಿತ್ರನಾಮಕಸೂರ್ಯನ ಪೂಜೆಯನ್ನು ಮಾಡಿ ಮಧುರ ಪದಾರ್ಥಗಳಿಂದ ಏಳುಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಗುರುಗಳಿಗೆ ದಕ್ಷಿಣೆಯನ್ನು ಕೊಟ್ಟು, ವ್ರತ ವಿಸರ್ಜನೆಮಾಡಿ ಯಜಮಾನನು ಭೋಜನಮಾಡಬೇಕು.

೫೧ ಈ ವಿಧಾನದಿಂದ ವ್ರತವನ್ನಾಚರಿಸಿದ ದ್ವಿಜನು ಖಂಡಿತವಾಗಿ ಸೂರ್ಯಲೋಕಕ್ಕೆ ಹೋಗುವನು. ಶೂದ್ರನು ಈ ವ್ರತವನ್ನಾಚರಿಸಿದರೆ ಸತ್ಕುಲದಲ್ಲಿ ಬ್ರಾಹ್ಮಣಜನ್ಮವನ್ನು ಹೊಂದುವನು.

೫೨-೫೪. ಪುಷ್ಯಮಾಸದ ಶುಕ್ಲ ಸಪ್ತಮಿಯ ದಿನದಲ್ಲಿ ಅಭಯವೆಂಬ ವ್ರತವು. ಈ ವ್ರತದಲ್ಲಿ ಉಪವಾಸದಿಂದ ಮೂರು ಸಂಧ್ಯಾಕಾಲಗಳಲ್ಲಿಯೂ ನೆಲದಮೇಲೆ ಕುಳಿತು ಸೂರ್ಯನನ್ನು ಪೂಜಿಸಿ, ಹಾಲು ಅನ್ನ ಸಹಿತ ಮೋದಕವನ್ನು ಒಂದು ಬಳ್ಳದಷ್ಟು ಬ್ರಾಹ್ಮಣನಿಗೆ ಕೊಟ್ಟು ಇತರ ಏಳೆಂಟುಬ್ರಾಹ್ಮಣರಿಗೆ ಪ್ರತ್ಯೇಕವಾಗಿ ಗೋವು ಅಥವಾ ಸುವರ್ಣದಕ್ಷಿಣೆಗಳನ್ನು ಕೊಟ್ಟು ವಿಸರ್ಜನೆ

ಪೃಥಗ್ವಾ ವಾ ಸುವರ್ಣಂ ವಾ ವಿಸೃಜ್ಯಾಶ್ನೀತ ಚ ಸ್ವಯಂ |
ಅಭಯಾಖ್ಯಂ ವ್ರತಂ ತ್ವೇತತ್ಸರ್ವಸ್ಯಾಭಯದಂ ಸ್ಮೃತಂ || ೫೪ ||

ಮಾರ್ತಂಡಾಖ್ಯಂ ವ್ರತಂ ನಾಮ ಕಥಯಂತಿ ದ್ವಿಜಾಃ ಪರೇ |
ಏಕಮೇವೇತಿ ಚ ಪ್ರೋಕ್ತಮೇಕದೈವತಯಾ ಬುಧೈಃ || ೫೫ ||

ಮಾಘೇ ತು ಕೃಷ್ಣಸಪ್ತಮ್ಯಾಂ ವ್ರತಂ ಸರ್ವಾಪ್ತಿಸಂಜ್ಞಕಂ |
ಸಮುಪೋಷ್ಯ ದಿನೇ ತಸ್ಮಿನ್ಸಂಪೂಜ್ಯಾದಿತ್ಯಬಿಂಬಕಂ || ೫೬ ||

ಸೌವರ್ಣಂ ಗಂಧಪುಷ್ಪಾದ್ಯೈಃ ಕೃತ್ವಾ ರಾತ್ರೌ ಚ ಜಾಗರಂ |
ಪರೇಽಹ್ನಿ ವಿಪ್ರಾನ್ಸಂಭೋಜ್ಯ ಪಾಯಸೇನ ತು ಸಪ್ತ ವೈ || ೫೭ ||

ದಕ್ಷಿಣಾಂ ನಾಲಿಕೇರಾಣಿ ತೇಭ್ಯೋ ದತ್ವಾ ಗುರುಂ ತತಃ |
ಸೌವರ್ಣಂ ತು ರವೇರ್ಬಿಂಬಂ ಯುಕ್ತಂ ದಕ್ಷಿಣಯಾನ್ಯಯಾ || ೫೮ ||

---

ಮಾಡಿ ಯಜಮಾನನು ಭೋಜನಮಾಡಬೇಕು. ಅಭಯವೆಂಬ ಈ ವ್ರತವು ಸರ್ವರಿಗೂ ಅಭಯಪ್ರದವೆಂದು ಉಕ್ತವಾಗಿದೆ.

೫೫. ಇತರರು ಇದನ್ನೇ ಮಾರ್ತಂಡನಾಮಕವ್ರತವೆಂದು ಹೇಳುವರು. ಜ್ಞಾನಿಗಳು ಇವೆರಡೂ ಏಕದೇವತಾಕವಾಗಿರುವುದರಿಂದ ಒಂದೇ ಎಂದು ಹೇಳಿರುವರು.

೫೬-೫೯. ಮಾಘಮಾಸದ ಕೃಷ್ಣ ಸಪ್ತಮಿಯಲ್ಲಿ ಸರ್ವಾಪ್ತಿ ನಾಮಕ ವ್ರತವು ವಿಹಿತವಾಗಿದೆ. ಆ ದಿನದಲ್ಲಿ ಉಪವಾಸದಿಂದ ಬಂಗಾರದ ಸೂರ್ಯಬಿಂಬವನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಿ, ರಾತ್ರಿ ಜಾಗರಣೆಮಾಡಿ ಮಾರನೆಯ ದಿನದಲ್ಲಿ ಪಾಯಸಾದಿಗಳಿಂದ ಏಳುಮಂದಿ ಬ್ರಾಹ್ಮಣರಿಗೆ ಭೋಜನಮಾಡಿಸಿ, ಅವರಿಗೆ ತೆಂಗಿನಕಾಯಿ, ದಕ್ಷಿಣೆಗಳನ್ನು ಕೊಟ್ಟು, ಗುರುಗಳಿಗೆ ಬೇರೆ ದಕ್ಷಿಣೆ ಸಹಿತ ಬಂಗಾರದ ಸೂರ್ಯಬಿಂಬವನ್ನು ಸಮರ್ಪಿಸಿ, ಚೆನ್ನಾಗಿ ಪ್ರಾರ್ಥಿಸಿ,

ಸಮುಪರ್ಚ್ಯ ಚ ಭೃಶಂ ಪ್ರಾರ್ಥ್ಯ ವಿಸೃಜ್ಯಾದ್ಯಾತ್ಸ್ವಯಂ ತತಃ ।
ಏತತ್ಸರ್ವಾಪ್ತಿದಂ ನಾಮ ಸಂಪ್ರೋಕ್ತಂ ಸಾರ್ವಕಾಮಿಕಂ ॥ ೫೯ ॥

ವ್ರತಸ್ಯಾಸ್ಯ ಪ್ರಭಾವೇಣ ದ್ವೈತಂ ಸಿದ್ಧ್ಯೇದ್ಧಿ ಸರ್ವಥಾ ।
ಮಾಘಸ್ಯ ಶುಕ್ಲಸಪ್ತಮ್ಯಾಮಚಲಾಖ್ಯಂ ವ್ರತಂ ಸ್ಮೃತಂ ॥ ೬೦ ॥

ತ್ರಿಲೋಚನಜಯಂತೀಯಂ ಸರ್ವಪಾಪಹರಾ ಸ್ಮೃತಾ ।
ರಥಾಖ್ಯಾ ಸಪ್ತಮೀ ಚೇಯಂ ಚಕ್ರವರ್ತಿತ್ವದಾಯಿನೀ ॥ ೬೧ ॥

ಅಸ್ಯಾಂ ಸಮುರ್ಚ್ಯ ಸವಿತುಃ ಪ್ರತಿಮಾಂ ತು ಹೈಮೀಂ
ಹೈಮಾಶ್ವಯುಕ್ತರಥಗಾಂ ತು ದದೇತ್ಸಹೇಮಾಂ ।
ಯೋ ಭಾವಭಕ್ತಿಸಹಿತಃ ಸ ಗತೋ ಹಿ ಲೋಕಂ
ಶಂಭೋಃ ಸ ಮೋದತ ಇಹಾಪಿ ಚ ಭುಕ್ತಭೋಗಃ ॥ ೬೨ ॥

ವಿಸರ್ಜನೆಮಾಡಿ ಯಜಮಾನನು ಭೋಜನಮಾಡಬೇಕು ಇದು ಸಕಲೇಷ್ಟಾರ್ಥಪ್ರದವಾದ ಸರ್ವಾಪ್ತಿ ನಾಮಕವ್ರತವೆಂದು ಉಕ್ತವಾಗಿದೆ.

೬೦-೬೨. ಈ ವ್ರತದ ಪ್ರಭಾವದಿಂದ ಐಹಿಕ ಪಾರತ್ರಿಕ ಶ್ರೇಯಸ್ಸುಗಳೆರಡೂ ಸಿದ್ಧಿಸುವುವು.

ಮಾಘ ಶುಕ್ಲ ಸಪ್ತಮಿಯ ದಿನದಲ್ಲಿ ಅಚಲವೆಂಬ ವ್ರತವು ವಿಹಿತವಾಗಿದೆ. ಇದು ತ್ರಿಲೋಚನ ಜಯಂತಿಯು, ಸಕಲಪಾಪಪರಿಹಾರಕವು ಮತ್ತು ಇದು ಚಕ್ರವರ್ತಿತ್ವದಾಯಕವಾದ ರಥಸಪ್ತಮಿಯು.

ಈ ದಿನದಲ್ಲಿ ಬಂಗಾರದ ಅಶ್ವಯುಕ್ತರಥಸ್ಥಿತವಾದ, ಬಂಗಾರದ ಸೂರ್ಯಪ್ರತಿಮೆಯನ್ನು ಭಕ್ತಿಭಾವದಿಂದ ಪೂಜಿಸಿ, ಈ ಪ್ರತಿಮೆಯನ್ನು ದಾನಮಾಡುವವನು ಶಂಭುಲೋಕಕ್ಕೆ ಹೋಗಿ ಸುಖಪಡುವನು ಇಲ್ಲಿಯೂ ಸಹ ಯಾವಜ್ಜೀವವೂ ಭೋಗಗಳನ್ನು ಅನುಭವಿಸುವನು.

**ಭಾಸ್ಕರೀ ಸಪ್ತಮೀ ಚೇಯಂ ಕೋಟಿಭಾಸ್ವದ್ಗ್ರಹೋಪಮಾ |**
**ಅರುಣೋದಯವೇಲಾಯಾಮಸ್ಯಾಂ ಸ್ನಾನಂ ವಿಧೀಯತೇ || ೬೩ ||**

**ಅರ್ಕಸ್ಯ ಚ ಬದರ್ಯಾಶ್ಚ ಸಪ್ತ ಸಪ್ತದಲಾನಿ ವೈ |**
**ನಿಧಾಯ ಶಿರಸಿ ಸ್ನಾಯಾತ್ ಸಪ್ತಜನ್ಮಾಘಶಾಂತಯೇ || ೬೪ ||**

**ಪುತ್ರಪ್ರದಂ ವ್ರತಂ ಚಾತ್ರ ಪ್ರಾಹಾದಿತ್ಯಃ ಸ್ವಯಂ ಪ್ರಭುಃ |**
**ಯೋ ಮಾಘಸಿತಸಪ್ತಮ್ಯಾಂ ಪೂಜಯೇನ್ಮಾಂ ವಿಧಾನತಃ || ೬೫ ||**

**ತಸ್ಯಾಹಂ ಪುತ್ರತಾಂ ಯಾಸ್ಯೇ ಸ್ವಾಂಶೇನ ಭೃಶತೋಷಿತಃ |**
**ತಸ್ಮಾಜ್ಜಿತೇಂದ್ರಿಯೋ ಭೂತ್ವಾ ಸಮುಪೋಷ್ಯ ದಿವಾನಿಶಂ || ೬೬ ||**

**ಪೂಜಯೇದಪರೇ ಚಾಹ್ನಿ ಹೋಮಂ ಕೃತ್ವಾ ದ್ವಿಜಾಂಸ್ತತಃ |**
**ದಧ್ಯೋದನೇನ ಪಯಸಾ ಪಾಯಸೇನ ಚ ಭೋಜಯೇತ್ || ೬೭ ||**

**ಅನೇನ ವಿಧಿನಾ ಯಸ್ತು ಕುರುತೇ ಪುತ್ರಸಪ್ತಮೀಂ |**
**ಲಭತೇ ಸ ತು ಸತ್ಪುತ್ರಂ ಚಿರಾಯುಷಮನಾಮಯಂ || ೬೮ ||**

---

೬೩. ಇದು ಪ್ರಕಾಶಮಾನವಾದ ಕೋಟ್ಯಂತರ ಗ್ರಹಗಳಿಗೆ ಸಮಾನವಾದ ಭಾಸ್ಕರೀಸಪ್ತಮಿಯು. ಈದಿನ ಅರುಣೋದಯ ಸಮಯದಲ್ಲಿ ಸ್ನಾನವು ವಿಧ್ಯುಕ್ತವಾಗಿದೆ.

೬೪. ಎಕ್ಕೆ ಮತ್ತು ಬದರಿಯ ಏಳೇಳುದಳಗಳನ್ನು ತಲೆಯಮೇಲಿಟ್ಟುಕೊಂಡು ಏಳುಜನ್ಮಗಳ ಪಾಪವನ್ನು ಕಳೆದುಕೊಳ್ಳಲು ಸ್ನಾನಮಾಡಬೇಕು.

೬೫-೬೭. ಈ ದಿನದಲ್ಲಿ ಪುತ್ರಪ್ರದವ್ರತವನ್ನಾಚರಿಸಬೇಕೆಂದು ಆದಿತ್ಯಸ್ವಾಮಿಯು ಸ್ವತಃ ಹೇಳಿರುವನು. ಮಾಘ ಶುಕ್ಲ ಸಪ್ತಮಿಯ ದಿನದಲ್ಲಿ ವಿಧ್ಯುಕ್ತಪ್ರಕಾರ ಪೂಜಿಸುವವನಿಗೆ ನಾನು ಅತ್ಯಂತ ಸಂತುಷ್ಟನಾಗಿ ನನ್ನ ಅಂಶದಿಂದ ಪುತ್ರನಾಗುವೆನು; ಆದಕಾರಣ ಜಿತೇಂದ್ರಿಯನಾಗಿ ಉಪವಾಸದಿಂದ ಆದಿನ ಹಗಲು ರಾತ್ರಿ ಪೂಜೆಮಾಡಬೇಕು. ಮಾರನೆಯದಿನ ಹೋಮಮಾಡಿ ದಧ್ಯೋದನ, ಕ್ಷೀರ, ಪಾಯಸಗಳಿಂದ ಬ್ರಾಹ್ಮಣಭೋಜನಮಾಡಿಸಬೇಕು.

೬೮. ಈ ವಿಧಾನದಿಂದ ಪುತ್ರ ಸಪ್ತಮೀವ್ರತಾನುಷ್ಠಾನಮಾಡುವವನು ಚಿರಾಯುವೂ, ಆರೋಗ್ಯವಂತನೂ ಆದ ಸತ್ಪುತ್ರನನ್ನು ಪಡೆಯುವನು.

ತಪಸ್ಯಶುಕ್ಲಸಪ್ತಮ್ಯಾಂ ವ್ರತಮರ್ಕಪುಟಂ ಚರೇತ್ ।
ಅರ್ಕಪತ್ರೈರ್ಯಜೇದರ್ಕಮರ್ಕಪತ್ರಾಣಿ ಚಾಶ್ನುಯಾತ್ ॥ ೧೯ ॥

ಅರ್ಕನಾಮ ಜಪೇಚ್ಛಶ್ವದಿತ್ಥಂ ಚಾರ್ಕಪುಟವ್ರತಂ ।
ಧನದಂ ಪುತ್ರದಂ ಚೈತತ್ಸರ್ವಪಾಪಪ್ರಣಾಶನಂ ॥ ೨೦ ॥

ತ್ರಿವರ್ಗದಮಿತಿ ಪ್ರಾಹುಃ ಕೇಚಿದೇತದ್ವ್ರತಂ ದ್ವಿಜ ।
ಯಜ್ಞವ್ರತಂ ತಥಾಪ್ಯನ್ಯೇ ವಿಧಿವದ್ಧೋಮಕರ್ಮಣಾ ॥ ೨೧ ॥

ಸರ್ವಾಸು ಸರ್ವಮಾಸೇಷು ಸಪ್ತಮೀಷು ದ್ವಿಜೋತ್ತಮ ।
ಭಾಸ್ಕರಾರಾಧನಂ ಪ್ರೋಕ್ತಂ ಸರ್ವಕಾಮಿಕಮಿತ್ಯಲಂ ॥ ೨೨ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸಸ್ಥಿತಸಪ್ತಮೀವ್ರತಕಥನಂ ನಾಮ ಷೋಡಶಾಧಿಕಶತತಮೋಽಧ್ಯಾಯಃ

೧೯-೨೦. ಫಾಲ್ಗುಣ ಶುಕ್ಲ ಸಪ್ತಮಿಯ ದಿನದಲ್ಲಿ ಅರ್ಕಪುಟವ್ರತವನ್ನಾಚರಿಸಬೇಕು ಸೂರ್ಯನನ್ನು ಎಕ್ಕೆಯ ಎಲೆಗಳಿಂದ ಪೂಜಿಸಿ ಅವನ್ನೇ ತಿನ್ನಬೇಕು. ಸದಾ ಸೂರ್ಯನಾಮವನ್ನೇ ಜಪಿಸುತ್ತಿರಬೇಕು. ಹೀಗೆ ಆದಿನ ಮಾಡುವುದಕ್ಕೆ ಅರ್ಕಪುಟವ್ರತವೆಂದು ಹೆಸರು. ಈ ವ್ರತವು ಸಕಲಪಾಪಗಳನ್ನೂ ಪರಿಹರಿಸುವುದು, ಧನಪುತ್ರದಾಯಕವೂ ಆಗಿದೆ.

೨೧-೨೨. ಕೆಲವರು ಈ ವ್ರತವನ್ನು ತ್ರಿವರ್ಗಪ್ರದವೆಂದು ಹೇಳುವರು; ಇತರರು ಯಜ್ಞವ್ರತವೆನ್ನುವರು. ಹೇಗಾದರೂ ಆಗಲಿ. ದ್ವಿಜೋತ್ತಮನೇ! ಸಕಲ ಮಾಸಗಳ ಸಪ್ತಮಿಗಳಲ್ಲಿಯೂ ವಿಧ್ಯುಕ್ತ ಹೋಮ ಕರ್ಮ ಸಹಿತವಾಗಿ ಭಾಸ್ಕರಾರಾಧನೆಯನ್ನು ಮಾಡುವುದು ಸಕಲೇಷ್ಟಾರ್ಥಪ್ರದವು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳುಗಳ ಸಪ್ತಮೀವ್ರತ ನಿರೂಪಣೆಯೆಂಬ ನೂರುಹದಿನಾರನೆಯ ಅಧ್ಯಾಯವು ಮುಗಿದುದು

## ಸಪ್ತದಶಾಧಿಕಶತತಮೋಽಧ್ಯಾಯಃ

### ಸನಾತನ ಉವಾಚ

ಶುಕ್ಲಾಷ್ಟಮ್ಯಾಂ ಚೈತ್ರಮಾಸೇ ಭವಾನ್ಯಾಃ ಪ್ರೋಚ್ಯತೇ ಜನಿಃ ।
ಪ್ರದಕ್ಷಿಣಶತಂ ಕೃತ್ವಾ ಕಾರ್ಯೋ ಯಾತ್ರಾಮಹೋತ್ಸವಃ ॥ ೧ ॥

ಗೇಹಾಂತೇ ಜಗದಂಬಾಯಾಃ ಸರ್ವಾನಂದಪ್ರದಂ ನೃಣಾಂ ।
ಅತ್ರೈವಾಶೋಕಕಲಿಕಾಪ್ರಾಶನಂ ಸಮುದಾಹೃತಂ ॥ ೨ ॥

ಅಶೋಕಕಲಿಕಾಶ್ಚಾಷ್ಟೌ ಯೇ ಪಿಬಂತಿ ಪುನರ್ವಸೌ ।
ಚೈತ್ರೇ ಮಾಸಿ ಸಿತಾಷ್ಟಮ್ಯಾಂ ನ ತೇ ಶೋಕಮವಾಪ್ನುಯುಃ ॥ ೩ ॥

ಮಹಾಷ್ಟಮೀತಿ ಚ ಪ್ರೋಕ್ತಾ ದೇವ್ಯಾಃ ಪೂಜಾವಿಧಾನತಃ ।
ವೈಶಾಖಸ್ಯ ಸಿತಾಷ್ಟಮ್ಯಾಂ ಸಮುಪೋಷ್ಯಾತ್ರ ವಾರಿಣಾ ॥ ೪ ॥

### ನೂರುಹದಿನೇಳನೆಯ ಅಧ್ಯಾಯವು

೧-೨. ಸನಾತನನು ಹೇಳಿದನು—ಚೈತ್ರಮಾಸದ ಶುಕ್ಲಾಷ್ಟಮಿಯ ದಿನದಲ್ಲಿ ಭವಾನೀದೇವಿಯ ಉತ್ಪತ್ತಿಯು ಉಕ್ತವಾಗಿದೆ. ಆದುದರಿಂದ ಆ ದಿನದಲ್ಲಿ ಮನುಷ್ಯರಿಗೆ ಆನಂದಪ್ರದವಾದ ಪ್ರದಕ್ಷಿಣಶತವನ್ನುಮಾಡಿ ಜಗದಂಬೆಯ ಆಲಯದಲ್ಲಿ ಯಾತ್ರಾಮಹೋತ್ಸವವನ್ನಾಚರಿಸಬೇಕು. ಈ ವ್ರತದಲ್ಲಿಯೇ ಅಶೋಕಕಲಿಕಾಪ್ರಾಶನೆಯು ಉಕ್ತವಾಗಿದೆ.

೩. ಚೈತ್ರ ಶುಕ್ಲಾಷ್ಟಮಿಯ ದಿನದಲ್ಲಿ ಪುನರ್ವಸುನಕ್ಷತ್ರಬಂದಾಗ ಎಂಟು ಅಶೋಕ ಕಲಿಕೆಗಳನ್ನು ಪಾನ ಮಾಡಿದವರು ದುಃಖವನ್ನು ಹೊಂದುವುದಿಲ್ಲ.

೪-೧೨. ಇದು ದೇವೀಪೂಜೆಯ ವಿಧಾನದಿಂದ ಮಹಾಷ್ಟಮಿಯೆಂದು ಪ್ರಸಿದ್ಧಿಗೆ ಬಂದಿದೆ.

ಸ್ನಾತ್ವಾಽಪರಾಜಿತಾಂ ದೇವೀಂ ಮಾಂಸೀಬಾಲಕವಾರಿಭಿಃ ।
ಸ್ನಾಪಯಿತ್ವಾರ್ಚ್ಯ ಗಂಧಾದ್ಯೈರ್ನೈವೇದ್ಯಂ ಶರ್ಕರಾಮಯಂ ॥ ೫ ॥

ಕುಮಾರೀರ್ಭೋಜಯೇಚ್ಚಾಪಿ ನವಮ್ಯಾಂ ಪಾರಣಾಗ್ರತಃ ।
ಜ್ಯೋತಿರ್ಮಯವಿಮಾನೇನ ಭ್ರಾಜಮಾನೋ ಯಥಾ ರವಿಃ ॥ ೬ ॥

ಲೋಕೇಷು ವಿಚರೇದ್ವಿಪ್ರ ದೇವ್ಯಾಶ್ಚೈವ ಪ್ರಸಾದತಃ ॥
ಕೃಷ್ಣಾಷ್ಟಮ್ಯಾಂ ಜ್ಯೇಷ್ಠಮಾಸೇ ಪೂಜಯಿತ್ವಾ ತ್ರಿಲೋಚನಂ ॥ ೭ ॥

ಶಿವಲೋಕೇ ವಸೇತ್ಕಲ್ಪಂ ಸರ್ವದೇವನಮಸ್ಕೃತಃ ।
ಜ್ಯೇಷ್ಠಶುಕ್ಲೇ ತಥಾಷ್ಟಮ್ಯಾಂ ಯೋ ದೇವೀಂ ಪೂಜಯೇನ್ನರಃ ॥ ೮ ॥

ಸ ವಿಮಾನೇನ ಚರತಿ ಗಂಧರ್ವಾಪ್ಸರಸಾಂ ಗಣೈಃ ।
ಶುಕ್ಲಾಷ್ಟಮ್ಯಾಂ ತಥಾಽಽಷಾಢೇ ಸ್ನಾತ್ವಾ ಚೈವ ನಿಶಾಂಬುನಾ ॥ ೯ ॥

---

ವೈಶಾಖ ಶುಕ್ಲಾಷ್ಟಮಿಯ ದಿನದಲ್ಲಿ ಉಪವಾಸಮಾಡಿ ಶುದ್ಧ ನೀರಿನಿಂದ ಸ್ನಾನಮಾಡಿ, ಅಪರಾಜಿತದೇವಿಯನ್ನು ಜಟಾಮಾಂಸೀಲಾವಂಚಗಳ ನೀರಿನಿಂದ ಅಭಿಷೇಕಮಾಡಿಸಿ, ಗಂಧಾದಿಗಳಿಂದ ಪೂಜಿಸಿ ಶರ್ಕರಾಮಯವಸ್ತುವನ್ನು ನೈವೇದ್ಯಮಾಡಿ ನವಮಿಯ ದಿವಸ ಕುಮಾರಿಯರಿಗೆ ಭೋಜನಮಾಡಿಸಿ, ಪಾರಣೆಮಾಡಬೇಕು. ಹಾಗೆ ಮಾಡುವ ಆರಾಧಕನು ದೇವಿಯ ಪ್ರಸಾದದಿಂದ ತೇಜೋಮಯವಿಮಾನದಿಂದ ಪ್ರಕಾಶಮಾನನಾದ ಸೂರ್ಯನಂತೆ ಲೋಕಗಳಲ್ಲಿ ಸಂಚರಿಸುವನು.

ಜ್ಯೇಷ್ಠಮಾಸದ ಕೃಷ್ಣಾಷ್ಟಮಿಯ ದಿನದಲ್ಲಿ ತ್ರಿಲೋಚನದೇವನನ್ನು ಪೂಜಿಸಿದರೆ ಕಲ್ಪಪರ್ಯಂತವಾಗಿ ಸಕಲದೇವತೆಗಳಿಂದಲೂ ನಮಸ್ಕರಿಸಲ್ಪಡುತ್ತಾ ಶಿವಲೋಕದಲ್ಲಿ ವಾಸಿಸುವನು.

ಜ್ಯೇಷ್ಠ ಶುಕ್ಲಾಷ್ಟಮಿಯಲ್ಲಿ ದೇವಿಯನ್ನು ಪೂಜಿಸುವ ಮನುಷ್ಯನು ಗಂಧರ್ವರ ಮತ್ತು ಅಪ್ಸರಸ್ತ್ರೀಯರುಗಳ ಸಹಿತವಾಗಿ ವಿಮಾನದಲ್ಲಿ ಸಂಚರಿಸುವನು.

ತೇನೈವ ಸ್ನಾಪಯೇದ್ದೇವೀಂ ಪೂಜಯೇಚ್ಚ ವಿಧಾನತಃ |
ತತಃ ಶುಕ್ಲಜಲೈಃ ಸ್ನಾಪ್ಯ ವಿಲಿಂಪೇತ್ಸೇಂದುಚಂದನೈಃ || ೧೦ ||

ನೈವೇದ್ಯಂ ಶರ್ಕರೋಪೇತಂ ದತ್ವಾಚಮನಮರ್ಪಯೇತ್ |
ಭೋಜಯಿತ್ವಾ ತತೋ ವಿಪ್ರಾನ್ದತ್ವಾ ಸ್ವರ್ಣಂ ಚ ದಕ್ಷಿಣಾಂ || ೧೧ ||

ವಿಸೃಜ್ಯ ಚ ತತಃ ಪಶ್ಚಾತ್ಸ್ವಯಂ ಭುಂಜೀತ ವಾಗ್ಯತಃ |
ಏತದ್ವ್ರತಂ ನರಃ ಕೃತ್ವಾ ದೇವೀಲೋಕಮವಾಪ್ನುಯಾತ್ || ೧೨ ||

ನಭಃಶುಕ್ಲೇ ತಥಾಷ್ಟಮ್ಯಾಂ ದೇವೀಮಂಬಾಂ ವಿಧಾನತಃ |
ಕ್ಷೀರೇಣ ಸ್ನಾಪಯಿತ್ವಾ ಚ ಮಿಷ್ಟಾನ್ನಂ ವಿನಿವೇದಯೇತ್ || ೧೩ ||

ತತೋ ದ್ವಿಜಾನ್ ಭೋಜಯಿತ್ವಾ ಪರೇಹ್ನಿ ತ್ವಯಮಪ್ಯುತ |
ಭುಕ್ತ್ವಾ ಸಮಾಪಯೇದೇತದ್ವ್ರತಂ ಸಂತತಿವರ್ಧನಂ || ೧೪ ||

ಆಷಾಢ ಶುಕ್ಲಾಷ್ಟಮಿಯ ದಿನದ ರಾತ್ರಿಯಲ್ಲಿ ನೀರಿನಲ್ಲಿ ಸ್ನಾನಮಾಡಿ ದೇವಿಗೆ ಅಭಿಷೇಕಮಾಡಿಸಿ, ವಿಧಾನಾನುಸಾರವಾಗಿ ಪೂಜಿಸಬೇಕು. ಅನಂತರ ಶುದ್ಧೋದಕಗಳಿಂದ ಸ್ನಾನಮಾಡಿಸಿ ಗಂಧಗಳಿಂದ ಲೇಪನೆ ಮಾಡಬೇಕು. ಸಕ್ಕರೆ ಸಹಿತವಾದ ನೈವೇದ್ಯವನ್ನರ್ಪಿಸಿ, ಆಚಮನೆಯನ್ನು ಸಮರ್ಪಿಸಬೇಕು. ಬಳಿಕ ಬ್ರಾಹ್ಮಣಭೋಜನಮಾಡಿಸಿ ಅವರಿಗೆ ಸುವರ್ಣದಕ್ಷಿಣೆಯನ್ನು ಕೊಟ್ಟು, ವಿಸರ್ಜನೆಮಾಡಿ ನಿಯಮ ಪೂರ್ವಕವಾಗಿ ಯಜಮಾನನು ಊಟಮಾಡಬೇಕು. ಈ ವ್ರತವನ್ನಾಚರಿಸುವ ಮನುಷ್ಯನು ದೇವಿಯ ಲೋಕವನ್ನು ಹೊಂದುವನು.

೧೩. ಶ್ರಾವಣ ಶುಕ್ಲಾಷ್ಟಮಿಯ ದಿನದಲ್ಲಿ ಅಂಬಾದೇವಿಗೆ ವಿಧ್ಯುಕ್ತ ಪ್ರಕಾರ ಕ್ಷೀರಾಭಿಷೇಕಮಾಡಿಸಿ ಮೃಷ್ಟಾನ್ನ ನೈವೇದ್ಯವನ್ನು ಅರ್ಪಿಸಬೇಕು.

೧೪. ಮಾರನೆಯ ದಿವಸ ಬ್ರಾಹ್ಮಣ ಭೋಜನಮಾಡಿಸಿ ತಾನೂ ಭೋಜನಮಾಡಿ ಸಂತಾನವರ್ಧಕವಾದ ಈ ವ್ರತವನ್ನು ಪೂರ್ತಿಗೊಳಿಸಬೇಕು.

ನಭೋಮಾಸೇ ಸಿತಾಷ್ಟಮ್ಯಾಂ ದಶಾಫಲಮಿತಿ ವ್ರತಂ ।
ಉಪವಾಸಂ ತು ಸಂಕಲ್ಪ್ಯ ಸ್ನಾತ್ವಾ ಕೃತ್ವಾ ಚ ನೈತ್ತಿಕಂ ॥ ೧೫ ॥

ತುಲಸ್ಯಾಃ ಕೃಷ್ಣವರ್ಣಾಯಾ ದಲೈರ್ದಶಭಿರರ್ಚಯೇತ್ ।
ಕೃಷ್ಣಂ ವಿಷ್ಣುಂ ತಥಾನಂತಂ ಗೋವಿಂದಂ ಗರುಡಧ್ವಜಂ ॥ ೧೬ ॥

ದಾಮೋದರಂ ಹೃಷೀಕೇಶಂ ಪದ್ಮನಾಭಂ ಹರಿಂ ಪ್ರಭುಂ ।
ಏತೈಶ್ಚ ನಾಮಭಿರ್ನಿತ್ಯಂ ಕೃಷ್ಣದೇವಂ ಸಮರ್ಚಯೇತ್ ॥ ೧೭ ॥

ನಮಸ್ಕಾರಂ ತತಃ ಕುರ್ಯಾತ್ಪ್ರದಕ್ಷಿಣಸಮನ್ವಿತಂ ।
ಏವಂ ದಶದಿನಂ ಕುರ್ಯಾದ್ವ್ರತಾನಾಮುತ್ತಮಂ ವ್ರತಂ ॥ ೧೮ ॥

---

೧೫-೧೭. ಶ್ರಾವಣ ಕೃಷ್ಣಾಷ್ಟಮಿಯದಿನದಲ್ಲಿ ದಶಾಫಲವೆಂಬ ವ್ರತವು ವಿಹಿತವಾಗಿದೆ. ಆಗ ಉಪವಾಸವನ್ನು ಸಂಕಲ್ಪಿಸಿ ಸ್ನಾನವಮಾಡಿ ನಿತ್ಯಕರ್ಮವನ್ನಾಚರಿಸಿ ಕೃಷ್ಣತುಲಸಿಯ ಹತ್ತು ದಳಗಳನ್ನು ಪ್ರತ್ಯೇಕವಾಗಿ ಕೃಷ್ಣ, ವಿಷ್ಣು, ಅನಂತ, ಗೋವಿಂದ, ಗರುಡಧ್ವಜ, ದಾಮೋದರ, ಹೃಷೀಕೇಶ, ಪದ್ಮನಾಭ, ಹರಿ, ಪ್ರಭು ಎಂಬೀ ಹತ್ತು ನಾಮಗಳಿಂದ ನಿತ್ಯವೂ ಕೃಷ್ಣದೇವನನ್ನು ಪೂಜಿಸಬೇಕು.

೧೮. ಬಳಿಕ ಪ್ರದಕ್ಷಿಣೆನಮಸ್ಕಾರಗಳನ್ನು ಮಾಡಬೇಕು. ಈರೀತಿಯಾಗಿ ಈ ವ್ರತವನ್ನು ಹತ್ತು ದಿನಗಳು ಮಾಡಬೇಕು. ಇದು ವ್ರತಗಳಲ್ಲೆಲ್ಲಾ ಉತ್ತಮವಾದ ವ್ರತವು.

ಆದೌ ಮಧ್ಯೇ ತಥಾ ಚಾಂತ್ಯೇ ಹೋಮಂ ಕುರ್ಯಾದ್ವಿಧಾನತಃ ।
ಕೃಷ್ಣಮಂತ್ರೇಣ ಜುಹುಯಾಚ್ಚರುಣಾಷ್ಟೋತ್ತರಂ ಶತಂ ॥ ೧೯ ॥

ಹೋಮಾಂತೇ ವಿಧಿನಾ ಸಮ್ಯಗಾಚಾರ್ಯಂ ಪೂಜಯೇತ್ಸುಧೀಃ ।
ಸೌವರ್ಣೇ ತಾಮ್ರಪಾತ್ರೇ ವಾ ಮೃನ್ಮಯೇ ವೇಣುಪಾತ್ರಕೇ ॥ ೨೦ ॥

ತುಲಸೀದಲಂ ಸುವರ್ಣೇನ ಕಾರಯಿತ್ವಾ ಸುಲಕ್ಷಣಂ ।
ಹೈಮೀಂ ಚ ಪ್ರತಿಮಾಂ ಕೃತ್ವಾ ಪೂಜಯಿತ್ವಾ ವಿಧಾನತಃ ॥ ೨೧ ॥

ನಿಧಾಯ ಪ್ರತಿಮಾಂ ಪಾತ್ರೇ ಹ್ಯಾಚಾರ್ಯಾಯ ನಿವೇದಯೇತ್ ।
ದಾತವ್ಯಾ ಗೌಃ ಸವತ್ಸಾ ಚ ವಸ್ತ್ರಾಲಂಕಾರಭೂಷಿತಾ ॥ ೨೨ ॥

ದಶಾಹಂ ಕೃಷ್ಣದೇವಾಯ ಪೂರಿಕಾ ದಶ ಚಾರ್ಪಯೇತ್ ।
ತಾಶ್ಚ ದದ್ಯಾದ್ವಿಧಿಜ್ಞಾಯ ಸ್ವಯಂ ವಾ ಭಕ್ಷಯೇದ್ವ್ರತೀ ॥ ೨೩ ॥

೧೯. ಈ ವ್ರತದ ಆದಿಮಧ್ಯಾಂತಗಳಲ್ಲಿ ವಿಧಿವತ್ತಾಗಿ ಕೃಷ್ಣಮಂತ್ರದಿಂದ ಅಷ್ಟೋತ್ತರಶತ (೧೦೮) ಚರು ಹೋಮಮಾಡಬೇಕು.

೨೦-೨೨. ವಿವೇಕಿಯಾದವನು ಹೋಮಮಾಡಿದ ಮೇಲೆ ವಿಧ್ಯುಕ್ತರೀತಿಯಿಂದ ಆಚಾರ್ಯರನ್ನು ಪೂಜಿಸಬೇಕು. ಬಂಗಾರ ಅಥವಾ ತಾಮ್ರ ಇಲ್ಲವೇ ಮಣ್ಣು ಅಥವಾ ಬಿದಿರಿನಿಂದ ಮಾಡಿದ ಪಾತ್ರೆಯಲ್ಲಿ ಸುವರ್ಣಪ್ರತಿಮೆಯನ್ನು ಸ್ಥಾಪಿಸಿ, ಸಲಕ್ಷಣವಾದ ಸುವರ್ಣತುಲಸೀದಲದಿಂದ ಅದನ್ನು ಪೂಜಿಸಿ ಪಾತ್ರೆಯ ಸಹಿತ ಪ್ರತಿಮೆಯನ್ನು ಆಚಾರ್ಯರಿಗೆ ನಿವೇದನೆಮಾಡಬೇಕು. ಅದರ ಜೊತೆಗೆ ಕರುವಿನಿಂದ ಸಹಿತವಾದ ವಸ್ತ್ರಾಭರಣಗಳಿಂದಲಂಕರಿಸಲ್ಪಟ್ಟ ಗೋವನ್ನೂ ಸಹ ದಾನಮಾಡಬೇಕು.

೨೩. ಹತ್ತುದಿನಗಳೂ ಕೃಷ್ಣದೇವನಿಗೆ ಹತ್ತು ಪೂರಿಗಳನ್ನು ಸಮರ್ಪಿಸಿ ಅವನ್ನು ವಿಧಿಜ್ಞನಾದ ಬ್ರಾಹ್ಮಣನಿಗೆ ಕೊಡಬೇಕು ಅಥವಾ ಯಜಮಾನನು ತಾನಾದರೂ ತಿನ್ನಬೇಕು.

ಶಯನಂ ಚ ಪ್ರದಾತವ್ಯಂ ಯಥಾಶಕ್ತಿ ದ್ವಿಜೋತ್ತಮ ।
ದಶಮೇಹ್ನಿ ತತೋ ಮೂರ್ತಿಂ ಸದ್ರವ್ಯಾಂ ಗುರವೇರ್ಪಯೇತ್ ॥ ೨೪ ॥

ವ್ರತಾಂತೇ ದಶವಿಪ್ರೇಭ್ಯಃ ಪ್ರತ್ಯೇಕಂ ದಶಪೂರಿಕಾಃ ।
ದದ್ಯಾದೇವಂ ದಶಾಬ್ದಂ ತು ಕೃತ್ವಾ ವ್ರತಮನುತ್ತಮಂ ॥ ೨೫ ॥

ಉಪೋಷ್ಯ ವಿಧಿನಾ ಭೂಯಾತ್ಸರ್ವಕಾಮಸಮನ್ವಿತಃ ।
ಅಂತೇ ಕೃಷ್ಣಸ್ಯ ಸಾಯುಜ್ಯಂ ಲಭತೇ ನಾತ್ರ ಸಂಶಯಃ ॥ ೨೬ ॥

ಕೃಷ್ಣಜನ್ಮಾಷ್ಟಮೀ ಚೇಯಂ ಸ್ಮೃತಾ ಪಾಪಹರಾ ನೃಣಾಂ ।
ಕೇವಲೇನೋಪವಾಸೇನ ತಸ್ಮಿನ್ ಜನ್ಮದಿನೇ ಹರೇಃ ॥ ೨೭ ॥

ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ।
ಉಪವಾಸೀ ತಿಲೈಃ ಸ್ನಾತೋ ನದ್ಯಾದೌ ವಿಮಲೇ ಜಲೇ ॥ ೨೮ ॥

---

೨೪. ದ್ವಿಜೋತ್ತಮನೇ! ತನ್ನ ಶಕ್ತ್ಯನುಸಾರ ಶಯನದಾನ ಮಾಡಬೇಕು. ಹೀಗೆ ಒಂಬತ್ತು ದಿನಗಳಾದಮೇಲೆ ಹತ್ತನೆಯದಿನ ಪೂಜಾನಂತರ ದ್ರವ್ಯಸಹಿತವಾಗಿ ಮೂರ್ತಿಯನ್ನು ಗುರುಗಳಿಗೆ ಸಮರ್ಪಿಸಬೇಕು.

೨೫-೨೬. ಈ ವ್ರತದ ಕೊನೆಯಲ್ಲಿ ಪ್ರತ್ಯೇಕವಾಗಿ ಹತ್ತು ಪೂರಿಗಳಂತೆ ಹತ್ತು ಬ್ರಾಹ್ಮಣರಿಗೆ ದಾನಮಾಡಬೇಕು. ಈರೀತಿ ಹತ್ತುವರ್ಷ ಉಪವಾಸಾದಿ ವಿಧಾನದಿಂದ ಸರ್ವೋತ್ತಮವಾದ ಈ ವ್ರತವನ್ನು ಮಾಡಿದರೆ ಅವನು ಸಕಲೇಷ್ಟಾರ್ಥಸಂಪನ್ನನಾಗಿ ಕೊನೆಯಲ್ಲಿ ಕೃಷ್ಣಸಾಯುಜ್ಯವನ್ನು ಪಡೆಯುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೨೭-೨೮. ಇದೇ ಮನುಷ್ಯರಿಗೆ ಪಾಪಪರಿಹಾರಕವಾದ ಕೃಷ್ಣಜನ್ಮಾಷ್ಟಮಿ ಎಂದು ವಿಹಿತವಾಗಿದೆ. ಹರಿಯ ಜನ್ಮದಿನವಾದ ಈ ತಿಥಿಯಲ್ಲಿ ಕೇವಲ ಉಪವಾಸಮಾಡುವುದರಿಂದ ಏಳು ಜನ್ಮಗಳಲ್ಲಿ ಮಾಡಿದ ಪಾಪದಿಂದ ಮುಕ್ತನಾಗುವನು. ಸಂದೇಹವಿಲ್ಲ.

ಸುದೇಶೇ ಮಂಡಪೇ ಕ್ಲಪ್ತೇ ಮಂಡಲಂ ರಚಯೇತ್ಸುಧೀಃ |
ತನ್ಮಧ್ಯೇ ಕಲಶಂ ಸ್ಥಾಪ್ಯ ತಾಮ್ರಜಂ ವಾಪಿ ಮೃನ್ಮಯಂ || ೨೯ ||

ತಸ್ಯೋಪರಿ ನ್ಯಸೇತ್ಪಾತ್ರಂ ತಾಮ್ರಂ ತಸ್ಯೋಪರಿಸ್ಥಿತಾಂ |
ಹೇಮ್ನಾ ವಸ್ತ್ರಯುಗಚ್ಛನ್ನಾಂ ಕೃಷ್ಣಸ್ಯ ಪ್ರತಿಮಾಂ ಶುಭಾಂ || ೩೦ ||

ಪಾದ್ಯಾದ್ಯೈರುಪಚಾರೈಸ್ತು ಪೂಜಯೇತ್ಸ್ನಿಗ್ಧಮಾನಸಃ |
ದೇವಕೀಂ ವಸುದೇವಂ ಚ ಯಶೋದಾಂ ನಂದಮೇವ ಚ || ೩೧ ||

ವ್ರಜಂ ಗೋಪಾಂಸ್ತಥಾ ಗೋಪೀರ್ಗಾಶ್ಚ ದಿಕ್ಷು ಸಮರ್ಚಯೇತ್ |
ತತ ಆರಾರ್ತಿಕಂ ಕೃತ್ವಾ ಕ್ಷಮಾಪ್ಯಾನಮ್ಯ ಭಕ್ತಿತಃ || ೩೨ ||

ತಿಷ್ಠೇತ್ತತ್ರೈವಾರ್ಧರಾತ್ರೇ ಪುನಃ ಸಂಸ್ನಾಪಯೇದ್ಧರಿಂ |
ಪಂಚಾಮೃತೈಃ ಶುದ್ಧಜಲೈಃ ಗಂಧಾದ್ಯೈಃ ಪೂಜಯೇತ್ಪುನಃ || ೩೩ ||

ವಿಧಾನ:—ಉಪವಾಸಿಯು ನದೀ ಮುಂತಾದ ನಿರ್ಮಲ ಜಲದಲ್ಲಿ ಸ್ನಾನ ಮಾಡಿ ಪರಿಶುದ್ಧಪ್ರದೇಶದಲ್ಲಿ ರಚಿಸಿದ ಮಂಟಪದಲ್ಲಿ ಮಂಡಲಮಾಡಿ ಅದರ ಮಧ್ಯದಲ್ಲಿ ತಾಮ್ರ ಅಥವಾ ಮಣ್ಣಿನ ಕಲಶವನ್ನು ಸ್ಥಾಪಿಸಿ, ಅದರಮೇಲೆ ತಾಮ್ರ ಪಾತ್ರೆಯನ್ನಿಟ್ಟು ಅದರಮೇಲೆ ಸ್ಥಾಪಿಸಿದ, ಎರಡು ವಸ್ತ್ರಗಳನ್ನು ಹೊದಿಸಿದ, ಬಂಗಾರದ ಕೃಷ್ಣಪ್ರತಿಮೆಯನ್ನು ಸ್ನೇಹ ಯುಕ್ತ ಮನಸ್ಸುಳ್ಳವನಾಗಿ ಪಾದ್ಯಾದ್ಯುಪಚಾರಗಳಿಂದ ಪೂಜಿಸಬೇಕು. ಬಳಿಕ ಎಂಟು ದಿಕ್ಕುಗಳಲ್ಲಿ ಕ್ರಮವಾಗಿ ದೇವಕೀ ವಸುದೇವ, ಯಶೋದಾ ನಂದಗೋಪ, ಗೋಕುಲ, ಗೋಪಾಲಕರು, ಗೋಪಿಕಾಸ್ತ್ರೀಯರು, ಗೋವು ಇವನ್ನು ಪೂಜಿಸಬೇಕು. ಅನಂತರ ಆರತಿಯನ್ನು ಮಾಡಿ ಭಕ್ತಿಯಿಂದ ಕ್ಷಮಾಪಣೆಬೇಡಿ ನಮಸ್ಕರಿಸಿ ಹಾಗೆಯೇ ಇರಬೇಕು. ಪುನಃ ಅರ್ಧರಾತ್ರಿಯಲ್ಲಿ ಹರಿಗೆ ಪಂಚಾಮೃತ, ಶುದ್ಧೋದಕಗಳಿಂದ ಸ್ನಾನಮಾಡಿಸಿ ಗಂಧಾದಿಗಳಿಂದ ಪೂಜೆಮಾಡಬೇಕು.

ಧಾನ್ಯಾಕಂ ಚ ಯವಾನೀಂ ಚ ಶುಂಠೀಂ ಖಂಡಂ ಚ ನಾರದ |
ಸಾಜ್ಯಂ ರೌಪ್ಯೇ ಧೃತಂ ಪಾತ್ರೇ ನೈವೇದ್ಯಂ ವಿನಿವೇದಯೇತ್ || ೩೪ ||

ಪುನರಾರಾರ್ತಿಕಂ ಕೃತ್ವಾ ದಶಧಾ ರೂಪಧಾರಿಣಂ |
ವಿಚಿಂತಯನ್ಮೃಗಾಂಕಾಯ ದದ್ಯಾದರ್ಘ್ಯಂ ಸಮುದ್ಯತೇ || ೩೫ ||

ತತಃ ಕ್ಷಮಾಪ್ಯ ದೇವೇಶಂ ರಾತ್ರಿಖಂಡಂ ನಯೇದ್ವ್ರತೀ |
ಪೌರಾಣಿಕೈಃ ಸ್ತೋತ್ರಪಾಠೈರ್ಗೀತವಾದ್ಯೈರನೇಕಧಾ || ೩೬ ||

ತತಃ ಪ್ರಭಾತೇ ವಿಪ್ರಾಗ್ರ್ಯಾನ್ಭೋಜಯೇನ್ಮಧುರಾನ್ನಕೈಃ |
ದತ್ವಾ ಚ ದಕ್ಷಿಣಾಂ ತೇಭ್ಯೋ ವಿಸೃಜೇತ್ತುಷ್ಟಮಾನಸಃ || ೩೭ ||

ತತಸ್ತಾಂ ಪ್ರತಿಮಾಂ ವಿಷ್ಣೋಃ ಸ್ವರ್ಣಧೇನುಧರಾನ್ವಿತಾಂ |
ಗುರವೇ ದಕ್ಷಿಣಾಂ ದತ್ವಾ ವಿಸೃಜ್ಯಾಶ್ನೀತ ಚ ಸ್ವಯಂ || ೩೮ ||

---

೩೪. ಕೊತ್ತಂಬರಿ, ಓಮು, ಶುಂಠಿ, ತುಪ್ಪಸಹಿತ ಸಕ್ಕರೆಗಳನ್ನೂ, ಬೆಳ್ಳಿಯಪಾತ್ರೆಯಲ್ಲಿ ತುಪ್ಪವನ್ನೂ ನೈವೇದ್ಯಮಾಡಬೇಕು.

೩೫. ಬಳಿಕ ಪುನಃ ಆರತಿಮಾಡಿ ಹತ್ತುವಿಧ ರೂಪಧಾರಿಯಾದ ಕೃಷ್ಣ ನನ್ನು ಧ್ಯಾನಿಸುತ್ತಾ, ಉದಯಿಸುತ್ತಿರುವ ಚಂದ್ರನಿಗೆ ಅರ್ಘ್ಯವನ್ನು ಕೊಡಬೇಕು.

೩೬. ತರುವಾಯ ದೇವೇಶನನ್ನು ಕ್ಷಮಾಪಣೆಬೇಡಿ ವ್ರತಿಯು ಪುರಾಣೋಕ್ತ ಸ್ತೋತ್ರಪಾಠಗಳು, ಅನೇಕವಿಧಗಾನ, ವಾದ್ಯ ಇವುಗಳಿಂದ ಉಳಿದ ರಾತ್ರಿಭಾಗವನ್ನು ಕಳೆಯಬೇಕು.

೩೭. ಬೆಳಗಾದಮೇಲೆ ಮಧುರಾನ್ನಗಳಿಂದ ಬ್ರಾಹ್ಮಣಶ್ರೇಷ್ಠರಿಗೆ ಭೋಜನಮಾಡಿಸಿ, ಅವರಿಗೆ ದಕ್ಷಿಣೆಕೊಟ್ಟು ಸಂತುಷ್ಟಚಿತ್ತನಾಗಿ ವಿಸರ್ಜನೆ ಮಾಡಬೇಕು.

೩೮-೩೯. ತರುವಾಯ ಆ ವಿಷ್ಣುಪ್ರತಿಮೆಯನ್ನು ಸುವರ್ಣಧೇನು, ಧರಾಸಹಿತವಾಗಿ ಗುರುಗಳಿಗೆ ದಕ್ಷಿಣೆಕೊಟ್ಟು, ವಿಸರ್ಜನೆಮಾಡಿ ಯಜಮಾನನು

ದಾರಾಪತ್ಯಸುಹೃದ್ಭೃತ್ಯೈರೇವಂ ಕೃತ್ವಾ ವ್ರತಂ ನರಃ |
ಸಾಕ್ಷಾದ್ಗೋಲೋಕಮಾಪ್ನೋತಿ ವಿಮಾನವರಮಾಸ್ಥಿತಃ || ೩೯ ||

ನೈತೇನ ಸದೃಶಂ ಚಾನ್ಯದ್ವ್ರತಮಸ್ತಿ ಜಗತ್ರಯೇ |
ಕೃತೇನ ಯೇನ ಲಭ್ಯೇತ ಕೋಟ್ಯೈಕಾದಶಕಂ ಫಲಂ || ೪೦ ||

ಶುಕ್ಲಾಷ್ಟಮ್ಯಾಂ ನಭಸ್ಯಸ್ಯ ಕುರ್ಯಾದ್ರಾಧಾವ್ರತಂ ನರಃ |
ಪೂರ್ವವದ್ರಾಧಿಕಾಂ ಹೈಮೀಂ ಕಲಶಸ್ಥಾಂ ಪ್ರಪೂಜಯೇತ್ || ೪೧ ||

ಮಧ್ಯಾಹ್ನೇ ಪೂಜಯಿತ್ವೇನಾಮೇಕಭುಕ್ತಂ ಸಮಾಚರೇತ್ |
ಶಕ್ತೋ ಭಕ್ತಶ್ಚೋಪವಾಸಂ ಪರೇಹ್ನಿ ವಿಧಿನಾ ತತಃ || ೪೨ ||

ಸುವಾಸಿನೀರ್ಭೋಜಯಿತ್ವಾ ಗುರವೇ ಪ್ರತಿಮಾರ್ಪಣಂ |
ಕೃತ್ವಾ ಚ ಸ್ವಯಂ ಚ ಭುಂಜೀತ ವ್ರತಮೇವಂ ಸಮಾಪಯೇತ್ || ೪೩ ||

---

ಹೆಂಡತಿ, ಮಕ್ಕಳು, ಮಿತ್ರ, ಭೃತ್ಯರ ಸಹಿತವಾಗಿ ಭೋಜನಮಾಡಬೇಕು. ಈ ರೀತಿ ವ್ರತವನ್ನಾಚರಿಸಿದ ಮನುಷ್ಯನು ಉತ್ಕೃಷ್ಟವಿಮಾನದಲ್ಲಿ ಕುಳಿತು ಸಾಕ್ಷಾದ್ಗೋಲೋಕವನ್ನು ಪಡೆಯುವನು.

೪೦. ಮೂರುಲೋಕಗಳಲ್ಲಿಯೂ ಇದಕ್ಕೆ ಸಮಾನವಾದ ಬೇರೆ ವ್ರತ ವಿಲ್ಲ. ಈ ವ್ರತವನ್ನಾಚರಿಸಿದರೆ ಕೋಟಿ ಏಕಾದಶಿಯ ಫಲವು ಲಭಿಸುವುದು.

೪೧. ಭಾದ್ರಪದ ಶುಕ್ಲಾಷ್ಟಮಿಯ ದಿನದಲ್ಲಿ ಮನುಜನು ರಾಧಾವ್ರತ ವನ್ನು ಮಾಡಬೇಕು. ಪೂರ್ವದಂತೆ ಕಲಶಸ್ಥಿತಳಾದ ಸುವರ್ಣಮಯ ರಾಧಾ ದೇವಿಯನ್ನು ಪೂಜಿಸಬೇಕು.

೪೨-೪೩. ಮಧ್ಯಾಹ್ನದಲ್ಲಿ ಈ ರಾಧಾದೇವಿಯನ್ನು ಪೂಜಿಸಿ ಏಕಭುಕ್ತ ವನ್ನಾಚರಿಸಬೇಕು. ಸಮರ್ಥನಾದರೆ ಅಂತಹ ಭಕ್ತನು ಉಪವಾಸ ಮಾಡಿ, ಮಾರನೆಯ ದಿನ ವಿಧ್ಯುಕ್ತಪ್ರಕಾರ ಮುತ್ತೈದೆಯರಿಗೆ ಭೋಜನಮಾಡಿಸಿ, ಗುರುಗಳಿಗೆ ಪ್ರತಿಮಾಸಮರ್ಪಣೆಮಾಡಿ ತಾನೂ ಭೋಜನಮಾಡಿ ವ್ರತವನ್ನು ಪೂರ್ತಿಗೊಳಿಸಬೇಕು.

ವ್ರತೇನಾನೇನ ವಿಪ್ರರ್ಷೇ ಕೃತೇನ ವಿಧಿನಾ ವ್ರತೀ ।
ರಹಸ್ಯಂ ಗೋಷ್ಠಜಂ ಲಬ್ಧ್ವಾ ರಾಧಾಪರಿಕರೇ ವಸೇತ್ ॥ ೪೪ ॥

ದೂರ್ವಾಷ್ಟಮೀವ್ರತಂ ಚಾತ್ರ ಕಥಿತಂ ತಚ್ಚ ಮೇ ಶೃಣು ।
ಶುಚೌ ದೇಶೇ ಪ್ರಜಾತಾಯಾಂ ದೂರ್ವಾಯಾಂ ದ್ವಿಜಸತ್ತಮ ॥ ೪೫ ॥

ಸ್ಥಾಪ್ಯ ಲಿಂಗಂ ತತೋ ಗಂಧೈಃ ಪುಷ್ಪೈರ್ದೀಪೈಶ್ಚ ಧೂಪಕೈಃ ।
ನೈವೇದ್ಯೈರರ್ಚಯೇದ್ಭಕ್ತ್ಯಾ ದಧ್ಯಕ್ಷತಫಲಾದಿಭಿಃ ॥ ೪೬ ॥

ಅರ್ಘ್ಯಂ ಪ್ರದದ್ಯಾತ್ಪೂಜಾಂತೇ ಮಂತ್ರಾಭ್ಯಾಂ ಸುಸಮಾಹಿತಃ ।
ತ್ವಂ ದೂರ್ವೇಽಮೃತಜನ್ಮಾಸಿ ಸುರಾಸುರನಮಸ್ಕೃತೇ ॥ ೪೭ ॥

ಸೌಭಾಗ್ಯಂ ಸಂತತಿಂ ದೇಹಿ ಸರ್ವಕಾರ್ಯಕರೀ ಭವ ।
ಯಥಾ ಶಾಖಾಪ್ರಶಾಖಾಭಿರ್ವಿಸ್ತೃತಾಸಿ ಮಹೀತಲೇ ॥ ೪೮ ॥

೪೪. ವಿಪ್ರರ್ಷಿಯೇ! ವಿಧಿವತ್ತಾಗಿ ಈ ವ್ರತವನ್ನು ಮಾಡುವುದರಿಂದ ವ್ರತಿಯು ಗೋಷ್ಠಜರಹಸ್ಯವನ್ನು ಹೊಂದಿ ರಾಧಾಪರಿಕರದಲ್ಲಿ ವಾಸಿಸುವನು

೪೫-೪೬. ಈ ದಿನದಲ್ಲಿ ದೂರ್ವಾಷ್ಟಮೀವ್ರತವೂ ಸಹ ವಿಹಿತವಾಗಿದೆ. ಅದರ ವಿಧಾನವನ್ನು ಹೇಳುವೆನು ಕೇಳು. ದ್ವಿಜಶ್ರೇಷ್ಠನೇ! ಪರಿಶುದ್ಧ ಪ್ರದೇಶದಲ್ಲಿ ಹುಟ್ಟಿದ ಗರಿಕೇಹುಲ್ಲಿನಲ್ಲಿ ಲಿಂಗವನ್ನು ಸ್ಥಾಪಿಸಿ ಗಂಧ, ಪುಷ್ಪ, ಧೂಪ, ದೀಪ, ಮೊಸರು, ಅಕ್ಷತೆ ಮತ್ತು ಫಲ ಮುಂತಾದುವುಗಳಿಂದ ನೈವೇದ್ಯಾಂತವಾದ ಪೂಜೆಯನ್ನು ಮಾಡಬೇಕು.

೪೭-೫೦. ಪೂಜೆಯಾದ ಮೇಲೆ ಸಮಾಧಾನಮನಸ್ಕನಾಗಿ 'ಸುರಾಸುರರಿಂದ ನಮಸ್ಕೃತಳಾದ ದೂರ್ವೆಯೇ! ನೀನು ಮರಣವಿಲ್ಲದ ಜನ್ಮವನ್ನು ಹೊಂದಿರುತ್ತೀಯೆ. ನೀನು ನನಗೆ ಸೌಭಾಗ್ಯಸಂತತಿಗಳನ್ನು ಕೊಟ್ಟು ಸರ್ವಕಾರ್ಯಕಾರಿಯಾಗು. ದೂರ್ವಾದೇವತೆಯೇ! ನೀನು ಭೂಮಿಯಲ್ಲಿ ಶಾಖೋಪಶಾಖೆಗಳಿಂದ ವ್ಯಾಪಿಸಿರುವಂತೆ ಅಂತಹ ವಿಸ್ತಾರವಾದ ಸಂತಾನವನ್ನೂ ಜರಾ

ತಥಾ ವಿಸ್ತೃತಸಂತಾನಂ ದೇಹಿ ಮೇಽಪ್ಯಜರಾಮರಂ ।
ತತಃ ಪ್ರದಕ್ಷಿಣೀಕೃತ್ಯ ವಿಪ್ರಾನ್ಸಂಭೋಜ್ಯ ತತ್ರ ವೈ || ೪೯ ||

ಭುಕ್ತ್ವಾ ಸ್ವಯಂ ಗೃಹಂ ಗಚ್ಛೇದ್ದತ್ವಾ ವಿಪ್ರೇಷು ದಕ್ಷಿಣಾಂ ।
ಫಲಾನಿ ಚ ಪ್ರಶಸ್ತಾನಿ ಮಿಷ್ಟಾನಿ ಸುರಭೀಣಿ ಚ || ೫೦ ||

ಏವಂ ಪುಣ್ಯಾ ಪಾಪಹರಾ ನೃಣಾಂ ದೂರ್ವಾಷ್ಟಮೀ ದ್ವಿಜ ।
ಚತುರ್ಣಾಮಪಿ ವರ್ಣಾನಾಂ ಸ್ತ್ರೀಜನಾನಾಂ ವಿಶೇಷತಃ || ೫೧ ||

ಮಾನವೈಃ ಪೂಜಯೇದ್ದೂರ್ವಾಂ ನಾರೀ ಮೋಹಾದ್ಯಥಾವಿಧಿ ।
ಜನ್ಮಾನಿ ತ್ರೀಣಿ ವೈಧವ್ಯಂ ಲಭತೇ ಸಾ ನ ಸಂಶಯಃ || ೫೨ ||

ಯದಾ ಜ್ಯೇಷ್ಠರ್ಕ್ಷಸಂಯುಕ್ತಾ ಭವೇಚ್ಛೈಷಾಷ್ಟಮೀ ದ್ವಿಜ ।
ಜ್ಯೇಷ್ಠಾ ನಾಮ್ನೀ ತು ಸಾ ಜ್ಞೇಯಾ ಪೂಜಿತಾ ಪಾಪನಾಶಿನೀ || ೫೩ ||

ಮರಣರಾಹಿತ್ಯವನ್ನೂ ನನಗೆ ಕೊಡು ' ಎಂಬ ಮೂರು ಮಂತ್ರಗಳನ್ನು ಹೇಳಿ ಅವುಗಳಿಂದ ಅರ್ಘ್ಯವನ್ನು ಕೊಡಬೇಕು ನಂತರ ಪ್ರದಕ್ಷಿಣೆಮಾಡಿ ಬ್ರಾಹ್ಮಣ ಭೋಜನಮಾಡಿಸಿ, ತಾನೂ ಭೋಜನಮಾಡಿ, ಬ್ರಾಹ್ಮಣರಿಗೆ ದಕ್ಷಿಣೆ, ಒಳ್ಳೆಯ ಹಣ್ಣು, ಮಿಷ್ಟಗಳು, ಸುಗಂಧದ್ರವ್ಯ ಇವುಗಳನ್ನು ಕೊಟ್ಟು ಮನೆಗೆ ಹೋಗಬೇಕು.

೫೧-೫೨. ದ್ವಿಜನೇ ! ಈ ರೀತಿ ಮನುಷ್ಯರಿಗೆ ದೂರ್ವಾಷ್ಟಮಿಯು ಪಾಪಪರಿಹಾರಕವೂ ಪುಣ್ಯಪ್ರದವೂ ಆಗಿದೆ ನಾಲ್ಕು ವರ್ಣಗಳ ಸ್ತ್ರೀಜನರು ವಿಶೇಷವಾಗಿ ಪುರುಷರಿಂದ ವಿಧಿವತ್ತಾಗಿ ದೂರ್ವಾಪೂಜೆಯನ್ನು ಮಾಡಿಸಬೇಕು. ಸ್ತ್ರೀಯು ಮೋಹದಿಂದ ತಾನೇ ಪೂಜೆಮಾಡಿದರೆ ಅವಳಿಗೆ ಮೂರು ಜನ್ಮಗಳಲ್ಲಿ ವೈಧವ್ಯಬರುತ್ತದೆ, ಸಂದೇಹವಿಲ್ಲ.

೫೩-೫೪. ದ್ವಿಜನೇ ! ಈ ಅಷ್ಟಮಿಯು ಜ್ಯೇಷ್ಠಾನಕ್ಷತ್ರಸಹಿತವಾದರೆ ಅದನ್ನು ಜ್ಯೇಷ್ಠಾ ಎಂಬುದಾಗಿ ತಿಳಿಯಬೇಕು. ಆ ದಿನ ಪೂಜೆಮಾಡಿದರೆ

ಅಥೈನಾಂ ತು ಸಮಾರಭ್ಯ ವ್ರತಂ ಷೋಡಶವಾಸರಂ ।
ಮಹಾಲಕ್ಷ್ಮ್ಯಾಃ ಸಮುದ್ದಿಷ್ಟಂ ಸರ್ವಸಂಪದ್ವಿವರ್ಧನಂ ॥ ೫೪ ॥

ಕರಿಷ್ಯೇಽಹಂ ಮಹಾಲಕ್ಷ್ಮೀವ್ರತಂ ತೇ ತತ್ಪರಾಯಣಃ ।
ತದವಿಘ್ನೇನ ಮೇ ಯಾತು ಸಮಾಪ್ತಿಂ ತ್ವತ್ಪ್ರಸಾದತಃ ॥ ೫೫ ॥

ಇತ್ಯುಚ್ಚಾರ್ಯ ತತೋ ಬದ್ಧ್ವಾ ದೋರಕಂ ದಕ್ಷಿಣೇ ಕರೇ ।
ಷೋಡಶಗ್ರಂಥಿಸಹಿತಂ ಗುಣೈಃ ಷೋಡಶಭಿರ್ಯುತಂ ॥ ೫೬ ॥

ತತೋಽನ್ವಹಂ ಮಹಾಲಕ್ಷ್ಮೀಂ ಗಂಧಾದ್ಯೈರರ್ಚಯೇದ್ವ್ರತೀ ।
ಯಾವತ್ಕೃಷ್ಣಾಷ್ಟಮೀಂ ತತ್ರ ಚರೇದುದ್ಯಾಪನಂ ಸುಧೀಃ ॥ ೫೭ ॥

ವಸ್ತ್ರಮಂಡಪಿಕಾಂ ಕೃತ್ವಾ ಸರ್ವತೋಭದ್ರಮಂಡಲೇ ।
ಕಲಶಂ ಸುಪ್ರತಿಷ್ಠಾಪ್ಯ ದೀಪಮುದ್ಯೋತಯೇತ್ತತಃ ॥ ೫೮ ॥

---

ಪಾಪಪರಿಹಾರವಾಗುವುದು. ಆ ದಿನದಿಂದ ಹದಿನಾರು ದಿನಗಳು ಸಕಲಸಂಪದಭಿವರ್ಧಕವಾದ ಮಹಾಲಕ್ಷ್ಮೀವ್ರತವು ವಿಹಿತವಾಗಿದೆ.

೫೫-೫೭. 'ಮಹಾಲಕ್ಷ್ಮಿಯೇ! ಭಕ್ತನಾದ ನಾನು ನಿನ್ನ ವ್ರತವನ್ನು ಮಾಡುವೆನು. ನಿನ್ನ ಅನುಗ್ರಹದಿಂದ ಅದು ನಿರ್ವಿಘ್ನವಾಗಿ ಸಮಾಪ್ತಿಯನ್ನು ಹೊಂದಬೇಕು' ಎಂಬುದಾಗಿ ಪ್ರಾರ್ಥಿಸಿ ಹದಿನಾರು ಗಂಟುಗಳಿಂದ ಯುಕ್ತವಾದ ಹದಿನಾರೆಳೆಗಳ ದಾರವನ್ನು ಬಲಗೈಯಲ್ಲಿ ಕಟ್ಟಿಕೊಂಡು, ವ್ರತಿಯು ಕೃಷ್ಣಾಷ್ಟಮಿಯ ಪರ್ಯಂತವಾಗಿ ಪ್ರತಿದಿನದಲ್ಲಿಯೂ ಗಂಧಾದಿಗಳಿಂದ ಮಹಾಲಕ್ಷ್ಮಿಯನ್ನು ಪೂಜಿಸಬೇಕು. ಬಳಿಕ ಉದ್ಯಾಪನೆಮಾಡಬೇಕು.

೫೮. ಅದರ ವಿಧಾನ:—ಸರ್ವತೋಭದ್ರಮಂಡಲದಲ್ಲಿ ವಸ್ತ್ರಮಂಟಪವನ್ನು ರಚಿಸಿ, ಅಲ್ಲಿ ಕಲಶಸ್ಥಾಪನೆಮಾಡಿ, ದೀಪವನ್ನು ಬೆಳಗಬೇಕು.

ಉತ್ತಾರ್ಯರ್ದೋರಕಂ ಬಾಹೋಃ ಕುಂಭಸ್ಯಾಧೋ ನಿವೇದಯೇತ್ ।
ಚತಸ್ರಃ ಪ್ರತಿಮಾಃ ಕೃತ್ವಾ ಸೌವರ್ಣೀಸ್ತತ್ಸ್ವರೂಪಿಣೀಃ ॥ ೫೯ ॥

ಸ್ನಪನಂ ಕಾರಯೇತ್ತಾಸಾಂ ಜಲೈಃ ಪಂಚಾಮೃತೈಸ್ತಥಾ ।
ಉಪಚಾರೈಃ ಷೋಡಶಭಿಃ ಪೂಜಯಿತ್ವಾ ವಿಧಾನತಃ ॥ ೬೦ ॥

ಜಾಗರಸ್ತತ್ರ ಕರ್ತವ್ಯೋ ಗೀತವಾದಿತ್ರನಿಸ್ಸ್ವನೈಃ ।
ತತೋ ನಿಶೀಥೇ ಸಂಪ್ರಾಪ್ತೇಭ್ಯುದಿತೇಮೃತದೀಧಿತೌ ॥ ೬೧ ॥

ದತ್ವಾರ್ಘ್ಯಂ ಬಂಧನಂ ದ್ರವ್ಯೈಃ ಶ್ರೀಖಂಡಾದ್ಯೈರ್ವಿಧಾನತಃ ।
ಚಂದ್ರಮಂಡಲಸಂಸ್ಥಾಯೈ ಮಹಾಲಕ್ಷ್ಮ್ಯೈ ಪ್ರದಾಪಯೇತ್ ॥ ೬೨ ॥

ಕ್ಷೀರೋದಾರ್ಣವಸಂಭೂತ ಮಹಾಲಕ್ಷ್ಮೀಸಹೋದರ ।
ಪೀಯೂಷಧಾಮ ರೋಹಿಣ್ಯಾಃ ಸಹಿತೋಽರ್ಘ್ಯಂ ಗೃಹಾಣ ಮೇ ॥ ೬೩ ॥

---

೫೯-೬೦. ತರುವಾಯ ಬಾಹುವಿನಲ್ಲಿ ಕಟ್ಟಿಕೊಂಡಿದ್ದ ದೋರಕವನ್ನು ಬಿಚ್ಚಿ ಕಲಶದ ಅಧೋಭಾಗದಲ್ಲಿ ಇಡಬೇಕು. ಬಳಿಕ ನಾಲ್ಕು ಬಂಗಾರದ ಮಹಾಲಕ್ಷ್ಮೀಪ್ರತಿಮೆಗಳನ್ನು ಮಾಡಿಸಿ ಅವುಗಳಿಗೆ ಶುದ್ಧೋದಕ, ಪಂಚಾಮೃತ ಗಳಿಂದ ಅಭಿಷೇಕ ಮಾಡಿ, ಆವಾಹನೆ ಮುಂತಾದ ಷೋಡಶೋಪಚಾರಪೂಜೆ ಯನ್ನು ವಿಧಿವತ್ತಾಗಿ ಮಾಡಬೇಕು.

೬೧-೬೨. ಅನಂತರ ಆರಾತ್ರಿ ಗಾನ, ವಾದ್ಯ ಮುಂತಾದ ಮಂಗಳ ಧ್ವನಿಗಳನ್ನು ಮಾಡುತ್ತಾ, ಕೇಳುತ್ತಾ ಜಾಗರಣೆ ಮಾಡಬೇಕು. ಹೀಗೆ ಅರ್ಧ ರಾತ್ರಿಯವರೆಗೆ ಕಳೆದು ಆಗ ಚಂದ್ರೋದಯವಾದಮೇಲೆ ಚಂದ್ರಮಂಡಲಸ್ಥಿತ ಳಾದ ಮಹಾಲಕ್ಷ್ಮೀದೇವಿಗೆ ಅರ್ಘ್ಯವನ್ನರ್ಪಿಸಿ, ವಿಧಾನೋಕ್ತಪ್ರಕಾರ ಶ್ರೀ ಖಂಡಾದಿದ್ರವ್ಯಗಳಿಂದ ಬಂಧನವನ್ನು ಸಮರ್ಪಿಸಬೇಕು.

೬೩. 'ಕ್ಷೀರಸಮುದ್ರಜಾತನು, ಮಹಾದೇವಿಯ ಸಹೋದರನು, ಅಮೃತಕ್ಕಾಶ್ರಯನು, ರೋಹಿಣೀಸಹಿತನೂ ಆದ ಚಂದ್ರನೇ! ನನ್ನಿಂದರ್ಪಿತ ವಾದ ಅರ್ಘ್ಯವನ್ನು ಸ್ವೀಕರಿಸು.'

ಕ್ಷೀರೋದಾರ್ಣವಸಂಭೂತೇ ಕಮಲೇ ಕಮಲಾಲಯೇ ।
ವಿಷ್ಣುವಕ್ಷಸ್ಥಲಸ್ಥೇ ಮೇ ಸರ್ವಕಾಮಪ್ರದಾ ಭವ ॥ ೬೪ ॥

ಏಕನಾಥೇ ಜಗನ್ನಾಥೇ ಜಮದಗ್ನಿಪ್ರಿಯೇ ದಯೇ ।
ರೇಣುಕೇ ತ್ರಾಹಿ ಮಾಂ ದೇವಿ ರಾಮಮಾತಃ ಶಿವಂ ಕುರು ॥ ೬೫ ॥

ಮಂತ್ರೈರೇತೈರ್ಮಹಾಲಕ್ಷ್ಮೀಂ ಪ್ರಾರ್ಥ್ಯ ಶ್ರೋತ್ರಿಯಯೋಷಿತಃ ।
ಸಮ್ಯಕ್ಸಂಪೂಜ್ಯ ತಾಸ್ಸಮ್ಯಗ್ಗಂಧಯಾವಕಕಜ್ಜಲೈಃ ॥ ೬೬ ॥

ಸಂಭೋಜ್ಯ ಜುಹುಯಾದಗ್ನೌ ಬಿಲ್ವಪದ್ಮಕಪಾಯಸೈಃ ।
ತದಲಾಭೇ ಘೃತೈರ್ವಿಪ್ರ ಗೃಹೇಭ್ಯಃ ಸಮಿಧಸ್ತಿಲಾನ್ ॥ ೬೭ ॥

ಮೃತ್ಯುಂಜಯಾಯ ಚ ಪರಂ ಸರ್ವರೋಗಪ್ರಶಾಂತಯೇ ।
ಚಂಪಕಂ ತಾಲಪತ್ರಂ ಚ ಪುಷ್ಪಮಾಲಾಂ ತಥಾಕ್ಷತಾನ್ ॥ ೬೮ ॥

---

೬೪. ' ಕ್ಷೀರಸಮುದ್ರಜಾತಳು, ಕಮಲಾಲಯಳೂ, ವಿಷ್ಣುದೇವನ ವಕ್ಷಸ್ಥಳದಲ್ಲಿ ಇರುವವಳೂ ಆಗಿರುವ ಮಹಾಲಕ್ಷ್ಮೀಯೇ! ನನಗೆ ಸಕಲೇಷ್ಟಾರ್ಥಗಳನ್ನೂ ದಯೆಪಾಲಿಸು '

೬೫ 'ಮುಖ್ಯನಾಥಳು, ಜಗನ್ನಾಥಳು, ಜಮದಗ್ನಿಮುನಿ ಭಾರ್ಯೆಯು, ಪರಶುರಾಮಜನನಿಯೂ ಆದ ರೇಣುಕಾದೇವಿಯೇ! ನನ್ನನ್ನು ರಕ್ಷಿಸು. ಕಲ್ಯಾಣವನ್ನುಂಟುಮಾಡು. ''

೬೬-೭೧. ಎಂಬೀ ಮಂತ್ರಗಳಿಂದ ಮಹಾಲಕ್ಷ್ಮೀದೇವಿಯನ್ನು ಪ್ರಾರ್ಥಿಸಿ ಶ್ರೋತ್ರಿಯ ಸ್ತ್ರೀಜನರನ್ನು ಗಂಧ, ಯಾವಕ, ಕಜ್ಜಲಗಳಿಂದ ಚೆನ್ನಾಗಿ ಪೂಜಿಸಿ ಆ ಮುತ್ತೈದೆಯರಿಗೆ ಭೋಜನಮಾಡಿಸಿ, ಅಗ್ನಿಯಲ್ಲಿ ಬಿಲ್ವಪತ್ರೆ, ಪದ್ಮ, ಪಾಯಸಗಳ ಹೋಮಮಾಡಬೇಕು ಅವು ಸಿಕ್ಕದಿದ್ದರೆ ಘೃತದಿಂದ ಹೋಮಮಾಡಬೇಕು ಸಕಲರೋಗಗಳೂ ವಾಸಿಯಾಗುವುದಕ್ಕಾಗಿ ಮೃತ್ಯುಂಜಯನಿಗೆ ಸಮಿತ್ತು ಮತ್ತು ಎಳ್ಳಿನ ಹೋಮಮಾಡಬೇಕು.

ದೂರ್ವಾಂ ಕೌಸುಂಭಸೂತ್ರಂ ಚ ಯುಗಂ ಶ್ರೀಫಲಮೇವ ವಾ ।
ಭಕ್ಷ್ಯಾಣಿ ಚ ನವೇ ಶೂರ್ಪೇ ಪ್ರತಿದ್ರವ್ಯಂ ತು ಷೋಡಶ ॥ ೭೯ ॥

ಸಮಾಚ್ಛಾದ್ಯಾನ್ಯಶೂರ್ಪೇಣ ವ್ರತೀ ದದ್ಯಾತ್ಸಮಂತ್ರಕಂ ।
ಕ್ಷೀರೋದಾರ್ಣವಸಂಭೂತಾ ಲಕ್ಷ್ಮೀಶ್ಚಂದ್ರಸಹೋದರಾ ॥ ೭೦ ॥

ವ್ರತೇನಾನೇನ ಸಂತುಷ್ಟಾ ಭವತಾದ್ವಿಷ್ಣುವಲ್ಲಭಾ ।
ಚತಸ್ರಃ ಪ್ರತಿಮಾಸ್ತಾಸ್ತು ಶ್ರೋತ್ರಿಯೇಭ್ಯಃ ಸಮರ್ಪಯೇತ್ ॥ ೭೧ ॥

ತತಸ್ತು ಚತುರೋ ವಿಪ್ರಾನ್ ಷೋಡಶಾಪಿ ಸುವಾಸಿನೀಃ ।
ಮಿಷ್ಟಾನ್ನೇನಾಶಯಿತ್ವಾ ತು ವಿಸೃಜೇತ್ತಾಸ್ಸದಕ್ಷಿಣಾಃ ॥ ೭೨ ॥

ಸಮಾಪ್ಯ ನಿಯತಃ ಪಶ್ಚಾದ್ಭುಂಜೀತೇಷ್ಟೈಃ ಸಮನ್ವಿತಃ ।
ಏತದ್ವ್ರತಂ ಮಹಾಲಕ್ಷ್ಮ್ಯಾಃ ಕೃತ್ವಾ ವಿಪ್ರ ವಿಧಾನತಃ ॥ ೭೩ ॥

---

ಗಂಧ, ತಾಲಪತ್ರ, ಹೂವಿನಸರ, ಅಕ್ಷತೆ, ದೂರ್ವೆ, ಕೌಸುಂಭಸೂತ್ರ, ಶ್ರೀಫಲ ಮತ್ತು ಭಕ್ಷ್ಯ ಇವುಗಳನ್ನು ಒಂದೊಂದನ್ನೂ ಹದಿನಾರರಂತೆ ಎಲ್ಲವನ್ನೂ ಹೊಸಮರದಲ್ಲಿಟ್ಟು ಅದನ್ನು ಇನ್ನೊಂದು ಮರದಿಂದ ಮುಚ್ಚಿ ಮಂತ್ರ ಹೇಳಿ ವ್ರತಿಯು ಬ್ರಾಹ್ಮಣಪತ್ನಿಯರಿಗೆ ದಾನಮಾಡಬೇಕು

'ಕ್ಷೀರಸಾಗರಜಾತಳು, ಚಂದ್ರಸಹೋದರಳು, ವಿಷ್ಣುಭಾರ್ಯೆಯೂ ಆದ ಲಕ್ಷ್ಮೀದೇವಿಯು ಈ ವ್ರತದಿಂದ ಸಂತುಷ್ಟಳಾಗಲಿ' ಎಂದು ಪ್ರಾರ್ಥಿಸಬೇಕು. ಬಳಿಕ ಆ ನಾಲ್ಕು ಬಂಗಾರದ ಪ್ರತಿಮೆಗಳನ್ನೂ ಶ್ರೋತ್ರಿಯರಿಗೆ ಸಮರ್ಪಿಸಬೇಕು.

೭೨. ತರುವಾಯ ನಾಲ್ಕು ಬ್ರಾಹ್ಮಣರು ಮತ್ತು ಹದಿನಾರು ಮುತ್ತೈದೆಯರಿಗೆ ಮೃಷ್ಟಾನ್ನ ಭೋಜನಮಾಡಿಸಿ, ದಕ್ಷಿಣೆಕೊಟ್ಟು ವಿಸರ್ಜನೆಮಾಡಬೇಕು.

೭೩-೭೪. ಈರೀತಿ ವ್ರತವನ್ನು ಪೂರ್ತಿಗೊಳಿಸಿ ನಿಯಮಯುಕ್ತನಾಗಿ, ಇಷ್ಟ ಬಂಧುಗಳು ಮುಂತಾದವರೊಡನೆ ಯಜಮಾನನು ಭೋಜನ ಮಾಡಬೇಕು.

ಭುಕ್ತ್ವೇಷ್ಟಾನ್ಯೈಹಿಕಾನ್ ಕಾಮಾಂಲ್ಲಕ್ಷ್ಮೀಲೋಕೇ ವಸೇಚ್ಚಿರಂ ।
ಏಷಾಽಶೋಕಾಷ್ಟಮೀ ಚೋಕ್ತಾ ಯಸ್ಯಾಂ ಪೂರ್ಣರಮಾವ್ರತಂ ॥

ಅತ್ರಾಶೋಕಸ್ಯ ಪೂಜಾಸ್ಯಾದೇಕಭುಕ್ತಂ ತದಾ ಸ್ಮೃತಂ ।
ಕೃತ್ವಾಶೋಕವ್ರತಂ ನಾರೀ ಹ್ಯಶೋಕಾ ಶೋಕಜನ್ಮನಿ ॥ ೭೫ ॥

ಯತ್ರ ಕುತ್ರಾಪಿ ಸಂಜಾತಾ ನಾತ್ರ ಕಾರ್ಯಾ ವಿಚಾರಣಾ ।
ಆಶ್ವಿನೇ ಶುಕ್ಲಪಕ್ಷೇ ತು ಪ್ರೋಕ್ತಾ ವಿಪ್ರ ಮಹಾಷ್ಟಮೀ ॥ ೭೬ ॥

ತತ್ರ ದುರ್ಗಾರ್ಚನಂ ಪ್ರೋಕ್ತಂ ಸರ್ವೈರಪ್ಯುಪಚಾರಕೈಃ ।
ಉಪವಾಸಂ ಚೈಕಭುಕ್ತಂ ಮಹಾಷ್ಟಮ್ಯಾಂ ವಿಧಾಯ ತು ॥ ೭೭ ॥

---

ಬ್ರಾಹ್ಮಣನಾದ ನಾರದನೇ! ಮಹಾಲಕ್ಷ್ಮೀದೇವಿಗೆ ಈ ವ್ರತವನ್ನು ವಿಧ್ಯುಕ್ತಪ್ರಕಾರವಾಗಿ ಮಾಡಿದ ಮನುಷ್ಯನು ಇಷ್ಟವಾದ ಐಹಿಕಭೋಗಗಳನ್ನೆಲ್ಲಾ ಅನುಭವಿಸಿ, ಕೊನೆಯಲ್ಲಿ ಬಹುಕಾಲದವರೆಗೆ ಲಕ್ಷ್ಮೀಲೋಕದಲ್ಲಿ ವಾಸ ಮಾಡುವನು. ಈ ದಿನವು ಪೂರ್ಣರಮಾವ್ರತವುಳ್ಳ ಅಶೋಕಾಷ್ಟಮೀ ಎಂತಲೂ ಉಕ್ತವಾಗಿದೆ

೭೫-೭೬. ಈದಿನದಲ್ಲಿ ಅಶೋಕಪೂಜೆ, ಏಕಭುಕ್ತ ಇವು ವಿಹಿತವಾಗಿವೆ. ಅಶೋಕವ್ರತವನ್ನಾಚರಿಸಿದ ನಾರಿಯು ಯಾವ ಶೋಕಜನ್ಮದಲ್ಲಿ ಹುಟ್ಟಿದಾಗ್ಯೂ ದುಃಖಕ್ಕೆ ಈಡಾಗುವುದಿಲ್ಲ ಈ ವಿಷಯದಲ್ಲಿ ಸಂಶಯಪಡಬಾರದು.

ಆಶ್ವಯುಜಮಾಸದ ಶುಕ್ಲಾಷ್ಟಮಿಯು ಮಹಾಷ್ಟಮಿ ಎಂದು ವಿಹಿತವಾಗಿದೆ.

೭೭-೭೮. ಆದಿನ ಸಕಲೋಪಚಾರಗಳಿಂದ ದುರ್ಗಾಪೂಜೆಯು ವಿಹಿತವಾಗಿದೆ. ಆ ಮಹಾಷ್ಟಮಿಯಲ್ಲಿ ಉಪವಾಸ ಅಥವಾ ಏಕಭುಕ್ತಗಳನ್ನು ಮಾಡಿದ ಮನುಷ್ಯನು ಸಕಲವೈಭವವನ್ನೂ ಹೊಂದಿ ದೇವತೆಗಳಂತೆ ಸಂತೋಷಿಸುವನು.

ಸರ್ವತೋ ವಿಭವಂ ಪ್ರಾಪ್ಯ ಮೋದತೇ ದೇವವಚ್ಚಿರಂ |
ಊರ್ಜೇ ಕೃಷ್ಣಾದಿಕೇಪ್ಟಮ್ಯಾಂ ಕರಕಾಖ್ಯಂ ವ್ರತಂ ಸ್ಮೃತಂ || ೭೮ ||

ತತ್ರೋಮಾಸಹಿತಃ ಶಂಭುಃ ಪೂಜನೀಯಃ ಪ್ರಯತ್ನತಃ |
ಚಂದ್ರೋದಯೇಽರ್ಘ್ಯದಾನಂ ಚ ವಿಧೇಯಂ ವ್ರತಿಭಿಃ ಸದಾ || ೭೯ ||

ಪುತ್ರಂ ಸರ್ವಗುಣೋಪೇತಮಿಚ್ಛದ್ಭಿರ್ವಿವಿಧಂ ಸುಖಂ |
ಗೋಪಾಷ್ಟಮೀತಿ ಸಂಪ್ರೋಕ್ತಾ ಕಾರ್ತಿಕೇ ಧವಲೇ ದಲೇ || ೮೦ ||

ತತ್ರ ಕುರ್ಯಾದ್ಗವಾಂ ಪೂಜಾಂ ಗೋಗ್ರಾಸಂ ಗೋಪ್ರದಕ್ಷಿಣಾಂ |
ಗವಾನುಗಮನಂ ದಾನಂ ವಾಂಛನ್ ಸರ್ವಾಶ್ಚ ಸಂಪದಃ || ೮೧ ||

ಕೃಷ್ಣಾಷ್ಟಮ್ಯಾಂ ಮಾರ್ಗಶೀರ್ಷೇ ಮಿಥುನಂ ದರ್ಭನಿರ್ಮಿತಂ |
ಅನಘಾಂ ಚಾನಘಂ ತತ್ರ ಬಹುಪುತ್ರಸಮನ್ವಿತಂ || ೮೨ ||

---

ಕಾರ್ತಿಕ ಕೃಷ್ಣಾಷ್ಟಮಿಯ ದಿನದಲ್ಲಿ ಕಾರಕವೆಂಬ ವ್ರತವು ವಿಹಿತವಾಗಿದೆ.

೭೯. ಆ ವ್ರತದಲ್ಲಿ ಪಾರ್ವತೀದೇವಿಯಿಂದ ಸಹಿತನಾದ ಈಶ್ವರನನ್ನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು. ವ್ರತಿಗಳು ಚಂದ್ರೋದಯಕಾಲದಲ್ಲಿ ಅರ್ಘ್ಯವನ್ನೂ ಕೊಡಬೇಕು.

೮೦. ಸಕಲಗುಣೋಪೇತನಾದ ಪುತ್ರ ಮತ್ತು ನಾನಾವಿಧ ಸುಖಗಳನ್ನೂ ಬಯಸುವವರು ಕಾರ್ತಿಕ ಶುಕ್ಲಾಷ್ಟಮಿಯಲ್ಲಿ ವಿಹಿತವಾದ ಗೋಪಾಷ್ಟಮೀ ಎಂಬ ವ್ರತವನ್ನು ಮಾಡಬೇಕು.

೮೧. ಸಕಲಸಂಪತ್ತುಗಳನ್ನು ಬಯಸುವವನು ಆದಿನದಲ್ಲಿ ಗೋಪೂಜೆ, ಗೋಗ್ರಾಸದಾನ, ಗೋಪ್ರದಕ್ಷಿಣೆ, ಗವಾನುಗಮನ ಮತ್ತು ದಾನಗಳನ್ನು ಮಾಡಬೇಕು.

೮೨-೮೩. ಮಾರ್ಗಶೀರ್ಷ ಕೃಷ್ಣಾಷ್ಟಮಿಯ ದಿನದಲ್ಲಿ ದರ್ಭೆಯಿಂದ ರಚಿಸಿದ ಬಹುಪುತ್ರಸಹಿತರಾದ ಅನಘೆ ಮತ್ತು ಅನಘ ದಂಪತಿಗಳನ್ನು

ಸ್ಥಾಪಯಿತ್ವಾ ಶುಭೇ ದೇಶೇ ಗೋಮಯೇನೋಪಲೇಪಿತೇ ।
ಪೂಜಯೇದ್ಗಂಧಪುಷ್ಪಾದ್ಯೈರುಪಚಾರೈಃ ಪೃಥಗ್ವಿಧೈಃ ॥ ೮೩ ॥

ಸಂಭೋಜ್ಯ ದ್ವಿಜದಾಂಪತ್ಯಂ ವಿಸೃಜೇಲ್ಲಬ್ಧದಕ್ಷಿಣಂ ।
ವ್ರತಮೇತನ್ನರಃ ಕೃತ್ವಾ ನಾರೀ ವಾ ವಿಧಿಪೂರ್ವಕಂ ॥ ೮೪ ॥
ಪುತ್ರಂ ಸಲ್ಲಕ್ಷಣೋಪೇತಂ ಲಭತೇ ನಾತ್ರ ಸಂಶಯಃ ॥ ೮೫ ॥

ಮಾರ್ಗಶೀರ್ಷಸಿತಾಷ್ಟಮ್ಯಾಂ ಕಾಲಭೈರವಸನ್ನಿಧೌ ।
ಉಪೋಷ್ಯ ಜಾಗರಂ ಕೃತ್ವಾ ಮಹಾಪಾಪೈಃ ಪ್ರಮುಚ್ಯತೇ ॥ ೮೬ ॥

ಯತ್ಕಿಂಚಿದಶುಭಂ ಕರ್ಮ ಕೃತಂ ಮಾನುಷಜನ್ಮನಿ ।
ತತ್ಸರ್ವಂ ವಿಲಯಂ ಯಾತಿ ಕಾಲಭೈರವದರ್ಶನಾತ್ ॥ ೮೭ ॥

---

ಗೋಮಯದಿಂದ ಸಾರಿಸಿದ ಶುಭಪ್ರದೇಶದಲ್ಲಿ ಸ್ಥಾಪಿಸಿ, ನಾನಾವಿಧಗಳಾದ ಗಂಧಪುಷ್ಪಾದ್ಯುಪಚಾರಗಳಿಂದ ಪೂಜಿಸಬೇಕು.

೮೪-೮೫. ಬಳಿಕ ದ್ವಿಜದಂಪತಿಗಳಿಗೆ ಭೋಜನಮಾಡಿಸಿ, ದಕ್ಷಿಣೆ ಕೊಟ್ಟು ವಿಸರ್ಜನೆ ಮಾಡಬೇಕು. ಪುರುಷ ಅಥವಾ ಸ್ತ್ರೀಯಾದರೂ, ಈ ವ್ರತವನ್ನು ವಿಧಿವತ್ತಾಗಿ ಮಾಡಿದರೆ ಸಲ್ಲಕ್ಷಣಯುಕ್ತನಾದ ಪುತ್ರನನ್ನು ಪಡೆಯುವರು. ಸಂದೇಹವಿಲ್ಲ.

೮೬. ಮಾರ್ಗಶೀರ್ಷ ಶುಕ್ಲಾಷ್ಟಮಿಯಲ್ಲಿ ಕಾಲಭೈರವನ ಸನ್ನಿಧಿಯಲ್ಲಿ ಉಪವಾಸಮಾಡಿ, ಜಾಗರಣೆಮಾಡಿದವನು ಮಹಾಪಾಪಗಳಿಂದ ಮುಕ್ತನಾಗುವನು.

೮೭. ಮನುಷ್ಯಜನ್ಮದಲ್ಲಿ ಸ್ವಲ್ಪವಾಗಿ ಮಾಡಿದ ಅಶುಭಕರ್ಮವೆಲ್ಲವೂ ಕಾಲಭೈರವದರ್ಶನದಿಂದ ನಾಶವಾಗುವುವು.

ಅಥ ಪೌಷಾಸಿತಾಷ್ಟಮ್ಯಾಂ ಶ್ರಾದ್ಧಮಷ್ಟಕಸಂಜ್ಞಿತಂ |
ಪಿತೄಣಾಂ ತೃಪ್ತಿದಂ ವರ್ಷಂ ಕುಲಸಂತತಿವರ್ಧನಂ || ೮೮ ||

ಶುಕ್ಲಾಷ್ಟಮ್ಯಾಂ ತು ಪೌಷಸ್ಯ ಶಿವಂ ಸಂಪೂಜ್ಯ ಭಕ್ತಿತಃ |
ಭುಕ್ತಿಮುಕ್ತಿಮವಾಪ್ನೋತಿ ಭುಕ್ತಮೇಕಂ ಸಮಾಚರೇತ್ || ೮೯ ||

ಕೃಷ್ಣಾಷ್ಟಮ್ಯಾಂ ತು ಮಾಘಸ್ಯ ಭದ್ರಕಾಲೀಂ ಸಮರ್ಚಯೇತ್ |
ಭಕ್ತಿತೋ ವೈರಿವೃಂದಘ್ನೀಂ ಸರ್ವಕಾಮಪ್ರದಾಯಿನೀಂ || ೯೦ ||

ಮಾಘಮಾಸೇ ಸಿತಾಷ್ಟಮ್ಯಾಂ ಭೀಷ್ಮಂ ಸಂತರ್ಪಯೇದ್ದ್ವಿಜ |
ಸಂತತಿಂ ತ್ವವ್ಯವಚ್ಛಿನ್ನಾಮಿಚ್ಛಂಶ್ಚಾಪ್ಯಪರಾಜಯಂ || ೯೧ ||

ಫಾಲ್ಗುನೇ ತ್ವಸಿತಾಷ್ಟಮ್ಯಾಂ ಭೀಮಾಂ ದೇವೀಂ ಸಮರ್ಚಯೇತ್ |
ತತ್ರ ವ್ರತಪರೋ ವಿಪ್ರಃ ಸರ್ವಕಾಮಸಮೃದ್ಧಯೇ || ೯೨ ||

---

೮೮ ಪುಷ್ಯ ಕೃಷ್ಣಾಷ್ಟಮಿಯ ದಿನದಲ್ಲಿ ಪಿತೃಗಳಿಗೆ ವರ್ಷಪರ್ಯಂತರವಾಗಿ ತೃಪ್ತಿದಾಯಕವಾದ, ಕುಲ ಸಂತಾನವನ್ನು ಅಭಿವೃದ್ಧಿಗೊಳಿಸುವಂತಹ ಅಷ್ಟಕವೆಂಬ ಶ್ರಾದ್ಧವು ವಿಹಿತವಾಗಿದೆ.

೮೯. ಪುಷ್ಯಮಾಸದ ಶುಕ್ಲಾಷ್ಟಮಿಯಲ್ಲಿ ಭಕ್ತಿಯಿಂದ ಈಶ್ವರನನ್ನು ಪೂಜಿಸಿದವನು ಭೋಗಮೋಕ್ಷಗಳನ್ನು ಪಡೆಯುವನು. ಆದಿನ ಒಪ್ಪತ್ತೂಟ ಮಾಡಬೇಕು.

೯೦. ಮಾಘ ಕೃಷ್ಣಾಷ್ಟಮಿಯಲ್ಲಿ ಶತ್ರು ಸಂಘವನ್ನು ಸಂಹರಿಸುವ, ಸಕಲೇಷ್ಟಾರ್ಥದಾಯಕಳಾದ ಭದ್ರಕಾಳಿಯನ್ನು ಭಕ್ತಿಯಿಂದ ಪೂಜಿಸಬೇಕು.

೯೧. ಮಾಘ ಶುಕ್ಲಾಷ್ಟಮಿಯಲ್ಲಿ ಅವಿಚ್ಛಿನ್ನಸಂತಾನ ಮತ್ತು ಅಪರಾಜಯಗಳನ್ನು ಬಯಸುವವನು ಭೀಷ್ಮತರ್ಪಣ ಮಾಡಬೇಕು.

೯೨. ಫಾಲ್ಗುಣ ಕೃಷ್ಣಾಷ್ಟಮಿಯ ದಿನದಲ್ಲಿ ವ್ರತಪರನಾದ ಬ್ರಾಹ್ಮಣನು ತನ್ನ ಇಷ್ಟಾರ್ಥಗಳನ್ನೀಡೇರಿಸಿಕೊಳ್ಳಲು ಭೀಮಾದೇವಿಯನ್ನು ಪೂಜಿಸಬೇಕು.

ಶುಕ್ಲಾಷ್ಟಮ್ಯಾಂ ಫಾಲ್ಗುನಸ್ಯ ಶಿವಂ ಚಾಪಿ ಶಿವಾಂ ದ್ವಿಜ ।
ಗಂಧಾದ್ಯೈಃ ಸಮ್ಯಗಭ್ಯರ್ಚ್ಯ ಸರ್ವಸಿದ್ಧೀಶ್ವರೋ ಭವೇತ್ ॥ ೯೩ ॥

ಫಾಲ್ಗುನಾಪರಪಕ್ಷೇ ತು ಶೀತಲಾಮಷ್ಟಮೀ ದಿನೇ ।
ಪೂಜಯೇತ್ಸರ್ವಪಕ್ವಾನ್ನೈಃ ಸಪ್ತಮ್ಯಾಂ ವಿಧಿವತ್ಕೃತೈಃ ॥ ೯೪ ॥

ಶೀತಲೇ ತ್ವಂ ಜಗನ್ಮಾತಾ ಶೀತಲೇ ತ್ವಂ ಜಗತ್ಪಿತಾ ।
ಶೀತಲಾ ಶೀತಲಾ ದೇವೀ ಸ್ಯಾದ್ವಿಸ್ಫೋಟಕಶಾಂತಿದಾ ॥ ೯೫ ॥

ಇತ್ಯೇವಂ ಶೀತಲಾಂ ದೇವೀಂ ರಾಸಭಸ್ಥಾಂ ದಿಗಂಬರಾಂ ।
ಮಾರ್ಜನೀಕಲಶೋಪೇತಾಂ ವಿಸ್ಫೋಟಕವಿನಾಶಿನೀಂ ॥ ೯೬ ॥

ಶೀತಲೇ ಶೀತಲೇ ಚೇತ್ಥಂ ಯೇ ಜಪಂತಿ ಜಲೇಸ್ಥಿತಾಃ ।
ತೇಷಾಂ ತು ಶೀತಲಾ ದೇವೀ ಸ್ಯಾದ್ವಿಸ್ಫೋಟಕಶಾಂತಿದಾ ॥ ೯೭ ॥

---

೯೩. ಫಾಲ್ಗುಣ ಶುಕ್ಲಾಷ್ಟಮಿಯಲ್ಲಿ ಶಿವ ಮತ್ತು ಪಾರ್ವತೀದೇವಿಯುರನ್ನು ಗಂಧಾದಿಗಳಿಂದ ಚೆನ್ನಾಗಿ ಪೂಜಿಸಿದವನು ಸಕಲ ಸಿದ್ಧೀಶ್ವರನಾಗುವನ್ನು

೯೪. ಫಾಲ್ಗುಣ ಕೃಷ್ಣಪಕ್ಷದ ಅಷ್ಟಮಿಯ ದಿನದಲ್ಲಿ ಸಪ್ತಮೀದಿನವೇ ವಿಧಿವತ್ತಾಗಿ ಮಾಡಿದ ಸಕಲ ಪಕ್ವಾನ್ನಗಳಿಂದ ಶೀತಳಾದೇವಿಯನ್ನು ಪೂಜಿಸಬೇಕು.

೯೫-೯೭. "ಶೀತಲಾದೇವಿಯೇ! ನೀನು ಲೋಕಕ್ಕೆ ತಂದೆ ತಾಯಿಯಾಗಿರುವೆ. ಶೀತಳಾದೇವಿಯೇ! ನೀನು ಶೈತ್ಯಪ್ರದಳೂ, ಕುರುಗಳನ್ನು ಪರಿಹರಿಸುವವಳೂ ಆಗು" ಎಂಬುದಾಗಿ ಕತ್ತೆಯಮೇಲೆ ಕುಳಿತಿರುವ, ದಿಗಂಬರಳಾದ ಪರಕೆ ಮತ್ತು ಮಡಕೆಗಳನ್ನು ಕೈಗಳಲ್ಲಿ ಧರಿಸಿರುವ, ವಿಸ್ಫೋಟಕಪರಿಹಾರಕಳಾದ ಶೀತಲಾದೇವಿಯನ್ನು ಚಿಂತಿಸುವವರಿಗೆ ಆಕೆಯು 'ವಿಸ್ಫೋಟಕಶಾಂತಿಪ್ರದಳಾಗುವಳು.

ಇತ್ಯೇವಂ ಶೀತಲಾಮಂತ್ರೈರ್ಯಃ ಸಮರ್ಚಯತೇ ದ್ವಿಜ ।
ತಸ್ಯ ವರ್ಷಂ ಭವೇಚ್ಛಾಂತಿಃ ಶೀತಲಾಯಾಃ ಪ್ರಸಾದತಃ ॥ ೯೮ ॥

ಸರ್ವಮಾಸೋಭಯೋಃ ಪಕ್ಷೇ ವಿಧಿವಚ್ಚಾಷ್ಟಮೀದಿನೇ ।
ಶಿವಾಂ ವಾಪಿ ಶಿವಂ ಪ್ರಾರ್ಚ್ಯ ಲಭತೇ ವಾಂಛಿತಂ ಫಲಂ ॥ ೯೯ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಚತುರ್ಥಪಾದೇ ದ್ವಾದಶಮಾಸಸ್ಥಿತಾಷ್ಟಮೀವ್ರತಕಥನಂ ನಾಮ
ಸಪ್ತದಶಾಧಿಕಶತತಮೋಽಧ್ಯಾಯಃ

---

೯೮ ದ್ವಿಜನೇ! ಈ ಪ್ರಕಾರ ಮಂತ್ರಗಳಿಂದ ಶೀತಲಾದೇವಿಯನ್ನರ್ಚಿಸುವವನಿಗೆ ಶೀತಲಾದೇವಿಯ ಅನುಗ್ರಹದಿಂದ ವರ್ಷ ಪರ್ಯಂತವಾಗಿ ಶಾಂತಿಯುಂಟಾಗುವುದು.

೯೯. ಎಲ್ಲಾ ಮಾಸಗಳ ಶುಕ್ಲ, ಕೃಷ್ಣ ಅಷ್ಟಮೀದಿನಗಳಲ್ಲಿ ಪಾರ್ವತಿ ಅಥವಾ ಈಶ್ವರನನ್ನು ಪೂಜಿಸಿದ ಮನುಜನು ಅಪೇಕ್ಷಿಸಿದ ಫಲವನ್ನು ಹೊಂದುವನು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳುಗಳ
ಅಷ್ಟಮೀವ್ರತ ಕಥನೆಯೆಂಬ ನೂರುಹದಿನೇಳನೆಯ
ಅಧ್ಯಾಯವು ಮುಗಿದುದು.

---

# ಅಷ್ಟಾದಶಾಧಿಕಶತತಮೋಽಧ್ಯಾಯಃ

**ಸನಾತನ ಉವಾಚ**

**ಅಥ ವಕ್ಷ್ಯಾಮಿ ವಿಪ್ರೇಂದ್ರ ನವಮ್ಯಾಸ್ತ್ರೀ ವ್ರತಾನಿ ವೈ ।**
**ಯಾನಿ ಕೃತ್ವಾ ನರಾ ಲೋಕೇ ಲಭಂತೇ ವಾಂಛಿತಂ ಫಲಂ ॥ ೧ ॥**

**ಚೈತ್ರಸ್ಯ ಶುಕ್ಲಪಕ್ಷೇ ತು ಶ್ರೀರಾಮನವಮೀವ್ರತಂ ।**
**ತತ್ರೋಪವಾಸಂ ವಿಧಿವಚ್ಛಕ್ತೋಽಭುಕ್ತಃ ಸಮಾಚರೇತ್ ॥ ೨ ॥**

**ಅಶಕ್ತ ಏಕಭುಕ್ತಂ ವೈ ಮಧ್ಯಾಹ್ನೋತ್ಸವತಃ ಪರಂ ।**
**ವಿಪ್ರಾನ್ಸಂಭೋಜ್ಯ ಮಿಷ್ಟಾನ್ನೈ ರಾಮಪ್ರೀತಿಂ ಸಮಾಚರೇತ್ ॥ ೩ ॥**

**ಗೋಭೂತಿಲಹಿರಣ್ಯಾದ್ಯೈರ್ವಸ್ತ್ರಾಲಂಕರಣೈಸ್ತಥಾ ।**
**ಏವಂ ಯಃ ಕುರುತೇ ಭಕ್ತ್ಯಾ ಶ್ರೀರಾಮ ನವಮೀವ್ರತಂ ॥ ೪ ॥**

---

## ನೂರುಹದಿನೆಂಟನೆಯ ಅಧ್ಯಾಯವು

೧. ಸನಾತನನು ಹೇಳಿದನು:—ವಿಪ್ರಶ್ರೇಷ್ಠನಾದ ನಾರದನೇ! ಯಾವ ವ್ರತಗಳನ್ನು ಮಾಡಿದರೆ ಮನುಷ್ಯನು ಲೋಕದಲ್ಲಿ ಇಷ್ಟವಾದ ಫಲವನ್ನು ಪಡೆಯುವನೋ ಅಂತಹ ನವಮೀವ್ರತಗಳನ್ನು ನಿನಗೆ ಹೇಳುವೆನು. ಕೇಳು.

೨-೩. ಚೈತ್ರ ಶುಕ್ಲ ನವಮಿಯಲ್ಲಿ ಶ್ರೀರಾಮನವಮೀವ್ರತವು ವಿಹಿತವಾಗಿದೆ. ಆದಿನದಲ್ಲಿ ಶಕ್ತನಾದವನು ಉಪವಾಸವನ್ನೂ ಅಶಕ್ತನಾದವನು ಮಧ್ಯಾಹ್ನೋತ್ಸವವಾದಮೇಲೆ ಒಂದೇಹೊತ್ತು ಊಟವನ್ನೂ ಮಾಡಬೇಕು. ಆದಿನ ಮೃಷ್ಟಾನ್ನಗಳಿಂದ ಬ್ರಾಹ್ಮಣರಿಗೆ ಭೋಜನಮಾಡಿಸಿ ಶ್ರೀರಾಮನ ಪ್ರೀತಿಯನ್ನು ಸಂಪಾದಿಸಬೇಕು.

೪-೭. ಹಾಗೆಯೇ ಬ್ರಾಹ್ಮಣರಿಗೆ ಗೋವು, ಭೂಮಿ, ಸುವರ್ಣ, ವಸ್ತ್ರ, ಆಭರಣ ಮುಂತಾದುವನ್ನು ದಾನಮಾಡಿಯೂ ರಾಮನ ಅನುಗ್ರಹವನ್ನು ಸಂಪಾದಿಸಬೇಕು.

ವಿಧೂಯ ಚೇಹ ಪಾಪಾನಿ ವ್ರಜೇದ್ವಿಷ್ಣೋಃ ಪರಂ ಪದಂ |
ಉಕ್ತಂ ಮಾತೃವ್ರತಂ ಚಾತ್ರ ಭೈರವೇಣ ಸಮನ್ವಿತಾಃ || ೫ ||

ಸ್ರಗ್ಗಂಧವಸ್ತ್ರನೈವೇದ್ಯೈಶ್ಚತುಃಷಷ್ಟಿಸ್ತು ಯೋಗಿನೀಃ |
ಅತ್ರೈವ ಭದ್ರಕಾಲೀ ತು ಯೋಗಿನೀನಾಂ ಮಹಾಬಲಾ || ೬ ||

ಬ್ರಾಹ್ಮಣಶ್ರೇಷ್ಠ ಸರ್ವಾಸಾಮಾಧಿಪತ್ಯೇಭಿಷೇಚಿತಾ |
ತಸ್ಮಾತ್ತಾಂ ಪೂಜಯೇಚ್ಚಾತ್ರ ಸೋಪವಾಸೋ ಜಿತೇಂದ್ರಿಯಃ || ೭ ||

ರಾಧೇ ನವಮ್ಯಾಂ ದಲಯೋಶ್ಚಂಡಿಕಾಂ ಯಸ್ತು ಪೂಜಯೇತ್ |
ವಿಧಿನಾ ಸವಿಮಾನೇನ ದೈವತೈಃ ಸಹ ಮೋದತೇ || ೮ ||

ಜ್ಯೇಷ್ಠಶುಕ್ಲನವಮ್ಯಾಂ ತು ಸೋಪವಾಸೋ ನರೋತ್ತಮಃ |
ಉಮಾಂ ಸಂಪೂಜ್ಯ ವಿಧಿವತ್ಕುಮಾರೀರ್ಭೋಜಯೇದ್ದ್ವಿಜಾನ್ || ೯ ||

---

ಈರೀತಿ ಭಕ್ತಿಯಿಂದ ಶ್ರೀರಾಮನವಮೀ ವ್ರತವನ್ನಾಚರಿಸುವವನು ಇಲ್ಲಿ ಪಾಪಗಳನ್ನು ಹೋಗಲಾಡಿಸಿಕೊಂಡು ವಿಷ್ಣುವಿನ ಪರಮಪದಕ್ಕೆ ಹೋಗುವನು.

ಈದಿನದಲ್ಲಿಯೇ ಮಾತೃವ್ರತವೂ ವಿಹಿತವಾಗಿದೆ. ಭೈರವನಿಂದ ಸಹಿತರಾದ ಅರವತ್ತುನಾಲ್ಕು ಯೋಗಿನಿಯರಲ್ಲಿ ಭದ್ರಕಾಳಿ ಎಂಬ ಯೋಗಿನಿಯು ಮಹಾಬಲಿಷ್ಠೆಯು. ಆ ಭದ್ರಕಾಳಿಯೇ ಸಕಲಯೋಗಿನಿಗಳ ಆಧಿಪತ್ಯದಲ್ಲಿ ಅಭಿಷಿಕ್ತಳಾಗಿರುವಳು. ಆದಕಾರಣ ದ್ವಿಜಶ್ರೇಷ್ಠನೇ! ಉಪವಾಸದಿಂದ ಜಿತೇಂದ್ರಿಯನಾಗಿ ಆ ಭದ್ರಕಾಳಿಯನ್ನು ಈ ವ್ರತದಲ್ಲಿ ಸ್ರಗ್ಗಂಧ, ವಸ್ತ್ರ, ನೈವೇದ್ಯಾದಿಗಳಿಂದ ಪೂಜಿಸಬೇಕು.

೮. ವೈಶಾಖಮಾಸದ ಎರಡು ನವಮಿಗಳಲ್ಲಿಯೂ, ಚಂಡಿಕೆಯನ್ನು ವಿಧಾನೋಕ್ತಪ್ರಕಾರವಾಗಿ ಪೂಜಿಸುವವನು ದೇವತೆಗಳೊಡನೆ ವಿಮಾನಸಹಿತವಾಗಿ ಸುಖಪಡುವನು.

೯-೧೨. ಜ್ಯೇಷ್ಠ ಶುಕ್ಲ ನವಮಿಯ ದಿನದಲ್ಲಿ ಉತ್ತಮನಾದ ಪುರುಷನು ಉಪವಾಸದಿಂದ ವಿಧಿವತ್ತಾಗಿ ಪಾರ್ವತೀದೇವಿಯನ್ನು ಪೂಜಿಸಿ, ಕುಮಾರಿ

ಸ್ವಭಕ್ತ್ಯಾ ದಕ್ಷಿಣಾಂ ದತ್ವಾ ಶಾಲ್ಯನ್ನಂ ಪಯಸಾಶ್ನಿಯಾತ್ |
ಉಮಾವ್ರತಮಿದಂ ವಿಪ್ರ ಯಃ ಕುರ್ಯಾದ್ವಿಧಿವನ್ನರಃ || ೧೦ ||

ಸ ಭುಕ್ತ್ವೇಹ ವರಾನ್ಭೋಗಾನಂತೇ ಸ್ವರ್ಗಗತಿಂ ಲಭೇತ್ |
ಆಷಾಢೇ ಮಾಸಿ ವಿಪ್ರೈಂದ್ರೀಂ ಯಃ ಕುರ್ಯಾತ್ಪಕ್ಷಯೋರ್ದ್ವಿಜ || ೧೧ ||

ನಕ್ತಂ ಚೈಂದ್ರೀಂ ಸಮಭ್ಯರ್ಚ್ಯೇದೈರಾವತಗತಾಂ ಸಿತಾಂ |
ಸ ಭವೇದ್ದೇವಲೋಕೇ ತು ಭೋಗಭಾಗ್ದೇವಯಾನಗಃ || ೧೨ ||

ಶ್ರಾವಣೇ ಮಾಸಿ ವಿಪ್ರೇಂದ್ರ ಯಃ ಕುರ್ಯಾನ್ನಕ್ತಭೋಜನಂ |
ಪಕ್ಷಯೋರುಪವಾಸಂ ವಾ ಕೌಮಾರೀಂ ಚಂಡಿಕಾಂ ಯಜೇತ್ || ೧೩ ||

ಏವಂ ಪಾಪಹರಾಂ ಗಂಧೈಃ ಪುಷ್ಪೈರ್ಧೂಪೈಶ್ಚ ದೀಪಕೈಃ |
ನೈವೇದ್ಯೈರ್ವಿವಿಧೈಶ್ಚೈವ ಕುಮಾರೀಭೋಜನೈಸ್ತಥಾ || ೧೪ ||

---

ಯರು ಮತ್ತು ದ್ವಿಜರನ್ನು ಭೋಜನಮಾಡಿಸಬೇಕು. ಈ ಉಮಾವ್ರತವನ್ನು ವಿಧಿವತ್ತಾಗಿ ಆಚರಿಸುವ ಮನುಷ್ಯನು ಇಲ್ಲಿ ಉತ್ತಮ ಭೋಗಗಳನ್ನನುಭವಿಸಿ, ಕೊನೆಯಲ್ಲಿ ಸ್ವರ್ಗಲೋಕಕ್ಕೆ ಹೋಗಿ ಸುಖಪಡುವನು.

ಆಷಾಢಮಾಸದ ಶುಕ್ಲ ಕೃಷ್ಣ ನವಮೀದಿನಗಳಲ್ಲಿ ರಾತ್ರಿಕಾಲದಲ್ಲಿ ಐರಾವತಸ್ಥಿತಳಾದ, ಶುಕ್ಲವರ್ಣದ ಐಂದ್ರೀದೇವಿಯನ್ನು ಪೂಜಿಸಿ ಐಂದ್ರೀವ್ರತವನ್ನು ಮಾಡುವವನು ದೇವಲೋಕದಲ್ಲಿ ದೇವವಿಮಾನಸ್ಥಿತನಾಗಿ ಭೋಗಗಳನ್ನು ಅನುಭವಿಸುವನು.

೧೩-೧೪. ವಿಪ್ರೇಂದ್ರನೇ! ಶ್ರಾವಣ ನವಮಿಗಳೆರಡರಲ್ಲಿಯೂ ನಕ್ತಭೋಜನ ಅಥವಾ ಉಪವಾಸಮಾಡಿ ಕೌಮಾರೀಚಂಡಿಕಾದೇವಿಯನ್ನು ಪೂಜಿಸಬೇಕು. ಪಾಪಪರಿಹಾರಕಳಾದ ದೇವಿಯನ್ನು ಗಂಧ, ಹೂವು, ಧೂಪ, ದೀಪಗಳಿಂದಲೂ, ನಾನಾವಿಧ ನೈವೇದ್ಯಗಳಿಂದಲೂ, ಪೂಜಿಸಿ, ಕುಮಾರೀಭೋಜನವನ್ನು ಮಾಡಿಸಬೇಕು.

ಏವಂ ಯಃ ಕುರುತೇ ಭಕ್ತ್ಯಾ ಕೌಮಾರೀವ್ರತಮುತ್ತಮಂ |
ಸ ವಿಮಾನೇನ ಗಚ್ಛೇದ್ವೈ ದೇವೀಲೋಕಂ ಸನಾತನಂ || ೧೫ ||

ಭಾದ್ರೇ ತು ನವಮೀ ಶುಕ್ಲಾ ನಂದಾ ವಾ ಪರಿಕೀರ್ತಿತಾ |
ತಸ್ಯಾಂ ಯಃ ಪೂಜಯೇದ್ದುರ್ಗಾಂ ವಿಧಿವಚ್ಛೋಪಚಾರಕೈಃ || ೧೬ ||

ಸೋಽಶ್ವಮೇಧಫಲಂ ಲಬ್ಧ್ವಾ ವಿಷ್ಣುಲೋಕೇ ಮಹೀಯತೇ |
ಆಶ್ವಿನೇ ಶುಕ್ಲನವಮೀ ಮಹಾಪೂರ್ವಾ ಪ್ರಕೀರ್ತಿತಾ || ೧೭ ||

ಅಪರಾಹ್ಣೇ ಶಮೀಪೂಜಾ ಕಾರ್ಯಾ ಸ್ಯಾಂ ಪ್ರಾಗ್ದಿಶಿ ದ್ವಿಜ |
ತತೋ ನಿಶಾಯಾಂ ಪ್ರಾಗ್ಯಾಮೇ ಖಡ್ಗಂ ಧನುರಿಷೂನ್ಗದಾಂ || ೧೮ ||

ಶೂಲಂ ಶಕ್ತಿಂ ಚ ಪರಶುಂ ಛುರಿಕಾಂ ಚರ್ಮ ಖೇಟಕಂ |
ಛತ್ರಂ ಧ್ವಜಂ ಗಜಂ ಚಾಶ್ವಂ ಗೋವೃಷಂ ಪುಸ್ತಕಂ ತುಲಾಂ || ೧೯ ||

---

೧೫. ಈರೀತಿ ಭಕ್ತಿಯಿಂದ ಕೌಮಾರಿವ್ರತವನ್ನಾಚರಿಸುವವನು ಸನಾತನ ದೇವೀಲೋಕಕ್ಕೆ ವಿಮಾನಮೂಲಕವಾಗಿ ಹೋಗಿ ಸುಖಪಡುವನು.

೧೬-೧೭. ಭಾದ್ರಪದ ಶುಕ್ಲ ನವಮೀ ದಿನವು ನಂದಾ ಎಂದು ಉಕ್ತವಾಗಿದೆ. ಆದಿನದಲ್ಲಿ ಷೋಡಶೋಪಚಾರಗಳಿಂದ ವಿಧಿವತ್ತಾಗಿ ದುರ್ಗಾದೇವಿಯನ್ನು ಪೂಜಿಸುವವನು ಅಶ್ವಮೇಧ ಫಲಕ್ಕೆ ಸಮಾನವಾದ ಫಲವನ್ನು ಹೊಂದಿ ವಿಷ್ಣುಲೋಕದಲ್ಲಿ ಸತ್ಕರಿಸಲ್ಪಡುವನು.

ಆಶ್ವಯುಜ ಶುಕ್ಲ ನವಮಿಯು ಮಹಾನವಮಿಯೆಂದು ಪ್ರಸಿದ್ಧವಾಗಿದೆ.

೧೮-೨೦. ಆ ದಿವಸ ಅಪರಾಹ್ಣಕಾಲದಲ್ಲಿ ಪೂರ್ವದಿಕ್ಕಿನಲ್ಲಿ ಶಮೀಪೂಜೆಯನ್ನು ಮಾಡಬೇಕು. ತರುವಾಯ ರಾತ್ರಿ ಪ್ರಥಮಯಾಮದಲ್ಲಿ ಖಡ್ಗ, ಧನುಸ್ಸು, ಇಷು, ಗದೆ, ಶೂಲ, ಶಕ್ತಿ, ಪರಶು, ಚಾಕು, ಗುರಾಣಿ, ಖೇಟಕ, ಛತ್ರಿ, ಧ್ವಜ, ಆನೆ, ಕುದುರೆ, ಗೋವು, ಎತ್ತು, ಪುಸ್ತಕ, ತುಲಾ, ದಂಡ, ಪಾಶ,

ದಂಡಂ ಪಾಶಂ ಚಕ್ರಶಂಖೌ ಗಂಧಾದ್ಯೈರುಪಚಾರಕೈಃ ।
ಸಂಪೂಜ್ಯ ಮಹಿಷಂ ತತ್ರ ಭದ್ರಕಾಲ್ಯೈ ಸಮಾಲಭೇತ್ ॥ ೨೦ ॥

ಏವಂ ಬಲಿಂ ವಿಧಾಯಾಥ ಭುಕ್ತ್ವಾ ಪಕ್ವಾನ್ನಮೇವ ಚ ।
ದ್ವಿಜೇಭ್ಯೋ ದಕ್ಷಿಣಾಂ ದತ್ವಾ ವ್ರತಂ ತತ್ರ ಸಮಾಪಯೇತ್ ॥ ೨೧ ॥

ಏವಂ ಯಃ ಪೂಜಯೇದ್ದುರ್ಗಾಂ ನೃಣಾಂ ದುರ್ಗತಿನಾಶಿನೀಂ ।
ಇಹ ಭುಕ್ತ್ವಾ ವರಾನ್ಭೋಗಾನಂತೇ ಸ್ವರ್ಗತಿಮಾಪ್ನುಯಾತ್ ॥ ೨೨ ॥

ಕಾರ್ತಿಕೇ ಶುಕ್ಲನವಮೀ ಯಾಽಕ್ಷಯಾ ಸಾ ಪ್ರಕೀರ್ತಿತಾ ।
ತಸ್ಯಾಮಶ್ವತ್ಥಮೂಲೇ ವೈ ತರ್ಪಣಂ ಸಮ್ಯಗಾಚರೇತ್ ॥ ೨೩ ॥

ದೇವಾನಾಂ ಚ ಋಷೀಣಾಂ ಚ ಪಿತೄಣಾಂ ಚಾಪಿ ನಾರದ ।
ಸ್ವಶಾಖೋಕ್ತೈಸ್ತಥಾ ಮಂತ್ರೈಃ ಸೂರ್ಯಾಯಾರ್ಘ್ಯಂ ತತೋಽರ್ಪಯೇತ್

---

ಚಕ್ರ, ಶಂಖ ಇವುಗಳನ್ನು ಗಂಧಾದ್ಯುಪಚಾರಗಳಿಂದ ಪೂಜಿಸಿ ಅಲ್ಲಿ ಭದ್ರ ಕಾಳೀದೇವಿಗೆ ಕೋಣವನ್ನು ಬಲಿಕೊಡಬೇಕು.

೨೧. ಈ ರೀತಿ ಬಲಿದಾನಮಾಡಿ ಪಕ್ವಾನ್ನಗಳ ಭೋಜನಮಾಡಿಸಿ, ತಾನೂ ಮಾಡಿ, ಬ್ರಾಹ್ಮಣರಿಗೆ ದಕ್ಷಿಣೆಕೊಟ್ಟು ವ್ರತವನ್ನು ಮುಗಿಸಬೇಕು.

೨೨. ಈ ರೀತಿಯಾಗಿ ಮನುಷ್ಯರಿಗೆ ದುರ್ಗತಿನಾಶಕಳಾದ ದುರ್ಗಾ ದೇವಿಯನ್ನು ಪೂಜಿಸುವವನು ಈ ಲೋಕದಲ್ಲಿ ಉತ್ಕೃಷ್ಟಭೋಗಗಳನ್ನನುಭವಿಸಿ ಕೊನೆಗೆ ಸ್ವರ್ಗಪ್ರಾಪ್ತಿಯನ್ನು ಹೊಂದುವನು.

೨೩-೨೪. ಕಾರ್ತಿಕ ಶುಕ್ಲ ನವಮಿಯು ಅಕ್ಷಯಾನವಮಿಯೆಂದು ಉಕ್ತ ವಾಗಿದೆ. ಆ ದಿನದಲ್ಲಿ ಅಶ್ವತ್ಥವೃಕ್ಷದ ಮೂಲದಲ್ಲಿ ದೇವ ಋಷಿ ಪಿತೃಗಳಿಗೆ ತರ್ಪಣವನ್ನಾಚರಿಸಬೇಕು. ಹಾಗೆಯೇ ಸ್ವಶಾಖೋಕ್ತಮಂತ್ರಗಳಿಂದ ಸೂರ್ಯ ನಿಗೆ ಅರ್ಘ್ಯವನ್ನು ಸಮರ್ಪಿಸಬೇಕು.

ತತೋ ದ್ವಿಜಾನ್ಭೋಜಯಿತ್ವಾ ಮಿಷ್ಟಾನ್ನೇನ ಮುನೀಶ್ವರ ।
ಸ್ವಯಂ ಭುಕ್ತ್ವಾ ಚ ವಿಹರೇದ್ದ್ವಿಜೇಭ್ಯೋ ದತ್ತದಕ್ಷಿಣಃ　　॥ ೨೫ ॥

ಏವಂ ಯಃ ಕುರುತೇ ಭಕ್ತ್ಯಾ ಜಪದಾನಂ ದ್ವಿಜಾರ್ಚನಂ ।
ಹೋಮಂ ಚ ಸರ್ವಮಕ್ಷಯ್ಯಂ ಭವೇದಿತಿ ವಿಧೇರ್ವಚಃ　　॥ ೨೬ ॥

ಮಾರ್ಗೇ ತು ಶುಕ್ಲನವಮೀ ನಂದಿನೀ ಪರಿಕೀರ್ತಿತಾ ।
ತಸ್ಯಾಮುಪೋಷಿತೋ ಯಸ್ತು ಜಗದಂಬಾಂ ಪ್ರಪೂಜಯೇತ್　॥ ೨೭ ॥

ಗಂಧಾದ್ಯೈಃ ಸೋಽಶ್ವಮೇಧಸ್ಯ ಫಲಭಾಜ್ ನಾತ್ರ ಸಂಶಯಃ ।
ಪೌಷೇ ಶುಕ್ಲನವಮ್ಯಾಂ ತು ಮಹಾಮಾಯಾಂ ಪ್ರಪೂಜಯೇತ್ ॥ ೨೮ ॥

ಏಕಭುಕ್ತಪರೋ ವಿಪ್ರ ವಾಚಯೇಚ್ಚ ಫಲಾಪ್ತಯೇ ।
ಮಾಘಮಾಸೇ ತು ವಾ ಶುಕ್ಲಾ ನವಮೀ ಲೋಕಪೂಜಿತಾ　　॥ ೨೯ ॥

---

೨೫. ತರುವಾಯ ಮೃಷ್ಟಾನ್ನಗಳಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಿ ದಕ್ಷಿಣೆಕೊಟ್ಟು, ತಾನೂ ಭೋಜನಮಾಡಿ ವಿಹರಿಸಬೇಕು.

೨೬. ಈ ರೀತಿಯಾಗಿ ಭಕ್ತಿಯಿಂದ ಮಾಡಿದ ಜಪ, ದಾನ, ದ್ವಿಜಾರ್ಚನೆ, ಹೋಮ ಮುಂತಾದುವೆಲ್ಲವೂ ಅಕ್ಷಯವಾಗುವುದೆಂದು ವಿಧಾಯಕವಾಗಿದೆ.

೨೭-೨೮. ಮಾರ್ಗಶೀರ್ಷಶುಕ್ಲನವಮಿಯು ನಂದಿನೀ ಎಂದು ಉಕ್ತವಾಗಿದೆ. ಆ ದಿನದಲ್ಲಿ ಉಪವಾಸದಿಂದ ಜಗದಂಬೆಯನ್ನು ಗಂಧಾದಿಗಳಿಂದ ಪೂಜಿಸುವವನು ಅಶ್ವಮೇಧಯಜ್ಞಕ್ಕೆ ವಿಹಿತವಾದ ಫಲವನ್ನು ಪಡೆಯುವನು, ಸಂದೇಹವಿಲ್ಲ.

ಪುಷ್ಯ ಶುಕ್ಲ ನವಮಿಯ ದಿನದಲ್ಲಿ ಮಹಾಮಾಯೆಯನ್ನು ಪೂಜಿಸಬೇಕು. ಸಂಪೂರ್ಣಫಲವನ್ನು ಹೊಂದಲು ಆದಿನ ಒಪ್ಪತ್ತೂಟಮಾಡಿ ಸ್ತೋತ್ರಪಾಠ ಮಾಡಬೇಕು.

ಮಾಘಮಾಸ ಶುಕ್ಲ ನವಮಿಯು ಲೋಕಪೂಜಿತವಾದುದು. ಅದು

ಮಹಾನಂದೇತಿ ಸಾ ಪ್ರೋಕ್ತಾ ಸದಾನಂದಕರೀ ನೃಣಾಂ ।
ತಸ್ಯಾಂ ಸ್ನಾನಂ ತಥಾ ದಾನಂ ಜಪೋ ಹೋಮ ಉಪೋಷಣಂ ॥ ೩೦ ॥

ಸರ್ವಮಕ್ಷಯತಾಂ ಯಾತಿ ನಾತ್ರ ಕಾರ್ಯಾ ವಿಚಾರಣಾ ।
ಫಾಲ್ಗುನಾಮಲಪಕ್ಷಸ್ಯ ನವಮೀ ಯಾ ದ್ವಿಜೋತ್ತಮ ॥ ೩೧ ॥

ಆನಂದಾ ಸಾ ಮಹಾಪುಣ್ಯಾ ಸರ್ವಪಾಪಹರಾ ಸ್ಮೃತಾ ।
ಸೋಪವಾಸೋಽರ್ಚಯೇತ್ತತ್ರ ಯಸ್ತಾಂ ನಂದಾಂ ದ್ವಿಜೋತ್ತಮ ॥ ೩೨ ॥

ಸ ಲಭೇದ್ವಾಂಛಿತಾನ್ಕಾಮಾನ್ ಸತ್ಯಂ ಸತ್ಯಂ ಮಯೋದಿತಂ ।

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸಸ್ಥಿತ ನವಮೀವ್ರತಕಥನಂ ನಾಮ ಅಷ್ಟಾದಶಾಧಿಕಶತತಮೋಽಧ್ಯಾಯಃ

---

ಮಹಾನಂದಾ ಎಂಬುದಾಗಿ ಉಕ್ತವಾಗಿದೆ. ಯಾವಾಗಲೂ ಮನುಷ್ಯರಿಗೆ ಆನಂದದಾಯಕವು. ಆ ದಿನದಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ, ಉಪವಾಸ, ಮುಂತಾದುವೆಲ್ಲವೂ ಅಕ್ಷಯಫಲದಾಯಕವಾಗುವುದು. ಈ ವಿಷಯದಲ್ಲಿ ಸಂಶಯಪಡಬಾರದು.

ಫಾಲ್ಗುಣ ಶುಕ್ಲ ನವಮಿಯು ಮಹಾಪುಣ್ಯಪ್ರದವೂ, ಸಕಲಪಾಪಪರಿಹಾರಕವು ಮತ್ತು ಆನಂದಪ್ರದವು ಎಂಬದಾಗಿ ವಿಹಿತವಾಗಿದೆ. ಆ ನಂದೆಯನ್ನು ಉಪವಾಸದಿಂದ ಪೂಜಿಸುವವನು ಇಷ್ಟಕಾಮಗಳನ್ನು ಪಡೆಯುವನು. ನಾನು ಹೇಳಿರುವುದು ಸತ್ಯ! ಸತ್ಯ!

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳುಗಳ ನವಮೀ ವ್ರತವಿಧಾನನಿರೂಪಣೆಯೆಂಬ ನೂರುಹದಿನೆಂಟನೆಯ ಅಧ್ಯಾಯವು ಮುಗಿದುದು.



## ಏಕೋನವಿಂಶತ್ಯಧಿಕಶತತಮೋಽಧ್ಯಾಯಃ

### ಸನಾತನ ಉವಾಚ

ಅಥ ತೇಽಹಂ ಪ್ರವಕ್ಷ್ಯಾಮಿ ದಶಮ್ಯಾ ವೈ ವ್ರತಾನಿ ಚ ।
ಯಾನಿ ಕೃತ್ವಾ ನರೋ ಭಕ್ತ್ಯಾ ಧರ್ಮರಾಜಪ್ರಿಯೋ ಭವೇತ್ ॥ ೧ ॥

ಚೈತ್ರಶುಕ್ಲದಶಮ್ಯಾಂ ತು ಧರ್ಮರಾಜಂ ಪ್ರಪೂಜಯೇತ್ ।
ತತ್ಕಾಲಸಂಭವೈಃ ಪುಷ್ಪೈಃ ಫಲೈರ್ಗಂಧಾದಿಭಿಸ್ತಥಾ ॥ ೨ ॥

ಸೋಪವಾಸೋ ನ್ಯೈಕಭುಕ್ತೋ ಭೋಜಯಿತ್ವಾ ದ್ವಿಜೋತ್ತಮಾನ್ ।
ಚತುರ್ದಶ ತತಸ್ತೇಭ್ಯಃ ಶಕ್ತ್ಯಾ ದದ್ಯಾಚ್ಚ ದಕ್ಷಿಣಾಂ ॥ ೩ ॥

ಏವಂ ಯಃ ಕುರುತೇ ವಿಪ್ರ ಧರ್ಮರಾಜಪ್ರಪೂಜನಂ ।
ಸ ಧರ್ಮಸ್ಯಾಜ್ಞಯಾ ಗಚ್ಛೇದ್ದೇವೈಃ ಸಾಧರ್ಮ್ಯಮಚ್ಯುತಃ ॥ ೪ ॥

---

## ನೂರುಹತ್ತೊಂಬತ್ತನೆಯ ಅಧ್ಯಾಯವು

೧. ಸನಾತನನು ಹೇಳಿದನು:—ನಾರದನೇ! ಈಗ ನಿನಗೆ ದಶಮೀವ್ರತಗಳನ್ನು ಹೇಳುವೆನು ಕೇಳು. ಆ ವ್ರತಗಳನ್ನು ಭಕ್ತಿಯಿಂದಾಚರಿಸುವ ಮನುಷ್ಯನು ಧರ್ಮರಾಜನಿಗೆ ಪ್ರಿಯನಾಗುವನು.

೨-೩. ಚೈತ್ರ ಶುಕ್ಲ ದಶಮೀ ದಿನದಲ್ಲಿ ಉಪವಾಸ ಅಥವಾ ಒಪ್ಪತ್ತೂಟಮಾಡಿ, ಆ ಕಾಲದಲ್ಲಿ ಬೆಳೆಯುವ ಪುಷ್ಪ, ಫಲ, ಗಂಧಾದಿಗಳಿಂದ ಧರ್ಮರಾಜನನ್ನು ಪೂಜಿಸಬೇಕು. ಬಳಿಕ ಹದಿನಾಲ್ಕು ಮಂದಿ ಬ್ರಾಹ್ಮಣರಿಗೆ ಭೋಜನಮಾಡಿಸಿ ತನ್ನ ಶಕ್ತ್ಯನುಸಾರ ದಕ್ಷಿಣೆ ಕೊಡಬೇಕು.

೪. ಈರೀತಿ ಧರ್ಮರಾಜಪೂಜೆಯನ್ನು ಮಾಡುವವನು ಧರ್ಮರಾಜನ ಅನುಗ್ರಹದಿಂದ ದೇವತೆಗಳ ಸಾಧರ್ಮ್ಯವನ್ನು ಹೊಂದುವನು.

ದಶಮ್ಯಾಂ ಮಾಧವೇ ಶುಕ್ಲೇ ವಿಷ್ಣುಮಭ್ಯರ್ಚ್ಯ ಮಾನವಃ |
ಗಂಧಾದ್ಯೈರುಪಚಾರೈಶ್ಚ ಶ್ವೇತಪುಷ್ಪೈಃ ಸುಗಂಧಿಭಿಃ || ೫ ||

ಶತಂ ಪ್ರದಕ್ಷಿಣಾಃ ಕೃತ್ವಾ ವಿಪ್ರಾನ್ಸಂಭೋಜ್ಯ ಯತ್ನತಃ |
ಲಭತೇ ವೈಷ್ಣವಂ ಲೋಕಂ ನಾತ್ರ ಕಾರ್ಯಾ ವಿಚಾರಣಾ || ೬ ||

ಜ್ಯೇಷ್ಠೇ ಶುಕ್ಲದಶಮ್ಯಾಂ ತು ಜಾಹ್ನವೀ ಸರಿತಾಂ ವರಾ |
ಪ್ರತ್ಯಾಯಾತಾ ಧರಾಂ ಸ್ವರ್ಗಾತ್ತಸ್ಮಾತ್ಸಾ ಪುಣ್ಯದಾ ಸ್ಮೃತಾ || ೭ ||

ಜ್ಯೇಷ್ಠಃ ಶುಕ್ಲದಲಂ ಹಸ್ತಾ ಬುಧಶ್ಚ ದಶಮೀ ತಿಥಿಃ |
ಗರಾನಂದವ್ಯತೀಪಾತಾಃ ಕನ್ಯೇಂದುವೃಷಭಾಸ್ಕರಾಃ || ೮ ||

ದಶಯೋಗಃ ಸಮಾಖ್ಯಾತೋ ಮಹಾಪುಣ್ಯತಮೋ ದ್ವಿಜ |
ಹರತೇ ದಶ ಪಾಪಾನಿ ತಸ್ಮಾದ್ದಶಹರಃ ಸ್ಮೃತಃ || ೯ ||

---

೫-೬. ವೈಶಾಖ ಶುಕ್ಲ ದಶಮಿಯ ದಿನದಲ್ಲಿ ಗಂಧಾದ್ಯುಪಚಾರಗಳು ಮತ್ತು ಸುವಾಸನೆಯುಳ್ಳ ಬಿಳಿಯಹೂವುಗಳಿಂದ ವಿಷ್ಣುವನ್ನು ಪೂಜಿಸಿ, ನೂರು ಪ್ರದಕ್ಷಿಣೆಗಳನ್ನು ಮಾಡಿ ಬ್ರಾಹ್ಮಣರ ಭೋಜನ ಮಾಡಿಸುವ ಮನುಷ್ಯನು ವಿಷ್ಣುಲೋಕವನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹ ಪಡಬಾರದು.

೭-೯. ಜ್ಯೇಷ್ಠ ಶುಕ್ಲ ದಶಮಿಯ ದಿನದಲ್ಲಿ ನದಿಗಳಲ್ಲಿ ಶ್ರೇಷ್ಠವಾದ, ಗಂಗೆಯು ಸ್ವರ್ಗಲೋಕದಿಂದ ಭೂಲೋಕಕ್ಕೆ ಬಂದಿತಾದಕಾರಣ ಆದಿನವು ಮಹಾಪುಣ್ಯಪ್ರದವೆಂದು ವಿಹಿತವಾಗಿದೆ.

ಜ್ಯೇಷ್ಠಮಾಸ, ಶುಕ್ಲಪಕ್ಷ, ಹಸ್ತಾನಕ್ಷತ್ರ, ಬುಧವಾರ, ದಶಮೀತಿಥಿ, ಗರ, ನಂದ, ವ್ಯತೀಪಾತ, ಕನ್ಯಾರಾಶಿಯಲ್ಲಿ ಚಂದ್ರ, ವೃಷಭದಲ್ಲಿ ಸೂರ್ಯ, ಈ ಹತ್ತೂ ಸೇರಿದರೆ ದಶಯೋಗವೆನಿಸುವುದು. ಅದು ಮಹಾಪುಣ್ಯಪ್ರದವೆಂದು ವಿಹಿತವಾಗಿದೆ. ಅದು ದಶಪಾಪಗಳನ್ನು ಪರಿಹರಿಸುವುದರಿಂದ ದಶಹರದಶಮಿಯೆಂದು ಪ್ರಸಿದ್ಧವಾಗಿದೆ.

ಅಸ್ಯಾಂ ಯೋ ಜಾಹ್ನವೀಂ ಪ್ರಾಪ್ಯ ಸ್ನಾತಿ ಸಂಪ್ರೀತಮಾನಸಃ ।
ವಿಧಿನಾ ಜಾಹ್ನವೀತೋಯೇ ಸ ಯಾತಿ ಹರಿಮಂದಿರಂ ॥ ೧೦ ॥

ಆಶಾಢಶುಕ್ಲದಶಮೀ ಪುಣ್ಯಾ ಮನ್ವಾದಿಕಾ ಸ್ಮೃತಾ ।
ತಸ್ಯಾಂ ಸ್ನಾನಂ ಜಪೋ ದಾನಂ ಹೋಮೋ ವಾ ಸ್ವರ್ಗತಿಪ್ರದಾಃ ॥ ೧೧ ॥

ಶ್ರಾವಣೇ ಶುಕ್ಲದಶಮೀ ಸರ್ವಾಶಾಪರಿಪೂರ್ತಿದಾ ।
ಅಸ್ಯಾಂ ಶಿವಾರ್ಚನಂ ಶಸ್ತಂ ಗಂಧಾದ್ಯೈರುಪಚಾರಕೈಃ ॥ ೧೨ ॥

ತತ್ರೋಪವಾಸೋ ನಕ್ತಂ ವಾ ದ್ವಿಜಾನಾಂ ಭೋಜನಂ ಜಪಃ ।
ಹೇಮ್ನೋ ದಾನಂ ಚ ಧೇನ್ವಾದೇಃ ಸರ್ವಪಾಪಪ್ರಣಾಶನಂ ॥ ೧೩ ॥

ಅಥೋ ನಭಸ್ಯಶುಕ್ಲಾಯಾಂ ದಶಮ್ಯಾಂ ದ್ವಿಜಸತ್ತಮ ।
ವ್ರತಂ ದಶಾವತಾರಾಖ್ಯಂ ತತ್ರ ಸ್ನಾನಂ ಜಲಾಶಯೇ ॥ ೧೪ ॥

---

೧೦. ಈ ದಿನದಲ್ಲಿ ಸಂತುಷ್ಟಚಿತ್ತನಾಗಿ ಗಂಗೆಗೆ ಹೋಗಿ ಅಲ್ಲಿ ವಿಧಿವತ್ತಾಗಿ ಸ್ನಾನಮಾಡುವವನು ಹರಿಮಂದಿರ ಎಂದರೆ ವೈಕುಂಠಕ್ಕೆ ಹೋಗುವನು.

೧೧. ಆಷಾಢ ಶುಕ್ಲ ದಶಮಿಯು ಮನ್ವಾದಿಗಳಲ್ಲೊಂದಾದ ಪುಣ್ಯ ತಿಥಿಯು. ಆದಿನದಲ್ಲಿ ಮಾಡುವ ಸ್ನಾನ, ಜಪ, ದಾನ, ಹೋಮಗಳೆಲ್ಲವೂ ಸ್ವರ್ಗಲೋಕಕ್ಕೆ ಹೋಗಲು ಸಾಧನಗಳು-

೧೨. ಶ್ರಾವಣ ಶುಕ್ಲ ದಶಮಿಯು ಸಕಲೇಷ್ಟಾರ್ಥಗಳನ್ನೂ ಪೂರ್ತಿಗೊಳಿಸುವುದು. ಈ ದಿನದಲ್ಲಿ ಗಂಧಾದ್ಯುಪಚಾರಗಳಿಂದ ಶಿವಾರ್ಚನೆಯು ಪ್ರಶಸ್ತವು.

೧೩. ಆ ದಿನದಲ್ಲಿ ಉಪವಾಸ, ಅಥವಾ ನಕ್ತಭೋಜನ, ದ್ವಿಜರಿಗೆ ಭೋಜನಮಾಡಿಸುವುದು, ಜಪ, ಸುವರ್ಣದಾನ, ಗೋವು, ಮುಂತಾದುವುಗಳ ದಾನ ಇವೆಲ್ಲವೂ ಸಕಲಪಾಪ ಪರಿಹಾರಕವು.

೧೪-೧೫. ಭಾದ್ರಪದ ಶುಕ್ಲ ದಶಮಿಯ ದಿನದಲ್ಲಿ ದಶಾವತಾರವೆಂಬ ವ್ರತವು ಉಕ್ತವಾಗಿದೆ. ಆ ದಿನದಲ್ಲಿ ನದ್ಯಾದಿಗಳಲ್ಲಿ ಸ್ನಾನಮಾಡಿ, ಸಂಧ್ಯಾ

ಕೃತ್ವಾ ಸಂಧ್ಯಾದಿನಿಯಮಂ ದೇವರ್ಷಿಪಿತೃತರ್ಪಣಂ ।
ತತೋ ದಶಾವತಾರಾಣಿ ಸಮಭ್ಯರ್ಚೇತ್ಸಮಾಹಿತಃ ॥ ೧೫ ॥

ಮತ್ಸ್ಯಂ ಕೂರ್ಮಂ ವರಾಹಂ ಚ ನರಸಿಂಹಂ ತ್ರಿವಿಕ್ರಮಂ ।
ರಾಮಂ ರಾಮಂ ಚ ಕೃಷ್ಣಂ ಚ ಬೌದ್ಧಂ ಕಲ್ಕಿನಮೇವ ಚ ॥ ೧೬ ॥

ದಶಮೂರ್ತೀಸ್ತು ಸೌವರ್ಣೀಃ ಪೂಜಯಿತ್ವಾ ವಿಧಾನತಃ ।
ದಶಭ್ಯೋ ವಿಪ್ರವರ್ಯೇಭ್ಯೋ ದದ್ಯಾತ್ಸತ್ಕೃತ್ಯ ನಾರದ ॥ ೧೭ ॥

ಉಪವಾಸಂ ಚೈಕಭುಕ್ತಂ ಕೃತ್ವಾ ಸಂಭೋಜ್ಯ ಚಾಡವಾನ್ ।
ವಿಸೃಜ್ಯ ಪಶ್ಚಾದ್ಭುಂಜೀತ ಸ್ವಯಂ ಸ್ವೇಷ್ಟೈಃ ಸಮಾಹಿತಃ ॥ ೧೮ ॥

---

ವಂದನೆ ಮುಂತಾದ ನಿತ್ಯಕರ್ಮ ಮತ್ತು ದೇವ ಋಷಿ ಪಿತೃತರ್ಪಣಗಳನ್ನು ಮಾಡಿಕೊಂಡು ನಂತರ ಸಮಾಧಾನಚಿತ್ತದಿಂದ ದಶಾವತಾರ ರೂಪಗಳನ್ನು ಪೂಜಿಸಬೇಕು.

೧೬-೧೭. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ತ್ರಿವಿಕ್ರಮ, ಪರಶುರಾಮ, ಶ್ರೀರಾಮ, ಕೃಷ್ಣ, ಬೌದ್ಧ ಮತ್ತು ಕಲ್ಕಿ ಎಂಬ ದಶಾವತಾರ ಮೂರ್ತಿಗಳನ್ನು ಬಂಗಾರದಿಂದ ರಚಿಸಿ, ಅವುಗಳನ್ನು ವಿಧಾನೋಕ್ತಪ್ರಕಾರ ಪೂಜಿಸಿ, ಆ ಮೂರ್ತಿಗಳನ್ನು ಹತ್ತು ಉತ್ತಮ ಬ್ರಾಹ್ಮಣರಿಗೆ ಸತ್ಕಾರಪೂರ್ವಕ ವಾಗಿ ದಾನಮಾಡಬೇಕು.

೧೮. ಆದಿನ ಉಪವಾಸ ಅಥವಾ ಏಕಭುಕ್ತವನ್ನು ಮಾಡಿ ಬ್ರಾಹ್ಮಣ ರಿಗೆ ಭೋಜನಮಾಡಿಸಿ, ವಿಸರ್ಜನೆಮಾಡಿ ನಂತರ ತನ್ನ ಇಷ್ಟರೊಡನೆ ತಾನು ಭೋಜನಮಾಡಬೇಕು.

ಭಕ್ತ್ಯಾ ಕೃತ್ವಾ ವ್ರತಂ ತ್ವೇತದ್ಭುಕ್ತ್ವಾ ಭೋಗಾನಿಹೋತ್ತಮಾನ್ ।
ವಿಮಾನೇನ ವ್ರಜೇದಂತೇ ವಿಷ್ಣುಲೋಕಂ ಸನಾತನಂ ॥ ೧೯ ॥

ಆಶ್ವಿನೇ ಶುಕ್ಲದಶಮೀ ವಿಜಯಾ ಸಾ ಪ್ರಕೀರ್ತಿತಾ ।
ಚತುರ್ಗೋಮಯಪಿಂಡಾನಿ ಪ್ರಾತರ್ನ್ಯಸ್ಯ ಗೃಹಾಂಗಣೇ ॥ ೨೦ ॥

ವಕ್ರಜಾಲಸ್ವರೂಪೇಣ ತನ್ಮಧ್ಯೇ ರಾಮಲಕ್ಷ್ಮಣೌ ।
ತಥಾ ಭರತಶತ್ರುಘ್ನೌ ಸಂಪೂಜ್ಯಾಶ್ಚತುರಾಣಿ ಹಿ ॥ ೨೧ ॥

ಸಪಿಧಾನಾಸು ಪಾತ್ರೀಷು ಗೋಮಯೀಷು ಚತಸೃಷು ।
ಕ್ಲಿನ್ನಂ ಧಾನ್ಯಂ ಸರೌಪ್ಯಂ ತು ಧೃತ್ವಾ ಧೌತಾಂಶುಕಾವೃತಂ ॥ ೨೨ ॥

ಪಿತೃಮಾತೃಭ್ರಾತೃಪುತ್ರಜಾಯಾಭೃತ್ಯಸಮನ್ವಿತಂ ।
ಸಂಪೂಜ್ಯ ಗಂಧಪುಷ್ಪಾದ್ಯೈರ್ನೈವೇದ್ಯೈಶ್ಚ ವಿಧಾನತಃ ॥ ೨೩ ॥

---

೧೯. ಭಕ್ತಿಯಿಂದ ಈ ವ್ರತವನ್ನು ಮಾಡಿದವನು ಇಲ್ಲಿ ಉತ್ತಮ ಭೋಗಗಳನ್ನನುಭವಿಸಿ ಕೊನೆಯಲ್ಲಿ ಸನಾತನವಾದ ವಿಷ್ಣುಲೋಕಕ್ಕೆ ವಿಮಾನದಲ್ಲಿ ಕುಳಿತು ಹೋಗುವನು.

೨೦-೨೧. ಆಶ್ವಯುಜ ಶುಕ್ಲದ ದಶಮಿಯು ವಿಜಯಾದಶಮಿ ಎಂದು ಪ್ರಸಿದ್ಧವಾಗಿದೆ. ಆದಿನ ಪ್ರಾತಃಕಾಲದಲ್ಲಿ ಮನೆಯ ಅಂಗಳದಲ್ಲಿ ವಕ್ರಜಾಲ ರೂಪವಾಗಿ ನಾಲ್ಕುಗೋಮಯಪಿಂಡಗಳನ್ನಿಟ್ಟು ಅದರ ಮಧ್ಯದಲ್ಲಿ ರಾಮ, ಲಕ್ಷ್ಮಣ, ಭರತ ಮತ್ತು ಶತ್ರುಘ್ನ ಎಂಬ ನಾಲ್ವರನ್ನು ಪೂಜಿಸಬೇಕು.

೨೨-೨೭. ನಾಲ್ಕು ಮುಚ್ಚಳಸಹಿತವಾದ ಗೋಮಯ ಪಾತ್ರೆಗಳಲ್ಲಿ ರಜತಸಹಿತವಾದ ಕ್ಲಿನ್ನಧಾನ್ಯವನ್ನು ತುಂಬಿ ಒಗೆದಬಟ್ಟೆಯನ್ನು ಹೊದಿಸಿ, ತಂದೆ, ತಾಯಿ, ಸಹೋದರ, ಪುತ್ರ, ಪತ್ನೀ ಮತ್ತು ಭೃತ್ಯರ ಸಹಿತನಾಗಿ ಅದನ್ನು ಗಂಧ, ಪುಷ್ಪ ಮುಂತಾದುವುಗಳಿಂದಲೂ, ನೈವೇದ್ಯಗಳಿಂದಲೂ, ವಿಧಾ

ನಮಸ್ಕೃತ್ಯಾಥ ಭುಂಜೀತ ದ್ವಿಜಾನ್ಸಂಭೋಜ್ಯ ಪೂಜಿತಾನ್ ।
ಏವಂ ಕೃತ್ವಾ ವಿಧಾನಂ ತು ನರೋ ವರ್ಷಂ ಸುಖಾನ್ವಿತಃ ॥ ೨೪ ॥

ಧನಧಾನ್ಯಸಮೃದ್ಧಶ್ಚ ನಿಶ್ಚಿತಂ ಜಾಯತೇ ದ್ವಿಜ ।
ಅಥಾಪರಾಹ್ಣಸಮಯೇ ನವಮ್ಯಾಂ ಸಂನಿಮಂತ್ರಿತಾಂ ॥ ೨೫ ॥

ಪೂರ್ವದಿಕ್ಷು ಶಮೀಂ ವಿಪ್ರ ಗತ್ವಾ ತನ್ಮೂಲಜಾಂ ಮೃದಂ ।
ಗೃಹೀತ್ವಾ ಸ್ವಗೃಹಂ ಪ್ರಾಪ್ಯ ಗೀತವಾದಿತ್ರನಿಃಸ್ವನೈಃ ॥ ೨೬ ॥

ಸಂಪೂಜ್ಯಂ ತಾಂ ವಿಧಾನೇನ ಸಜ್ಜೀಕೃತ್ಯ ಸ್ವಕಂ ಬಲಂ ।
ನಿರ್ಗತ್ಯ ಪೂರ್ವದ್ವಾರೇಣ ಗ್ರಾಮಾದ್ಬಹಿರನಾಕುಲಃ ॥ ೨೭ ॥

ತತಃ ಶತ್ರುಪ್ರತಿಕೃತಿಂ ನಿರ್ಮಿತಾಂ ಪತ್ರಕಾದಿಭಿಃ ।
ಮನಸಾ ಕಲ್ಪಿತಾಂ ವಾಪಿ ಸ್ವರ್ಣಪುಂಖಶರೇಣ ವೈ ॥ ೨೮ ॥

---

ನಾನುಸಾರವಾಗಿ ಪೂಜಿಸಿ, ನಮಸ್ಕಾರಮಾಡಿ, ಪೂಜಿತ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ತಾನೂ ಭೋಜನಮಾಡಬೇಕು.

ಈರೀತಿ ವ್ರತವಿಧಾನವನ್ನಾಚರಿಸಿದರೆ ಮನುಷ್ಯನು ವರ್ಷಪರ್ಯಂತವಾಗಿ ಖಂಡಿತ ಧನಧಾನ್ಯ ಸಮೃದ್ಧಿಯನ್ನು ಹೊಂದಿ ಸುಖದಿಂದಿರುವನು.

ತರುವಾಯ ಅಪರಾಹ್ಣಸಮಯದಲ್ಲಿ ನವಮಿಯ ದಿನ ಪೂರ್ವದಿಕ್ಕಿನಲ್ಲಿ ಆವಾಹನೆಮಾಡಿ ಸ್ಥಾಪಿಸಿದ್ದ ಶಮಿಯಹತ್ತಿರಹೋಗಿ ಅದರ ಮೂಲಮೃತ್ತಿಕೆಯನ್ನು ತೆಗೆದುಕೊಂಡು ತನ್ನ ಮನೆಗೆ ಬಂದು ಗೀತ ವಾದ್ಯ ಧ್ವನಿಗಳಿಂದ ಅದನ್ನು ವಿಧ್ಯುಕ್ತಪ್ರಕಾರ ಪೂಜಿಸಿ, ತನ್ನ ಸೈನ್ಯವನ್ನು ಸಜ್ಜುಗೊಳಿಸಿ, ಪೂರ್ವದ ಬಾಗಿಲಿನಿಂದ ಗ್ರಾಮದ ಹೊರಕ್ಕೆ ಸಂತೋಷವಾಗಿ ವಿಜಯಯಾತ್ರೆ ಹೊರಡಬೇಕು.

೨೮-೨೯. ಬಳಿಕ ಅಲ್ಲಿ ಪತ್ರಾದಿಗಳಿಂದ ಶತ್ರುಪ್ರತಿಮೆಯನ್ನು ರಚಿಸಿ ಅಥವಾ ಮನಸ್ಸಿನಲ್ಲಿ ಶತ್ರುವಿನ ಆಕಾರವನ್ನು ಸ್ಮರಣೆಗೆ ತಂದು ಸ್ವರ್ಣಪುಂಖ

ವಿಧ್ಯೇದಿತಿ ಭೃಶಂ ಪ್ರೀತಃ ಪ್ರಾಪ್ನುಯಾತ್ಸ್ವಗೃಹಂ ನಿಶಿ ।
ಏವಂ ಕೃತವಿಧಿರ್ವಾಪಿ ಗಚ್ಛೇದ್ವಾ ಶತ್ರುನಿಗ್ರಹೇ ॥ ೨೯ ॥

ಏಷೈವಂ ದಶಮೀ ವಿಪ್ರ ವಿಧಿನಾಚರಿತಾ ಸದಾ ।
ಧನಂ ಜಯಂ ಸುತಾನ್ ಗಾಶ್ಚ ಗಜಾಶ್ವಂ ವಾಪ್ಯಜಾವಿಕಂ ॥ ೩೦ ॥

ದದ್ಯಾದಿಹ ಶರೀರಾಂತೇ ಸ್ವರ್ಗತಿಂ ಚಾಪಿ ನಾರದ ।
ದಶಮ್ಯಾಂ ಕಾರ್ತಿಕೇ ಶುಕ್ಲೇ ಸಾರ್ವಭೌಮವ್ರತಂ ಚರೇತ್ ॥ ೩೧ ॥

ಕೃತೋಪವಾಸೋ ಹ್ಯೇಕಾಶೀ ನಿಶೀಥೇऽಪೂಪಕಾದಿಭಿಃ ।
ದಶದಿಕ್ಷು ಬಲಿಂ ದದ್ಯಾದ್ಗೃಹಾದ್ವಾಪಿ ಪುರಾದ್ಬಹಿಃ ॥ ೩೨ ॥

---

ಬಾಣದಿಂದ ಅದನ್ನು ನಾಶಪಡಿಸಬೇಕು. ನಂತರ ಸಂತುಷ್ಟನಾಗಿ ರಾತ್ರಿ ಮನೆಗೆ ಬರಬೇಕು. ಅಥವಾ ಈರೀತಿ ವಿಧಾನವನ್ನಾಚರಿಸಿದಮೇಲೆ ಶತ್ರು ನಿಗ್ರಹಾರ್ಥವಾಗಿ ಪ್ರಯಾಣಮಾಡಬೇಕು.

೩೦-೩೨. ಈ ದಶಮಿಯು ಉಕ್ತವಿಧಾನಾನುಸಾರವಾಗಿ ಆಚರಿಸಲ್ಪಟ್ಟರೆ ಅದು ಇಲ್ಲಿಯೇ ಧನ, ಜಯ, ಮಕ್ಕಳು, ಗೋವು, ಆನೆ, ಕುದುರೆ, ಮೇಕೆ, ಕುರಿ ಮುಂತಾದ ಸಂಪತ್ತನ್ನು ಕೊಡುವುದು. ಮರಣಾನಂತರ ಸ್ವರ್ಗಲೋಕಗತಿಯನ್ನೂ ಕೊಡುವುದು.

ಕಾರ್ತಿಕ ಶುಕ್ಲ ದಶಮಿಯ ದಿನ ಸಾರ್ವಭೌಮವ್ರತವನ್ನಾಚರಿಸಬೇಕು. ಉಪವಾಸಮಾಡಿ ಅಥವಾ ಒಪ್ಪತ್ತೂಟಮಾಡಿ ಹತ್ತುದಿಕ್ಕುಗಳಲ್ಲಿಯೂ ಮನೆಯ ಅಥವಾ ಪಟ್ಟಣದ ಹೊರಗೆ ಅರ್ಧರಾತ್ರಿಯಲ್ಲಿ ಅಪೂಪಾದಿಗಳಿಂದ ಬಲಿಯನ್ನು ಕೊಡಬೇಕು.

**ಮಂಡಲೇಷ್ಟದಲೇ ಕ್ಲೃಪ್ತೇ ಗೋವಿಟ್‌ಲಿಪ್ತಧರಾತಲೇ ।**
**ಮಂತ್ರೈರೇಭಿರ್ದ್ವಿಜಶ್ರೇಷ್ಠ ಗಣೇಶಾದಿಕೃತಾರ್ಚನಃ ॥ ೩೩ ॥**

**ಯೋ ಮೇ ಪೂರ್ವಗತಃ ಪಾಪ್ಮಾ ಪಾಪಕೇನೇಹ ಕರ್ಮಣಾ ।**
**ತಮಿಂದ್ರೋ ದೇವರಾಜೋದ್ಯ ನಾಶಯತ್ವಖಿಲೇಷ್ಟದಃ ॥ ೩೪ ॥**

**ಯೋ ಮೇ ವಹ್ನಿಗತಃ ಪಾಪ್ಮಾ ಪಾಪಕೇನೇಹ ಕರ್ಮಣಾ ।**
**ತೇಜೋರಾಜೋಥ ವಹ್ನಿಸ್ತಂ ನಾಶಯತ್ವಖಿಲೇಷ್ಟದಃ ॥ ೩೫ ॥**

**ಯೋ ಮೇ ದಕ್ಷಗತಃ ಪಾಪ್ಮಾ ಪಾಪಕೇನೇಹ ಕರ್ಮಣಾ ।**
**ತಂ ಯಮಃ ಪ್ರೇತರಾಜೋ ವೈ ನಾಶಯತ್ವಖಿಲೇಷ್ಟದಃ ॥ ೩೬ ॥**

**ಯೋ ಮೇ ನೈಋತಿಗಃ ಪಾಪ್ಮಾ ಪಾಪಕೇನೇಹ ಕರ್ಮಣಾ ।**
**ರಕ್ಷೋರಾಜೋ ನೈರ್ಋತಿಸ್ತಂ ನಾಶಯತ್ವಖಿಲೇಷ್ಟದಃ ॥ ೩೭ ॥**

---

೩೩. ಅದರ ವಿಧಾನ:—ಸಗಣಿಯಿಂದ ಸಾರಿಸಿದ ನೆಲದಮೇಲೆ ಅಷ್ಟದಳ ಮಂಡಲವನ್ನು ರಚಿಸಿ ಗಣೇಶಾದಿಗಳನ್ನು ಪೂಜಿಸಿ ಮುಂದೆಹೇಳುವ ಮಂತ್ರಗಳಿಂದ ಬಲಿಪ್ರದಾನಮಾಡಬೇಕು.

೩೪. ಬಲಿಮಂತ್ರ:—ನನ್ನ ಪಾಪಕರ್ಮದಿಂದ ಪೂರ್ವದಿಕ್ಕಿನಲ್ಲಿ ಸಂಭವಿಸಿದ ಪಾಪವನ್ನು ಸಮಸ್ತೇಷ್ಟಪ್ರದನಾದ, ದೇವರಾಜನಾದ ಇಂದ್ರನು ನಾಶಪಡಿಸಲಿ.

೩೫. ನನ್ನ ಪಾಪಕೃತ್ಯದಿಂದ ಆಗ್ನೇಯದಿಕ್ಕಿನಲ್ಲಿ ಸಂಭವಿಸಿರುವ ಪಾಪವನ್ನು ಸಕಲಾಭಿಷ್ಟಪ್ರದನೂ, ತೇಜೋ ರಾಜನೂ, ಆದ ಅಗ್ನಿಯು ನಾಶಪಡಿಸಲಿ.

೩೬. ನನ್ನ ಪಾಪಕರ್ಮದಿಂದ ದಕ್ಷಿಣದಿಕ್ಕಿನಲ್ಲಿ ಸಂಭವಿಸಿರುವ ಪಾಪವನ್ನು ಅಖಿಲೇಷ್ಟದಾಯಕನಾದ ಪ್ರೇತರಾಜನಾದ ಯಮನು ನಾಶಪಡಿಸಲಿ.

೩೭. ನನ್ನ ಪಾಪಕರ್ಮದಿಂದ ನೈಋತ್ಯದಿಕ್ಕಿನಲ್ಲಿ ಸಂಭವಿಸಿರುವ ಪಾಪವನ್ನು ಇಷ್ಟಾರ್ಥಗಳೆಲ್ಲವನ್ನೂ ಕೊಡುವ, ರಾಕ್ಷಸರಾಜನಾದ ನಿರ್ಋತಿಯು ನಾಶಪಡಿಸಲಿ.

ಯೋ ಮೇ ಪಶ್ಚಿಮಗಃ ಪಾಪ್ಮಾ ಪಾಪಕೇನೇಹ ಕರ್ಮಣಾ ।
ಯಾದಃಪತಿಸ್ತ್ವಂ ವರುಣೋ ನಾಶಯತ್ವಖಿಲೇಷ್ಟದಃ ॥ ೩೮ ॥

ಯೋ ಮೇ ವಾಯುಗತಃ ಪಾಪ್ಮಾ ಪಾಪಕೇನೇಹ ಕರ್ಮಣಾ ।
ವಾಯುಸ್ತ್ವಂ ಮರುತಾಂ ರಾಜಾ ನಾಶಯತ್ವಖಿಲೇಷ್ಟದಃ ॥ ೩೯ ॥

ಯೋ ಮೇ ಸೌಮ್ಯಗತಃ ಪಾಪ್ಮಾ ಪಾಪಕೇನೇಹ ಕರ್ಮಣಾ ।
ಸೋಮಸ್ತ್ವಮೃಕ್ಷಯಕ್ಷೇಶೋ ನಾಶಯತ್ವಖಿಲೇಷ್ಟದಃ ॥ ೪೦ ॥

ಯೋ ಮೇ ಈಶಗತಃ ಪಾಪ್ಮಾ ಪಾಪಕೇನೇಹ ಕರ್ಮಣಾ ।
ಈಶಗೋ ಭೂತನಾಥಸ್ತ್ವಂ ನಾಶಯತ್ವಖಿಲೇಷ್ಟದಃ ॥ ೪೧ ॥

ಯೋ ಮ ಊರ್ಧ್ವಗತಃ ಪಾಪ್ಮಾ ಪಾಪಕೇನೇಹ ಕರ್ಮಣಾ ।
ಬ್ರಹ್ಮಾ ಪ್ರಜಾಪತೀಶಸ್ತ್ವಂ ನಾಶಯತ್ವಖಿಲೇಷ್ಟದಃ ॥ ೪೨ ॥

---

೩೮. ನನ್ನ ಪಾಪಕರ್ಮದಿಂದ ಪಶ್ಚಿಮದಿಕ್ಕಿನಲ್ಲಿ ಸಂಭವಿಸಿದ ಪಾಪವನ್ನು ಸಕಲೇಷ್ಟಪ್ರದನು, ಜಲಚರಪತಿಯೂ ಆದ ವರುಣನು ನಾಶಪಡಿಸಲಿ.

೩೯. ನನ್ನ ಪಾಪಕೃತ್ಯದಿಂದ ವಾಯುವ್ಯದಿಕ್ಕಿನಲ್ಲಿ ಸಂಭವಿಸಿರುವ ಪಾಪವನ್ನು ಇಷ್ಟಾರ್ಥವನ್ನೆಲ್ಲಾ ಕೊಡುವ ಮರುದ್ಗಣಕ್ಕೆ ರಾಜನಾದ ವಾಯುವು ನಾಶಪಡಿಸಲಿ.

೪೦. ನನ್ನ ಪಾಪಕೃತ್ಯದಿಂದ ಉತ್ತರದಿಕ್ಕಿನಲ್ಲಿ ಸಂಭವಿಸಿರುವ ಪಾಪವನ್ನು ಅಖಿಲೇಷ್ಟಪ್ರದನೂ, ಋಕ್ಷಯಕ್ಷಾಧಿಪತಿಯೂ ಆದ ಸೋಮನು ನಾಶಪಡಿಸಲಿ.

೪೧. ನನ್ನ ಪಾಪಕೃತ್ಯದಿಂದ ಈಶಾನ್ಯದಲ್ಲಿ ಸಂಭವಿಸಿರುವ ಪಾಪವನ್ನು ಇಷ್ಟಾರ್ಥಗಳನ್ನೆಲ್ಲಾ ಕೊಡುವ, ಭೂತನಾಥನಾದ ಈಶಾನನು ನಾಶಪಡಿಸಲಿ.

೪೨. ನನ್ನ ಪಾಪಕರ್ಮದಿಂದ ಊರ್ಧ್ವದಿಕ್ಕಿನಲ್ಲಿ ಸಂಭವಿಸಿದ ಪಾಪವನ್ನು ಸಕಲಾಭಿಷ್ಟದಾತೃವಾದ, ಪ್ರಜಾಪತೀಶನಾದ ಬ್ರಹ್ಮನು ನಾಶಪಡಿಸಲಿ.

ಯೋ ಮೇsಧಃ ಸಂಸ್ಥಿತಃ ಪಾಪ್ಮಾ ಪಾಪಕೇನೇಹ ಕರ್ಮಣಾ |
ಅನಂತೋ ನಾಗರಾಜಸ್ತಂ ನಾಶಯತ್ವಖಿಲೇಷ್ಟದಃ || ೪೩ ||

ಇತ್ಯೇವಂ ದಿಕ್ಷು ದಶಸು ಬಲಿಂ ದತ್ವಾ ಸಮಾಹಿತಃ |
ಕ್ಷೇತ್ರಪಾಲಾಯ ತದ್ಬಾಹ್ಯೇ ಕ್ಷಿಪೇದ್ಬಲಿಮತಂದ್ರಿತಃ || ೪೪ ||

ಏವಂ ಕೃತವಿಧಿಃ ಶೇಷಂ ನಿಶಾಯಾಂ ನಿನಯೇತ್ಸುಧೀಃ |
ಗೀತೈಃ ಸುಮಂಗಲಪ್ರಾಯೈಃ ಸ್ತವಪಾಠೈರ್ಜಪಾದಿಭಿಃ || ೪೫ ||

ಪಾತ್ರಃ ಸ್ನಾತ್ವಾ ಸಮಭ್ಯರ್ಚ್ಯ ಲೋಕಪಾಲಾನ್ ದ್ವಿಜೋತ್ತಮಾನ್ |
ದ್ವಾದಶಾಭ್ಯರ್ಚ್ಯ ಸಂಭೋಜ್ಯ ಶಕ್ತಿತೋ ದಕ್ಷಿಣಾಂ ದದೇತ್ || ೫೬ ||

---

೪೩. ನನ್ನ ಪಾಪಕೃತ್ಯದಿಂದ ಅಧೋದಿಕ್ಕಿನಲ್ಲಿ ಸಂಭವಿಸಿರುವ ಪಾಪವನ್ನು ಸರ್ಪರಾಜನು, ಅಖಿಲೇಷ್ಟದಾಯಕನೂ ಆದ ಅನಂತನು ನಾಶಪಡಿಸಲಿ.

೪೪. ಈರೀತಿಯಾಗಿ ಆಯಾಯಾ ದಿಙ್ಮಂತ್ರಗಳಿಂದ ಹತ್ತು ದಿಕ್ಕುಗಳಲ್ಲಿಯೂ ಮನಸ್ಸಮಾಧಾನದಿಂದ ಬಲಿಕೊಟ್ಟು, ಅದರ ಹೊರಭಾಗದಲ್ಲಿ ಅತಂದ್ರಿತನಾಗಿ ಕ್ಷೇತ್ರಪಾಲನಿಗೆ ಬಲಿಯನ್ನೆಸೆಯಬೇಕು

೪೫. ಈರೀತಿಯಾದ ವಿಧಾನವನ್ನಾಚರಿಸಿ ಉಳಿದ ರಾತ್ರಿಭಾಗವನ್ನು ಮಂಗಳಪ್ರಾಯವಾದ ಗೀತೆಗಳು, ಸ್ತೋತ್ರಪಾಠ ಜಪ ಮುಂತಾದುವುಗಳನ್ನು ಮಾಡುತ್ತಾ ಕಳೆಯಬೇಕು.

೪೬. ಬೆಳಗಾದಮೇಲೆ ಸ್ನಾನಮಾಡಿ ಇಂದ್ರಾದಿ ಲೋಕೇಶರನ್ನು ಪೂಜಿಸಿ, ಹನ್ನೆರಡು ದ್ವಿಜೋತ್ತಮರನ್ನು ಸತ್ಕರಿಸಿ, ಅವರಿಗೆ ಭೋಜನಮಾಡಿಸಿ ತನ್ನ ಶಕ್ತ್ಯನುಸಾರವಾಗಿ ದಕ್ಷಿಣೆಕೊಡಬೇಕು.

ಇತ್ಥಂ ಕೃತ್ವಾ ವ್ರತಂ ವಿಪ್ರ ಭೋಗಾನ್ಭುಕ್ತ್ವೇಹಶುಭಾನ್ |
ಯುಗಂ ಸ್ವರ್ಗಸುಖಂ ಭುಕ್ತ್ವಾ ಸಾರ್ವಭೌಮೋ ನೃಪೋ ಭವೇತ್ ||೪೭||

ಮಾರ್ಗಶುಕ್ಲದಶಮ್ಯಾಂ ತು ಚರೇದಾರೋಗ್ಯಕಂ ವ್ರತಂ |
ಗಂಧಾದ್ಯೈರರ್ಚಯೇದ್ವಿಪ್ರಾನ್ ದಶ ತಚ್ಚರಣೋದಕಂ || ೪೮ ||

ಪೀತ್ವಾಥ ದಕ್ಷಿಣಾಂ ದತ್ವಾ ವಿಸೃಜೇದೇಕಭೋಜನಃ |
ಏತತ್ಕೃತ್ವಾ ವ್ರತಂ ವಿಪ್ರ ಹ್ಯಾರೋಗ್ಯಂ ಪ್ರಾಪ್ಯ ಭೂತಲೇ || ೪೯ ||

ಧರ್ಮರಾಜಪ್ರಸಾದೇನ ಮೋದತೇ ದಿವಿ ದೇವವತ್ |
ಪೌಷೇ ದಶಮ್ಯಾಂ ಶುಕ್ಲಾಯಾಂ ವಿಶ್ವೇದೇವಾನ್ ಸಮರ್ಚಯೇತ್ ||೫೦||

ಕ್ರತುಂ ದಕ್ಷಂ ವಸೂನ್ಸತ್ಯಂ ಕಾಲಂ ಕಾಮಂ ಮುನಿಂ ಗುರುಂ |
ವಿಪ್ರಂ ರಾಮಂ ಚ ದಶಧಾ ಕೇಶವಸ್ತ್ವಾನ್ಸಮಾಸ್ಥಿತಃ || ೫೧ ||

---

೪೭. ಈರೀತಿಯಾಗಿ ವ್ರತವನ್ನಾಚರಿಸಿದ ಮನುಷ್ಯನು ಇಲ್ಲಿ ಶುಭ ಭೋಗಗಳನ್ನು ಅನುಭವಿಸಿ ಯುಗಪರ್ಯಂತವಾಗಿ ಸ್ವರ್ಗಸುಖವನ್ನೂ ಭೋಗಿಸಿ ಸಾರ್ವಭೌಮರಾಜನಾಗುವನು.

೪೮-೫೧. ಮಾರ್ಗಶೀರ್ಷ ಶುಕ್ಲ ದಶಮಿಯಲ್ಲಿ ಆರೋಗ್ಯವ್ರತವನ್ನಾಚರಿಸಬೇಕು. ಗಂಧಾದಿಗಳಿಂದ ಹತ್ತುಬ್ರಾಹ್ಮಣರನ್ನು ಪೂಜಿಸಿ, ಅವರ ಪಾದೋದಕವನ್ನು ಪಾನಮಾಡಿ, ಅವರಿಗೆ ದಕ್ಷಿಣೆಕೊಟ್ಟು, ವಿಸರ್ಜನೆಮಾಡಿ, ತಾನು ಒಪ್ಪತ್ತೂಟಮಾಡಬೇಕು.

ಈ ವ್ರತವನ್ನು ಮಾಡಿದವನು ಧರ್ಮರಾಜನ ಅನುಗ್ರಹದಿಂದ ಆರೋಗ್ಯ ಹೊಂದಿ, ದೇವಲೋಕದಲ್ಲಿ ದೇವತೆಗಳು ಸುಖಪಡುವಂತೆ ಭೂಲೋಕದಲ್ಲಿಯೇ ಸುಖಪಡುವನು.

ಪುಷ್ಯ ಶುಕ್ಲ ದಶಮಿಯ ದಿನದಲ್ಲಿ ವಿಶ್ವೇದೇವತೆಗಳನ್ನು ಪೂಜಿಸಬೇಕು. ಆದಿನದಲ್ಲಿ ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾಮ, ಮುನಿ, ಗುರು, ವಿಪ್ರ, ಮತ್ತು ರಾಮ ಈ ಹತ್ತುಜನರಲ್ಲಿ ಕೇಶವನು ಹತ್ತುವಿಧವಾಗಿ ಸನ್ನಿಹಿತನಾಗಿರುವನು.

ಸ್ಥಾಪಯಿತ್ವಾ ದರ್ಭಮಯಾನಾಸನೇಷು ಚ ಸಂಸ್ಥಿತಾನ್ |
ಗಂಧೈರ್ಧೂಪೈಸ್ತಥಾದೀಪೈರ್ನೈವೇದ್ಯೈಶ್ಚಾಪಿ ನಾರದ || ೫೨ ||

ಪ್ರತ್ಯೇಕಂ ದಕ್ಷಿಣಾಂ ದತ್ವಾ ಪ್ರಣಿಪತ್ಯ ವಿಸರ್ಜಯೇತ್ |
ದಕ್ಷಿಣಾಂ ತಾಂ ದ್ವಿಜಾಗ್ರ್ಯೇಭ್ಯೋ ಗುರವೇ ವಾ ಸಮರ್ಪಯೇತ್ || ೫೩ ||

ಏವಂ ಕೃತವಿಧಿಶ್ಚೈಕಭಕ್ತೋ ಭೋಗೀ ವ್ರತೀ ಭವೇತ್ |
ಲೋಕದ್ವಯಸ್ಯ ವಿಪ್ರರ್ಷೇ ನಾತ್ರ ಕಾರ್ಯಾ ವಿಚಾರಣಾ || ೫೪ ||

ಮಾಘಶುಕ್ಲದಶಮ್ಯಾಂ ತು ಸೋಪವಾಸೋ ಜಿತೇಂದ್ರಿಯಃ |
ದೇವಾನಂಗಿರಸೋ ನಾಮ ದಶ ಸಮ್ಯಕ್ಸಮರ್ಚಯೇತ್ || ೫೫ ||

ಕೃತ್ವಾ ಸ್ವರ್ಣಮಯಾನ್ವಿಪ್ರ ಗಂಧಾದ್ಯೈರುಪಚಾರಕೈಃ |
ಆತ್ಮಾ ಹ್ಯಾಯುರ್ಮನೋ ದಕ್ಷೋ ಮದಃ ಪ್ರಾಣಸ್ತಥೈವ ಚ || ೫೬ ||

---

೫೨-೫೩. ಆದಕಾರಣ ಈ ಹತ್ತುಮಂದಿಯನ್ನು ದರ್ಭೆಗಳಲ್ಲಿ ಆವಾಹನೆಮಾಡಿ ಆಸನಗಳಲ್ಲಿ ಸ್ಥಾಪಿಸಿ, ಗಂಧ, ಧೂಪ, ದೀಪ, ನೈವೇದ್ಯಗಳನ್ನರ್ಪಿಸಿ ಎಲ್ಲರಿಗೂ ಪ್ರತ್ಯೇಕವಾಗಿ ದಕ್ಷಿಣೆಕೊಟ್ಟು ನಮಸ್ಕರಿಸಿ ವಿಸರ್ಜನೆಮಾಡಬೇಕು. ಹೀಗೆ ಕೊಟ್ಟ ದಕ್ಷಿಣೆಯನ್ನು ಶ್ರೇಷ್ಠದ್ವಿಜರಿಗೆ ಅಥವಾ ಗುರುಗಳಿಗೆ ಸಮರ್ಪಿಸಬೇಕು.

೫೪. ಈರೀತಿ ಏಕಭುಕ್ತಮಾಡಿ ವ್ರತವನ್ನಾಚರಿಸಿದವನು ಇಹಲೋಕ ಪರಲೋಕಗಳಲ್ಲಿ ಸುಖಭಾಗಿಯಾಗುವನು. ನಾರದನೇ! ಈ ವಿಷಯದಲ್ಲಿ ಸಂಶಯಪಡಬಾರದು.

೫೫. ಮಾಘ ಶುಕ್ಲ ದಶಮಿಯ ದಿನದಲ್ಲಿ ಜಿತೇಂದ್ರಿಯನಾಗಿ ಉಪವಾಸದಿಂದ ಅಂಗಿರಸ್ಸೆಂಬ ಹತ್ತುದೇವತೆಗಳನ್ನು ಚೆನ್ನಾಗಿ ಪೂಜಿಸಬೇಕು.

೫೬-೬೦. ಆತ್ಮಾ, ಆಯುಃ, ಮನಃ, ದಕ್ಷ, ಮದ, ಪ್ರಾಣ, ಬರ್ಹಿಷ್ಮಾನ್, ಗವಿಷ್ಠ, ದತ್ತ ಮತ್ತು ಸತ್ಯ ಎಂಬ ಹತ್ತು ಅಂಗಿರಸ್ಸುಗಳನ್ನು ಬಂಗಾರದ ಪ್ರತಿಮೆಗಳಲ್ಲಿ ಆವಾಹನೆಮಾಡಿ ಗಂಧಾದಿ ಷೋಡಶೋಪಚಾರಗಳಿಂದ ಪೂಜಿಸಬೇಕು.

ಬರ್ಹಿಷ್ಮಾರ್ಗಶ್ಚ ಗವಿಷ್ಠಶ್ಚ ದತ್ತಃ ಸತ್ಯಶ್ಚ ತೇ ದಶ ।
ದಶ ವಿಪ್ರಾನ್ಭೋಜಯಿತ್ವಾ ಮಧುರಾನ್ನೇನ ನಾರದ ॥ ೫೭ ॥

ಮೂರ್ತೀಸ್ತೇಭ್ಯಃ ಪ್ರದದ್ಯಾತ್ತಾಃ ಸ್ವರ್ಗಲೋಕಾಪ್ತಯೇ ಕ್ರಮಾತ್ ।
ಅಂತ್ಯಶುಕ್ಲದಶಮ್ಯಾಂ ತು ಚತುರ್ದಶ ಯಮಾನ್ಯಜೇತ್ ॥ ೫೮ ॥

ಯಮಶ್ಚ ಧರ್ಮರಾಜಶ್ಚ ಮೃತ್ಯುಶ್ಚೈವಾಂತಕಸ್ತಥಾ ।
ವೈವಸ್ವತಶ್ಚ ಕಾಲಶ್ಚ ಸರ್ವಭೂತಕ್ಷಯಸ್ತಥಾ ॥ ೫೯ ॥

ಔದುಂಬರಶ್ಚ ದಧ್ನಶ್ಚ ದ್ವೌ ನೀಲಪರಮೇಷ್ಠಿನೌ ।
ವೃಕೋದರಶ್ಚ ಚಿತ್ರಶ್ಚ ಚಿತ್ರಗುಪ್ತಶ್ಚತುರ್ದಶ ॥ ೬೦ ॥

ಗಂಧಾದ್ಯೈರುಪಚಾರೈಶ್ಚ ಸಮಭ್ಯರ್ಚ್ಯಾಥ ತರ್ಪಯೇತ್ ।
ತಿಲಾಂಬುಮಿಶ್ರಾಂಜಲಿಭಿರ್ದರ್ಭೈಃ ಪ್ರತ್ಯೇಕಶಸ್ತ್ರಿಭಿಃ ॥ ೬೧ ॥

ತತಶ್ಚ ದದ್ಯಾತ್ಸೂರ್ಯಾರ್ಘ್ಯಂ ತಾಮ್ರಪಾತ್ರೇಣ ನಾರದ ।
ರಕ್ತಚಂದನಸಂಮಿಶ್ರತಿಲಾಕ್ಷತಯವಾಂಬುಭಿಃ ॥ ೬೨ ॥

---

ಬಳಿಕ ಹತ್ತುಮಂದಿ ಬ್ರಾಹ್ಮಣರಿಗೆ ಮಧುರಾನ್ನ ಭೋಜನಮಾಡಿಸಿ, ಅವರಿಗೆ ಆ ಹತ್ತು ಮೂರ್ತಿಗಳನ್ನು ಕ್ರಮವಾಗಿ ದಾನಮಾಡಬೇಕು. ಅದರಿಂದ ಸ್ವರ್ಗಲೋಕಪ್ರಾಪ್ತಿಯಾಗುವುದು.

ಫಾಲ್ಗುಣ ಶುಕ್ಲ ದಶಮಿಯ ದಿನದಲ್ಲಿ ಹದಿನಾಲ್ಕುಯಮರನ್ನು ಪೂಜಿಸಬೇಕು. ಯಮ, ಧರ್ಮರಾಜ, ಮೃತ್ಯು, ಅಂತಕ, ವೈವಸ್ವತ, ಕಾಲ, ಸರ್ವಭೂತಕ್ಷಯ, ಔದುಂಬರ, ದಧ್ನ, ಇಬ್ಬರು ನೀಲಪರಮೇಷ್ಠಿಗಳು, ವೃಕೋದರ, ಚಿತ್ರ ಮತ್ತು ಚಿತ್ರಗುಪ್ತ ಇವರೇ ಹದಿನಾಲ್ಕು ಯಮರು.

೬೧. ಇವರನ್ನು ಗಂಧಾದ್ಯುಪಚಾರಗಳಿಂದ ಪೂಜಿಸಿ, ಎಳ್ಳು, ನೀರುಗಳನ್ನು ಬೊಗಸೆಯಲ್ಲಿ ಹಿಡಿದುಕೊಂಡು ದರ್ಭೆಗಳ ಸಹಿತವಾಗಿ ಒಬ್ಬೊಬ್ಬರಿಗೆ ಮೂರಾವರ್ತಿಯಂತೆ ಹದಿನಾಲ್ಕು ಯಮರಿಗೆ ತರ್ಪಣ ಕೊಡಬೇಕು.

೬೨-೬೪. ತರುವಾಯ ತಾಮ್ರಪಾತ್ರೆಯಲ್ಲಿನ ರಕ್ತಗಂಧಮಿಶ್ರಿತವಾದ ತಿಲ, ಅಕ್ಷತೆ, ಯವ, ನೀರುಗಳಿಂದ ಸೂರ್ಯನಿಗೆ ‘ ತೇಜೋರಾಶಿಯು, ಜಗ

ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ ।
ಗೃಹಾಣಾರ್ಘ್ಯಂ ಮಯಾದತ್ತಂ ಭಕ್ತ್ಯಾ ಮಾಮನುಕಂಪಯಾ ॥ ೬೩ ॥
ಇತಿ ಮಂತ್ರೇಣ ದತ್ವಾರ್ಘ್ಯಂ ವಿಪ್ರಾನ್ಭೋಜ್ಯ ಚತುರ್ದಶ ।
ರೌಪ್ಯಾಂ ಸುದಕ್ಷಿಣಾಂ ದತ್ವಾ ವಿಸೃಜ್ಯಾಶ್ನೀತ ಚ ಸ್ವಯಂ ॥ ೬೪ ॥
ಏವಂ ಕೃತವಿಧಿರ್ವಿಪ್ರ ಧರ್ಮರಾಜಪ್ರಸಾದತಃ ।
ಭುಕ್ತ್ವಾ ಭೋಗಾಂಶ್ಚ ಪುತ್ರಾದ್ಯರ್ಥಾನ್ಸೈಹಿಕಾನ್ ದೇವದುರ್ಲಭಾನ್ ॥ ೬೫ ॥
ವಿಮಾನವರಮಾಸ್ಥಾಯ ದೇಹಾಂತೇ ವಿಷ್ಣುಲೋಕಭಾಕ್ ॥ ೬೬ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸಸ್ಥಿತ ದಶಮಿವ್ರತಕಥನಂ ನಾಮ ಏಕೋನವಿಂಶತ್ಯಧಿಕಶತತಮೋಽಧ್ಯಾಯಃ

---

ತ್ಪತಿಯು, ಸಹಸ್ರಕಿರಣನೂ, ಆದ ಸೂರ್ಯನೇ! ಇಲ್ಲಿ ಸನ್ನಿಹಿತನಾಗು. ನಾನು ಕೊಡುವ ಅರ್ಘ್ಯವನ್ನು ಸ್ವೀಕರಿಸಿ ನನ್ನನ್ನು ಅನುಗ್ರಹಿಸು ' ಎಂಬ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು. ಬಳಿಕ ಹದಿನಾಲ್ಕುಮಂದಿ ಬ್ರಾಹ್ಮಣರಿಗೆ ಭೋಜನಮಾಡಿಸಿ ರಜತದಕ್ಷಿಣೆಯನ್ನು ಕೊಟ್ಟು, ವಿಸರ್ಜನೆಮಾಡಿ ತಾನೂ ಭೋಜನಮಾಡಬೇಕು.

೬೫-೬೬. ಈರೀತಿಯಾಗಿ ವ್ರತವನ್ನಾಚರಿಸಿದ ಮನುಷ್ಯನು ಧರ್ಮರಾಜನ ಅನುಗ್ರಹದಿಂದ ಐಹಿಕಭೋಗಗಳನ್ನನುಭವಿಸಿ, ದೇವತೆಗಳಿಗೂ ದುರ್ಲಭಗಳಾದ ಪುತ್ರಾದ್ಯರ್ಥಗಳನ್ನು ಪಡೆದು ಮರಣಾನಂತರ ಉತ್ಕೃಷ್ಟ ವಿಮಾನದಲ್ಲಿ ಕುಳಿತು ವಿಷ್ಣುಲೋಕದಲ್ಲಿ ಸುಖಪಡುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ಚತುರ್ಥಪಾದದಲ್ಲಿ ಹನ್ನೆರಡು ತಿಂಗಳುಗಳ ದ್ವಾದಶೀವ್ರತ ನಿರೂಪಣೆಯೆಂಬ ನೂರುಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

---

## ವಿಂಶಾಧಿಕಶತತಮೋಽಧ್ಯಾಯಃ

### ಸನಾತನ ಉವಾಚ

ಏಕಾದಶ್ಯಾಂ ತು ದಲಯೋರ್ನಿರಾಹಾರಃ ಸಮಾಹಿತಃ ।
ನಾನಾಪುಷ್ಪೈರ್ಮನೇ ಕೃತ್ವಾ ವಿಚಿತ್ರಂ ಮಂಡಪಂ ಶುಭಂ ॥ ೧ ॥

ಸ್ನಾತ್ವಾ ಸಮ್ಯಗ್ವಿಧಾನೇನ ಸೋಪವಾಸೋ ಜಿತೇಂದ್ರಿಯಃ ।
ಸಂಪೂಜ್ಯ ವಿಧಿವದ್ವಿಷ್ಣುಂ ಶ್ರದ್ಧಯಾ ಸುಸಮಾಹಿತಃ ॥ ೨ ॥

ಉಪಚಾರೈರ್ಬಹುವಿಧೈರ್ಜಪೈರ್ಹೋಮೈಃ ಪ್ರದಕ್ಷಿಣೈಃ ।
ಸ್ತೋತ್ರಪಾಠೈರ್ಬಹುವಿಧೈರ್ಗೀತವಾದ್ಯೈರ್ಮನೋಹರೈಃ ॥ ೩ ॥

ದಂಡವತ್ಪ್ರಣಿಪಾತೈಶ್ಚ ಜಯಶಬ್ದೈರ್ಮನೋಹರೈಃ ।
ರಾತ್ರೌ ಜಾಗರಣಂ ಕೃತ್ವಾ ಯಾತಿ ವಿಷ್ಣೋಃ ಪರಂ ಪದಂ ॥ ೪ ॥

### ನೂರಿಪ್ಪತ್ತನೆಯ ಅಧ್ಯಾಯವು

೧-೪. ಸನಾತನನು ಹೇಳಿದನು:— ನಾರದಮುನಿಯೇ ! ಶುಕ್ಲ ಕೃಷ್ಣಪಕ್ಷಗಳ ಏಕಾದಶೀ ದಿನಗಳಲ್ಲಿ ನಿರಾಹಾರನಾಗಿ ಸಮಾಧಾನಚಿತ್ತದಿಂದ ನಾನಾವಿಧ ಪುಷ್ಪಗಳಿಂದ ವಿಚಿತ್ರವಾದ ಶುಭಮಂಟಪವನ್ನು ರಚಿಸಿ, ವಿಧಾನಾನುಸಾರವಾಗಿ ಸ್ನಾನಮಾಡಿ ಉಪವಾಸದಿಂದ ಜಿತೇಂದ್ರಿಯನಾಗಿ ಶ್ರದ್ಧೆಯಿಂದ ಸಮಾಧಾನ ಚಿತ್ತನಾಗಿ ವಿಷ್ಣುವನ್ನು ವಿಧಿವತ್ತಾಗಿ ಬಹುವಿಧೋಪಚಾರಗಳಿಂದ ಪೂಜಿಸಿ, ಜಪ, ಹೋಮ, ಪ್ರದಕ್ಷಿಣೆ, ಸ್ತೋತ್ರಪಾಠ, ಬಹುವಿಧಗಳಾದ ಮನೋಹರ ಗೀತವಾದ್ಯಗಳು, ಸಾಷ್ಟಾಂಗನಮಸ್ಕಾರ, ಮನೋಹರಜಯಶಬ್ದ ಇವುಗಳನ್ನಾಚರಿಸುತ್ತಾ ರಾತ್ರಿಯಲ್ಲಿ ಜಾಗರಣೆಮಾಡಿದವನು ವಿಷ್ಣುವಿನ ಪರಮಪದ।ಎಂದರೆ ವೈಕುಂಠಲೋಕವನ್ನು ಹೊಂದುವನು.

ಚೈತ್ರಸ್ಯ ಶುಕ್ಲೈಕಾದಶ್ಯಾಂ ಸೋಽಪವಾಸೋ ನರೋತ್ತಮಃ ।
ಕೃತ್ವಾ ಚ ನಿಯಮಾನ್ಸರ್ವಾನ್ವಕ್ಷ್ಯಮಾಣಾನ್ದಿನತ್ರಯೇ ॥ ೫ ॥

ದ್ವಾದಶ್ಯಾಮರ್ಚಯೇದ್ಭಕ್ತ್ಯಾ ವಾಸುದೇವಂ ಸನಾತನಂ ।
ಉಪಚಾರೈಃ ಷೋಡಶಭಿಸ್ತತಃ ಸಂಭೋಜ್ಯ ಬಾಂಧವಾನ್ ॥ ೬ ॥

ದತ್ವಾ ಚ ದಕ್ಷಿಣಾಂ ತೇಭ್ಯೋ ವಿಸೃಜ್ಯಾಶ್ನೀತ ಚ ಸ್ವಯಂ ।
ಇಯಂ ತು ಕಾಮದಾ ನಾಮ ಸರ್ವಪಾತಕನಾಶಿನೀ ॥ ೭ ॥

ಭುಕ್ತಿಮುಕ್ತಿಪ್ರದಾ ವಿಪ್ರ ಭಕ್ತ್ಯಾ ಸಮ್ಯಗುಪೋಷಿತಾ ।
ವೈಶಾಖಕೃಷ್ಣೈಕಾದಶ್ಯಾಂ ಸಮುಪೋಷ್ಯ ವಿಧಾನತಃ ॥ ೮ ॥

ವರೂಥಿನೀಂ ಪರದಿನೇ ಪೂಜಯೇನ್ಮಧುಸೂದನಂ ।
ಸ್ವರ್ಣಾನ್ನಕನ್ಯಾಧೇನೂನಾಂ ದಾನಮತ್ರ ಪ್ರಶಸ್ಯತೇ ॥ ೯ ॥

---

೫-೯. ಚೈತ್ರ ಶುಕ್ಲೈಕಾದಶಿಯ ದಿನದಲ್ಲಿ ಉಪವಾಸಮಾಡಿ ನರೋತ್ತಮನು ದಿನತ್ರಯದಲ್ಲಿ ಕರ್ತವ್ಯವೆಂದು ಮುಂದೆ ಹೇಳುವ ಸಕಲ ನಿಯಮಗಳನ್ನೂ ಅನುಷ್ಠಾನಮಾಡಿ, ದ್ವಾದಶಿಯದಿನ ಸನಾತನ ವಾಸುದೇವನನ್ನು ಷೋಡಶೋಪಚಾರಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿ, ಅನಂತರ ಬಂಧುಗಳಿಗೆ ಊಟಮಾಡಿಸಿ, ಅವರಿಗೆ ದಕ್ಷಿಣೆಕೊಟ್ಟು, ವಿಸರ್ಜನೆಮಾಡಿ ತಾನು ಭೋಜನಮಾಡಬೇಕು.

ಈ ಏಕಾದಶಿಯು ಕಾಮದಾ ಎಂದು ಪ್ರಸಿದ್ಧವಾಗಿದೆ. ಬ್ರಾಹ್ಮಣನೇ! ಭಕ್ತಿಯಿಂದ ವಿಧಿವತ್ತಾಗಿ ಆಚರಿಸಿದ ಈ ಏಕಾದಶಿಯು ಸಕಲಪಾಪಗಳನ್ನೂ ನಾಶಪಡಿಸಿ ಭೋಗಮೋಕ್ಷಗಳನ್ನು ಕೊಡುತ್ತದೆ.

ವೈಶಾಖಕೃಷ್ಣೈಕಾದಶಿಗೆ ವರೂಥಿನೀ ಎಂದು ಹೆಸರು ಆದಿನದಲ್ಲಿ ವಿಧಾನಾನುಸಾರವಾಗಿ ಉಪವಾಸಮಾಡಿ, ಮಾರನೆಯದಿನ ಮಧುಸೂದನನನ್ನು ಪೂಜಿಸಬೇಕು. ಈ ವ್ರತದಲ್ಲಿ ಸುವರ್ಣ, ಅನ್ನ, ಕನ್ಯಾ ಮತ್ತು ಗೋವುಗಳ ದಾನವು ಪ್ರಶಸ್ತವು.

ವರೂಥಿನೀವ್ರತಂ ಕೃತ್ವಾ ನರೋ ನಿಯಮತತ್ಪರಃ ।
ಸರ್ವಪಾಪವಿನಿರ್ಮುಕ್ತೋ ವೈಷ್ಣವಂ ಲಭತೇ ಪದಂ ॥ ೧೦ ॥

ವೈಶಾಖಶುಕ್ಲೈಕಾದಶ್ಯಾಂ ಸಮುಪೋಷ್ಯ ಓ ಮೋಹಿನೀಂ ।
ಸ್ನಾತ್ವಾ ಪರೇಹ್ನಿ ಸಂಪೂಜ್ಯ ಗಂಧಾದ್ಯೈಃ ಪುರುಷೋತ್ತಮಂ ॥ ೧೧ ॥

ಸಂಭೋಜ್ಯ ವಿಪ್ರಾನ್ಮುಚ್ಯೇತ ಪಾತಕೇಭ್ಯೋ ನ ಸಂಶಯಃ ।
ಜ್ಯೇಷ್ಠಸ್ಯ ಕೃಷ್ಣೈಕಾದಶ್ಯಾಂ ಸಮುಪೋಷ್ಯ ಪರಾನ್ನೃಪ ॥ ೧೨ ॥

ದ್ವಾದಶ್ಯಾಂ ನೈತ್ಯಕಂ ಕೃತ್ವಾ ಸಮಭ್ಯರ್ಚ್ಯ ತ್ರಿವಿಕ್ರಮಂ ।
ತತೋ ದ್ವಿಜಾಗ್ರ್ಯಾನ್ಸಂಭೋಜ್ಯ ದತ್ವಾ ತೇಭ್ಯಶ್ಚ ದಕ್ಷಿಣಾಂ ॥ ೧೩ ॥

ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ವ್ರಜೇನ್ನರಃ ।
ಜ್ಯೇಷ್ಠಸ್ಯ ಶುಕ್ಲೈಕಾದಶ್ಯಾಂ ನಿರ್ಜಲಾಂ ಸಮುಪೋಷ್ಯ ತು ॥ ೧೪ ॥

---

೧೦. ಈರೀತಿ ವರೂಥಿನೀವ್ರತವನ್ನು ಮಾಡಿ ನಿಯಮನಿರತನಾದ ಮನುಷ್ಯನು ಸಕಲಪಾಪಗಳನ್ನೂ ಕಳೆದುಕೊಂಡು, ವೈಷ್ಣವಸ್ಥಾನವನ್ನು ಹೊಂದುವನು.

೧೧-೧೬. ವೈಶಾಖ ಶುಕ್ಲಪಕ್ಷದ ಮೋಹಿನೀ ಎಂಬ ಏಕಾದಶಿಯ ದಿನದಲ್ಲಿ ಉಪವಾಸಮಾಡಿ, ಮಾರನೆಯದಿನ ಸ್ನಾನಮಾಡಿ, ಪುರುಷೋತ್ತಮನನ್ನು ಗಂಧಾದಿಗಳಿಂದ ಪೂಜೆಮಾಡಿ, ಬ್ರಾಹ್ಮಣಭೋಜನಮಾಡಿಸಿದವನು ಸಕಲ ಪಾಪಗಳ ದೆಸೆಯಿಂದಲೂ ಮುಕ್ತನಾಗುವನು, ಸಂದೇಹವಿಲ್ಲ.

ಜ್ಯೇಷ್ಠ ಕೃಷ್ಣಪಕ್ಷದ ಪರೈಕಾದಶಿಯಲ್ಲಿ ಉಪವಾಸಮಾಡಿ, ದ್ವಾದಶಿಯ ದಿನದಲ್ಲಿ ನಿತ್ಯಕರ್ಮವನ್ನು ಮಾಡಿಕೊಂಡು, ತ್ರಿವಿಕ್ರಮನನ್ನು ಪೂಜಿಸಿ, ಶ್ರೇಷ್ಠ ಬ್ರಾಹ್ಮಣರನ್ನು ಭೋಜನಮಾಡಿಸಿ, ಅವರಿಗೆ ದಕ್ಷಿಣೆಯನ್ನು ಕೊಟ್ಟಮನುಷ್ಯನು ಸಕಲಪಾಪಗಳನ್ನೂ ಹೋಗಲಾಡಿಸಿಕೊಂಡು ವಿಷ್ಣುಲೋಕಕ್ಕೆ ಹೋಗುವನು.

ಜ್ಯೇಷ್ಠ ಶುಕ್ಲಪಕ್ಷದ ನಿರ್ಜಲೈಕಾದಶಿಯ ದಿನದಲ್ಲಿ ಸೂರ್ಯೋದಯದಿಂದ

ಉದಯಾದುದಯಂ ಯಾವದ್ಭಾಸ್ಕರಸ್ಯ ದ್ವಿಜೋತ್ತಮ ।
ಪ್ರಭಾತೇ ಕೃತನಿತ್ಯಸ್ತು ದ್ವಾದಶ್ಯಾಮುಪಚಾರಕೈಃ ॥ ೧೫ ॥

ಹೃಷೀಕೇಶಂ ಸಮಭ್ಯರ್ಚ್ಯ ವಿಪ್ರಾನ್ಸಂಭೋಜ್ಯ ಭಕ್ತಿತಃ ।
ಚತುರ್ವಿಂಶೈಕಾದಶೀನಾಂ ಫಲಂ ಯತ್ತತ್ಸಮಾಪ್ನುಯಾತ್ ॥ ೧೬ ॥

ಆಷಾಢಕೃಷ್ಣೈಕಾದಶ್ಯಾಂ ಯೋಗಿನೀಂ ಸಮುಪೋಷ್ಯ ವೈ ।
ನಾರಾಯಣಂ ಸಮಭ್ಯರ್ಚ್ಯ ದ್ವಾದಶ್ಯಾಂ ಕೃತನಿತ್ಯಕಃ ॥ ೧೭ ॥

ತತಃ ಸಂಭೋಜ್ಯ ವಿಪ್ರಾಗ್ರ್ಯಾನ್ದತ್ವಾ ತೇಭ್ಯಶ್ಚ ದಕ್ಷಿಣಾಂ ।
ಸರ್ವದಾನಫಲಂ ಪ್ರಾಪ್ಯ ಮೋದತೇ ವಿಷ್ಣುಮಂದಿರೇ ॥ ೧೮ ॥

ಆಷಾಢಶುಕ್ಲೈಕಾದಶ್ಯಾಂ ಯದ್ವಿಧಾನಂ ಶೃಣುಷ್ವ ತತ್ ।
ಉಪೋಷ್ಯ ತಸ್ಮಿನ್ ದಿವಸೇ ವಿಧಿವನ್ಮಂಡಪೇ ಶುಭೇ ॥ ೧೯ ॥

---

ಪರದಿನಸೂರ್ಯೋದಯವಾಗುವವರೆಗೂ ಉಪವಾಸದಿಂದಿದ್ದು ದ್ವಾದಶಿಯದಿನ ಬೆಳಗಾದಮೇಲೆ ನಿತ್ಯಕರ್ಮಗಳನ್ನು ಮಾಡಿಕೊಂಡು ಷೋಡಶೋಪಚಾರಗಳಿಂದ ಹೃಷೀಕೇಶನನ್ನು ಪೂಜಿಸಿ ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಿದವನು ಇಪ್ಪತ್ತುನಾಲ್ಕು ಏಕಾದಶಿಗಳ ಫಲವನ್ನು ಹೊಂದುವನು.

೧೭-೧೮. ಆಷಾಢ ಕೃಷ್ಣಪಕ್ಷದ ಯೋಗಿನೀ ಎಂಬ ಏಕಾದಶೀದಿನದಲ್ಲಿ ಉಪವಾಸಮಾಡಿ ನಾರಾಯಣನನ್ನು ಪೂಜಿಸಿ ದ್ವಾದಶಿಯದಿನ ನಿತ್ಯಕರ್ಮ ಮಾಡಿಕೊಂಡು ಶ್ರೇಷ್ಠಬ್ರಾಹ್ಮಣರಿಗೆ ಭೋಜನಮಾಡಿಸಿ, ಅವರಿಗೆ ದಕ್ಷಿಣೆ ಕೊಡುವ ಮನುಷ್ಯನು ಸಕಲದಾನಫಲಗಳನ್ನೂ ಹೊಂದಿ ವಿಷ್ಣುಮಂದಿರದಲ್ಲಿ ಸುಖಿಯಾಗುವನು.

೧೯-೨೨. ಆಷಾಢ ಶುಕ್ಲಪಕ್ಷದ ಏಕಾದಶೀವ್ರತವಿಧಾನವನ್ನು ಹೇಳುವೆನು ಕೇಳು ; ಆದಿನದಲ್ಲಿ ಉಪವಾಸಮಾಡಿ ವಿಧಿವತ್ತಾಗಿ ಶುಭಮಂಟಪವನ್ನು

ಸ್ಥಾಪಯೇತ್ಪ್ರತಿಮಾಂ ವಿಷ್ಣೋಃ ಶಂಖಚಕ್ರಗದಾಂಬುಜೈಃ ।
ಲಸಚ್ಚತುರ್ಭುಜಾಮುಗ್ರ್ಯಾಂ ಕಾಂಚನೀಂ ವಾಥ ರಾಜತೀಂ ॥ ೨೦ ॥

ಪೀತಾಂಬರಧರಾಂ ಶುಭ್ರೇ ಪರ್ಯಂಕೇ ಸ್ವಾಸ್ತೃತೇ ದ್ವಿಜ ।
ತತಃ ಪಂಚಾಮೃತೈಃ ಸ್ನಾಪ್ಯ ಮಂತ್ರೈಃ ಶುದ್ಧಜಲೇನ ಚ ॥ ೨೧ ॥

ಪೌರುಷೇಣೈವ ಸೂಕ್ತೇನ ಹ್ಯುಪಚಾರಾನ್ಪ್ರಕಲ್ಪಯೇತ್ ।
ನೀರಾಜನಾಂತಾನ್ಪಾದ್ಯಾದೀಂಸ್ತತಃ ಸಂಪ್ರಾರ್ಥಯೇದ್ಧರಿಂ ॥ ೨೨ ॥

ಸುಪ್ತೇ ತ್ವಯಿ ಜಗನ್ನಾಥ ಜಗತ್ಸುಪ್ತಂ ಭವೇದಿದಂ ।
ವಿಬುದ್ಧೇ ತ್ವಯಿ ಬುದ್ಧಂ ಚ ಜಗತ್ಸರ್ವಂ ಚರಾಚರಂ ॥ ೨೩ ॥

ಇತಿ ಸಂಪ್ರಾರ್ಥ್ಯ ದೇವಾಗ್ರೇ ಚಾತುರ್ಮಾಸ್ಯ ಪ್ರಚೋದಿತಾನ್ ।
ನಿಯಮಾಂಸ್ತು ಯಥಾಶಕ್ತಿ ಗೃಹ್ಣೀಯಾದ್ಭಕ್ತಿಮಾನ್ನರಃ ॥ ೨೪ ॥

---

ರಚಿಸಿ ಅದರಲ್ಲಿ ಶುಭ್ರವಾದ ಮಂಚವನ್ನಿಟ್ಟು ಹಾಸಿಗೆಯನ್ನು ಹಾಸಿ ಅದರ ಮೇಲೆ ಶಂಖ ಚಕ್ರ ಗದಾಪದ್ಮಗಳಿಂದ ವಿರಾಜಿಸುತ್ತಿರುವ ಚತುರ್ಭುಜಗಳುಳ್ಳ, ಬಂಗಾರ ಅಥವಾ ಬೆಳ್ಳಿಯಿಂದ ಮಾಡಿದ, ಶ್ರೇಷ್ಠವಾದ, ಪೀತಾಂಬರವನ್ನು ಧರಿಸಿರುವ, ವಿಷ್ಣುಪ್ರತಿಮೆಯನ್ನು ಸ್ಥಾಪಿಸಬೇಕು.

ತರುವಾಯ ಅದಕ್ಕೆ ಮಂತ್ರಗಳಿಂದ ಪಂಚಾಮೃತಾಭಿಷೇಕಮಾಡಿ, ಪುರುಷಸೂಕ್ತದಿಂದ ಶುದ್ಧೋದಕ ಸ್ನಾನಮಾಡಿಸಿ, ಪಾದ್ಯಾದಿನಿರಾಜನಾಂತವಾದ ಉಪಚಾರಗಳನ್ನರ್ಪಿಸಿ, ಹರಿಯನ್ನು ಪ್ರಾರ್ಥಿಸಬೇಕು.

೨೩-೨೪. 'ಜಗನ್ನಾಥನೇ! ನೀನು ಮಲಗಿದರೆ ಜಗತ್ತೂ ಮಲಗುವುದು, ನೀನು ಎದ್ದರೆ ಚರಾಚರಾತ್ಮಕವಾದ ಈ ಜಗತ್ತೆಲ್ಲಾ ಏಳುವುದು' ಎಂಬುದಾಗಿ ಪ್ರಾರ್ಥಿಸಿ ದೇವರಮುಂದೆ ಚಾತುರ್ಮಾಸ್ಯವಿಹಿತನಿಯಮಗಳನ್ನು ನನ್ನ ಶಕ್ತ್ಯನುಸಾರವಾಗಿ ನಡೆಸುವೆನೆಂದು ಭಕ್ತಿಯಿಂದ ಸಂಕಲ್ಪಿಸಬೇಕು.

ತತಃ ಪ್ರಭಾತೇ ದ್ವಾದಶ್ಯಾಂ ಸಮರ್ಚ್ಯೇಚ್ಛೇಷಶಾಯಿನಂ |
ಉಪಚಾರೈಃ ಷೋಡಶಭಿಸ್ತತಃ ಸಂಭೋಜ್ಯ ಬಾಡಬಾನ್ || ೨೫ ||

ಪ್ರತೋಷ್ಯ ದಕ್ಷಿಣಾಭಿಶ್ಚ ಸ್ವಯಂ ಭುಂಜೀತ ವಾಗ್ಯತಃ |
ತತಃ ಪ್ರಭೃತಿ ವಿಪ್ರೇಂದ್ರ ಗಂಧಾದ್ಯೈಃ ಪ್ರತ್ಯಹಂ ಯಜೇತ್ || ೨೬ ||

ಕೃತ್ವೈವಂ ವಿಧಿನಾ ವಿಪ್ರ ದೇವಸ್ಯ ಶಯನೀವ್ರತಂ |
ಭುಕ್ತಿಮುಕ್ತಿಯುತೋ ಮರ್ತ್ಯೋ ಭವೇದ್ವಿಷ್ಣೋಃ ಪ್ರಸಾದತಃ || ೨೭ ||

ಶ್ರಾವಣೇ ಕೃಷ್ಣಪಕ್ಷೇ ತು ಏಕಾದಶ್ಯಾಂ ದ್ವಿಜೋತ್ತಮ |
ಕಾಮಿಕಾಂ ಸಮುಪೋಷ್ಯೈವ ನಿಯಮೇನ ನರೋತ್ತಮಃ || ೨೮ ||

ದ್ವಾದಶ್ಯಾಂ ಕೃತನಿತ್ಯಸ್ತು ಶ್ರೀಧರಂ ಪೂಜಯೇದ್ಧರಿಂ |
ಉಪಚಾರೈಃ ಷೋಡಶಭಿಸ್ತತಃ ಸಂಭೋಜ್ಯ ವೈ ದ್ವಿಜಾನ್ || ೨೯ ||

---

೨೫-೨೭. ಬಳಿಕ ಬೆಳಗಾದಮೇಲೆ ದ್ವಾದಶಿಯ ದಿನದಲ್ಲಿ ಶೇಷಶಾಯಿಯಾದ ವಿಷ್ಣುವನ್ನು ಷೋಡಶೋಪಚಾರಗಳಿಂದ ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು ಅವರನ್ನು ಸಂತೋಷಪಡಿಸಿ ನಂತರ ನಿಯಮಯುಕ್ತನಾಗಿ ತಾನು ಭೋಜನಮಾಡಬೇಕು

ಅವತ್ತಿನಿಂದ ಪ್ರತಿದಿನವೂ ಗಂಧಾದಿಗಳಿಂದ ದೇವರನ್ನು ಪೂಜಿಸಬೇಕು. ಈರೀತಿ ದೇವರ ಶಯನವ್ರತವನ್ನು ವಿಧಿವತ್ತಾಗಿ ಆಚರಿಸಿದ ಮನುಷ್ಯನು ವಿಷ್ಣುದೇವನ ಅನುಗ್ರಹದಿಂದ ಭೋಗ ಮೋಕ್ಷಗಳನ್ನು ಪಡೆಯುವನು.

೨೮-೩೩. ದ್ವಿಜೋತ್ತಮನೇ ! ಶ್ರಾವಣ ಕೃಷ್ಣಪಕ್ಷದ, ಕಾಮಿಕಾನಾಮಕವಾದ ಏಕಾದಶಿಯ ದಿನದಲ್ಲಿ ನಿಯಮದಿಂದ ಉಪವಾಸಮಾಡಿ ನರೋತ್ತಮನು ದ್ವಾದಶಿಯದಿನದಲ್ಲಿ ನಿತ್ಯಕರ್ಮಗಳನ್ನು ಮಾಡಿಕೊಂಡು ಶ್ರೀಧರನಾಮಕ ಹರಿಯನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು.

ದತ್ವಾ ಚ ದಕ್ಷಿಣಾಂ ತೇಭ್ಯೋ ವಿಸೃಜ್ಯಾಶ್ನೀತ ಬಾಂಧವೈಃ ।
ಏವಂ ಯಃ ಕುರುತೇ ವಿಪ್ರ ಕಾಮಿಕಾವ್ರತಮುತ್ತಮಂ ॥ ೩೦ ॥

ಸ ಸರ್ವಕಾಮಾಂಲ್ಲಬ್ಧ್ವೇಹ ಯಾತಿ ವಿಷ್ಣೋಃ ಪರಂ ಪದಂ ।
ಏಕಾದಶ್ಯಾಂ ನಭಃಶುಕ್ಲೇ ಪವಿತ್ರಾಂ ಸಮುಪೋಷ್ಯ ವೈ ॥ ೩೧ ॥

ದ್ವಾದಶ್ಯಾಂ ನಿಯತೋ ಭೂತ್ವಾ ಪೂಜಯೇಚ್ಚ ಜನಾರ್ದನಂ ।
ಉಪಚಾರೈಃ ಷೋಡಶಭಿಸ್ತತಃ ಸಂಭೋಜ್ಯ ಬಾಡಬಾನ್ ॥ ೩೨ ॥

ದತ್ವಾ ಚ ದಕ್ಷಿಣಾಂ ತೇಭ್ಯಃ ಪುತ್ರಂ ಪ್ರಾಪ್ಯೇಹ ಸದ್ಗುಣಂ ।
ಯಾತಿ ವಿಷ್ಣೋಃ ಪದಂ ಸಾಕ್ಷಾತ್ಸರ್ವದೇವನಮಸ್ಕೃತಃ ॥ ೩೩ ॥

ನಭಸ್ಯಕೃಷ್ಣೈಕಾದಶ್ಯಾಮಜಾಖ್ಯಂ ಸಮುಪೋಷ್ಯ ವೈ ।
ಅರ್ಚೇದುಪೇಂದ್ರಂ ದ್ವಾದಶ್ಯಾಮುಪಚಾರೈಃ ಪೃಥಗ್ವಿಧೈಃ ॥ ೩೪ ॥

---

ಅನಂತರ ಬ್ರಾಹ್ಮಣರಿಗೆ ಭೋಜನಮಾಡಿಸಿ ಅವರಿಗೆ ದಕ್ಷಿಣೆಕೊಟ್ಟು ವಿಸರ್ಜನೆಮಾಡಿ ಬಂಧುಗಳಿಂದ ಸಹಿತನಾಗಿ ತಾನು ಭೋಜನಮಾಡಬೇಕು. ಈರೀತಿ ಉತ್ತಮ ಕಾಮಿಕಾವ್ರತವನ್ನಾಚರಿಸುವವನು ಇಲ್ಲಿ ಸಕಲಾಭೀಷ್ಟಗಳನ್ನೂ ಪಡೆದು ವಿಷ್ಣುವಿನ ಪರಮಪದಕ್ಕೆ ಹೋಗುವನು.

ಶ್ರಾವಣ ಶುಕ್ಲಪಕ್ಷದ ಪವಿತ್ರಾನಾಮಕವಾದ ಏಕಾದಶಿಯ ದಿನದಲ್ಲಿ ಉಪವಾಸಮಾಡಿ ದ್ವಾದಶಿಯಲ್ಲಿ ನಿಯಮಯುಕ್ತನಾಗಿ ಜನಾರ್ದನನನ್ನು ಷೋಡಶೋಪಚಾರಗಳಿಂದ ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆ ಕೊಟ್ಟು ವ್ರತವನ್ನು ಪೂರ್ಣಗೊಳಿಸುವವನು ಇಲ್ಲಿ ಸದ್ಗುಣಶಾಲಿಯಾದ ಪುತ್ರನನ್ನು ಪಡೆದು ಸಕಲ ದೇವತೆಗಳಿಂದಲೂ ಸತ್ಕರಿಸಲ್ಪಟ್ಟು ಸಾಕ್ಷಾದ್ವಿಷ್ಣುಸ್ಥಾನವನ್ನು ಹೊಂದುವನು.

೩೪-೪೩. ಭಾದ್ರಪದ ಕೃಷ್ಣೈಕಾದಶಿಯ ದಿನವು ಅಜೈಕಾದಶಿಯೆಂದು ಉಕ್ತವಾಗಿದೆ. ಆದಿನ ಉಪವಾಸಮಾಡಿ ದ್ವಾದಶಿಯದಿನದಲ್ಲಿ ನಾನಾವಿಧೋಪ

ವಿಪ್ರಾನ್ಸಂಭೋಜ್ಯ ಮಿಷ್ಟಾನ್ನೈರ್ವಿಸೃಜೇತ್ಪ್ರಾಪ್ತದಕ್ಷಿಣಾ |
ಏವಂ ಕೃತವ್ರತೋ ವಿಪ್ರ ಭಕ್ತ್ಯಾ ಜಾಯಾಸಮಾಹಿತಃ || ೩೫ ||

ಭುಕ್ತ್ವೇಹ ಭೋಗಾನಖಿಲಾನ್ಯಾತ್ಯಂತೇ ವೈಷ್ಣವಂ ಕ್ಷಯಂ |
ನಭಸ್ಯಶುಕ್ಲೈಕಾದಶ್ಯಾಂ ಪದ್ಮಾಖ್ಯಂ ಸಮುಪೋಷ್ಯ ವೈ || ೩೬ ||

ಕೃತ್ವಾ ನಿತ್ಯಾರ್ಚನಂ ತತ್ರ ಕಟದಾನಮಥಾಚರೇತ್ |
ಪೂರ್ವಂ ಶಯ್ಯಾರ್ಪಿತಾಯಾಸ್ತು ಪ್ರತಿಮಾಯಾ ದ್ವಿಜೋತ್ತಮ || ೩೭ ||

ಸಮುತ್ಸವವಿಧಾನೇನ ನೀತ್ವಾ ತಾಂ ಸಲಿಲಾಶಯೇ |
ಕೃತಸುಸ್ಪರ್ಶನಾಂ ತತ್ರ ಪ್ರಸಂಪೂಜ್ಯ ವಿಧಾನತಃ || ೩೮ ||

ಆನೀಯ ಮಂಡಪೇ ತಸ್ಮಿನ್ ವಾಮಪಾರ್ಶ್ವೇನ ಶಾಯಯೇತ್ |
ತತಃ ಪ್ರಭಾತೇ ದ್ವಾದಶ್ಯಾಂ ಗಂಧಾದ್ಯೈರರ್ಚ್ಯ ವಾಮನಂ || ೩೯ ||

---

ಚಾರಗಳಿಂದ ಉಪೇಂದ್ರನನ್ನು ಪೂಜಿಸಿ ಬ್ರಾಹ್ಮಣರಿಗೆ ಮೃಷ್ಟಾನ್ನಭೋಜನ ಮಾಡಿಸಿ ದಕ್ಷಿಣೆಕೊಟ್ಟು ವಿಸರ್ಜನೆಮಾಡಬೇಕು.

ಈರೀತಿ ಭಕ್ತಿಯಿಂದ ಅಜಾವ್ರತವನ್ನಾಚರಿಸಿ ಮನುಷ್ಯನು ಚಿತ್ತ ಸಮಾಧಾನಹೊಂದಿ ಇಲ್ಲಿ ಸಮಸ್ತಭೋಗಗಳನ್ನೂ ಅನುಭವಿಸಿ ಕೊನೆಯಲ್ಲಿ ವಿಷ್ಣುಲೋಕವನ್ನು ಹೊಂದುವನು.

ಭಾದ್ರಪದ ಶುಕ್ಲಪಕ್ಷದ ಪದ್ಮಾ ಎಂಬ ಏಕಾದಶಿಯಲ್ಲಿ ಉಪವಾಸಮಾಡಿ ನಿತ್ಯಾರ್ಚನೆಯನ್ನೂ ಮಾಡಿ ಚಾಪೆಯನ್ನು ದಾನಮಾಡಬೇಕು. ಪೂರ್ವದಲ್ಲಿ ಹಾಸಿಗೆಯಮೇಲೆ ಮಲಗಿಸಿದ್ದ ಪ್ರತಿಮೆಯನ್ನು ಉತ್ಸವದಿಂದ ತೆಗೆದುಕೊಂಡು ಜಲಾಶಯಕ್ಕೆ ಹೋಗಿ ಅಲ್ಲಿ ಸ್ನಾನಮಾಡಿಸಿ ವಿಧಾನೋಕ್ತಪ್ರಕಾರ ಪೂಜೆಮಾಡಿ ಪುನಃ ಆ ಮಂಟಪಕ್ಕೆ ಕರೆತಂದು ಎಡಮಗ್ಗುಲಲ್ಲಿ ಮಲಗಿಸಬೇಕು.

ತರುವಾಯ ಬೆಳಗಾದಮೇಲೆ ದ್ವಾದಶಿಯದಿನ ಗಂಧಾದಿಗಳಿಂದ ವಾಮನನನ್ನು ಪೂಜಿಸಿ, ಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು ವಿಸರ್ಜಿಸಬೇಕು.

ಸಂಭೋಜ್ಯ ಬಾಡವಾನ್ದತ್ವಾ ದಕ್ಷಿಣಾಂ ಚ ವಿಸರ್ಜಯೇತ್ |
ಏವಂ ಯಃ ಕುರುತೇ ವಿಪ್ರ ಪದ್ಮಾವ್ರತಮನುತ್ತಮಂ || ೪೦ ||

ಭುಕ್ತಿಂ ಪ್ರಾಪ್ಯೇಹ ಮುಕ್ತಿಂ ತು ಲಭತೇಂತೇ ಪ್ರಪಂಚತಃ |
ಇಷಸ್ಯ ಕೃಷ್ಣೈಕಾದಶ್ಯಾಮಿಂದಿರಾಂ ಸಮುಪೋಷ್ಯ ವೈ || ೪೧ ||

ಶಾಲಗ್ರಾಮಶಿಲಾಗ್ರೇ ತು ಮಧ್ಯಾಹ್ನೇ ಶ್ರಾದ್ಧಮಾಚರೇತ್ |
ವಿಷ್ಣೋಃ ಪ್ರೀತಿಕರಂ ವಿಪ್ರ ತತಃ ಪ್ರಾತರ್ಹರೇರ್ದಿನೇ || ೪೨ ||

ಪದ್ಮನಾಭಂ ಸಮಭ್ಯರ್ಚ್ಯ ಭೂದೇವಾನ್ಭೋಜಯೇತ್ಸುಧೀಃ |
ವಿಸೃಜ್ಯ ದಕ್ಷಿಣಾಂ ದತ್ವಾ ತಾಂಸ್ತತೋಶ್ನೀತ ಚ ಸ್ವಯಂ || ೪೩ ||

ಏವಂ ಕೃತವ್ರತೋ ಮರ್ತ್ಯೋ ಭುಕ್ತ್ವಾ ಭೋಗಾನಿಹೇಪ್ಸಿತಾನ್ |
ಪಿತೄಣಾಂ ಕೋಟಿಮುದ್ಧೃತ್ಯ ಯಾತ್ಯಂತೇ ವೈಷ್ಣವಂ ಗೃಹಂ || ೪೪ ||

---

ಈರೀತಿಯಾಗಿ ಸರ್ವೋತ್ಕೃಷ್ಟವಾದ ಪದ್ಮಾವ್ರತವನ್ನಾಚರಿಸುವವನು ಇಲ್ಲಿ ಭೋಗಗಳನ್ನನುಭವಿಸಿ ಕೊನೆಯಲ್ಲಿ ಸಂಸಾರದಿಂದ ಮುಕ್ತನಾಗುವನು.

ಆಶ್ವಯುಜಕೃಷ್ಣಪಕ್ಷದ ಇಂದಿರಾ ಎಂಬ ಏಕಾದಶಿಯದಿನದಲ್ಲಿ ಉಪವಾಸ ಮಾಡಿ, ಮಧ್ಯಾಹ್ನಕಾಲದಲ್ಲಿ ಸಾಲಿಗ್ರಾಮಸನ್ನಿಧಿಯಲ್ಲಿ ವಿಷ್ಣುಪ್ರೀತಿಕರವಾದ ಶ್ರಾದ್ಧವನ್ನಾಚರಿಸಬೇಕು.

ಅನಂತರ ದ್ವಾದಶಿಯದಿನ ಪ್ರಾತಃಕಾಲದಲ್ಲಿ ಪದ್ಮನಾಭನನ್ನು ಪೂಜಿಸಿ ಬ್ರಾಹ್ಮಣಭೋಜನಮಾಡಿಸಿ ಅವರಿಗೆ ದಕ್ಷಿಣೆಕೊಟ್ಟು ವಿಸರ್ಜನೆಮಾಡಿ ಬಳಿಕ ತಾನು ಊಟಮಾಡಬೇಕು.

೪೪. ಈರೀತಿಯಾಗಿ ವ್ರತವನ್ನಾಚರಿಸಿದ ಮನುಷ್ಯನು ಇಲ್ಲಿ ಅಪೇಕ್ಷಿಸಿದ ಭೋಗಗಳನ್ನೆಲ್ಲಾ ಅನುಭವಿಸಿ ಕೋಟಿಪಿತೃಗಳನ್ನು ಉದ್ಧಾರಮಾಡಿ ಕೊನೆಯಲ್ಲಿ ವಿಷ್ಣ್ವಾಲಯ ಎಂದರೆ ವೈಕುಂಠಕ್ಕೆ ಹೋಗಿ ಸುಖಪಡುವನು.

ಏಕಾದಶ್ಯಾಮಿಷೇ ಶುಕ್ಲೇ ವಿಪ್ರ ಪಾಶಾಂಕುಶಾಹ್ವಯಾಂ ।
ಉಪೋಷ್ಯ ವಿಧಿವದ್ವಿಷ್ಣೋರ್ದಿನೇ ವಿಷ್ಣುಂ ಸಮರ್ಚಯೇತ್ ॥ ೪೫ ॥

ತತಃ ಸಂಭೋಜ್ಯ ವಿಪ್ರಾಗ್ರ್ಯಾನ್ದತ್ವಾ ತೇಭ್ಯಶ್ಚ ದಕ್ಷಿಣಾಂ ।
ಭಕ್ತ್ಯಾ ಪ್ರಣಮ್ಯ ವಿಸೃಜೇದಶ್ನೀಯಾಚ್ಚ ಸ್ವಯಂ ತತಃ ॥ ೪೬ ॥

ಏವಂ ಯಃ ಕುರುತೇ ಭಕ್ತ್ಯಾ ನರಃ ಪಾಶಾಂಕುಶಾವ್ರತಂ ।
ಸ ಭುಕ್ತ್ವೇಹ ನರಾನ್ಭೋಗಾನ್ಯಾತಿ ವಿಷ್ಣೋಃ ಸಲೋಕತಾಂ ॥ ೪೭ ॥

ಕಾರ್ತಿಕೇ ಕೃಷ್ಣಪಕ್ಷೇ ತು ಏಕಾದಶ್ಯಾಂ ದ್ವಿಜೋತ್ತಮ ।
ರಮಾಮುಪೋಷ್ಯ ವಿಧಿವದ್ದ್ವಾದಶ್ಯಾಂ ಪ್ರಾತರರ್ಚಯೇತ್ ॥ ೪೮ ॥

೪೫. ಆಶ್ವಯುಜ ಶುಕ್ಲಪಕ್ಷದ ಪಾಶಾಂಕುಶನಾಮಕವಾದ ಏಕಾದಶಿಯ ದಿನದಲ್ಲಿ ವಿಧಿವತ್ತಾಗಿ ಉಪವಾಸಮಾಡಿ ದ್ವಾದಶಿಯ ದಿನದಲ್ಲಿ ವಿಷ್ಣುವನ್ನು ಪೂಜಿಸಬೇಕು.

೪೬. ಬಳಿಕ ಶ್ರೇಷ್ಠಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು ಭಕ್ತಿಯಿಂದ ನಮಸ್ಕರಿಸಿ ವಿಸರ್ಜನೆಮಾಡಿ ಅನಂತರ ತಾನು ಭೋಜನ ಮಾಡಬೇಕು.

೪೭. ಈರೀತಿ ಭಕ್ತಿಯಿಂದ ಪಾಶಾಂಕುಶಾವ್ರತವನ್ನಾಚರಿಸುವ ಮನುಷ್ಯನು ಇಲ್ಲಿ ಉತ್ತಮ ಭೋಗಗಳನ್ನನುಭವಿಸಿ ವಿಷ್ಣುಸಾಲೋಕ್ಯವನ್ನು ಹೊಂದುವನು.

೪೮-೪೯. ಕಾರ್ತಿಕಕೃಷ್ಣಪಕ್ಷದ ರಮಾ ಎಂಬ ಏಕಾದಶಿಯ ದಿನದಲ್ಲಿ ಉಪವಾಸಮಾಡಿ ದ್ವಾದಶಿಯ ದಿನದಲ್ಲಿ ಕೇಶಿಯೆಂಬ ದೈತ್ಯಸಂಹಾರಕನು, ದೇವದೇವೋತ್ತಮನು, ಸನಾತನನೂ ಆದ ಕೇಶವದೇವನನ್ನು ವಿಧಿವತ್ತಾಗಿ

**ಕೇಶವಂ ಕೇಶಿಹಂತಾರಂ ದೇವದೇವಂ ಸನಾತನಂ |**
**ಭೋಜಯೇಚ್ಚ ತತೋ ವಿಪ್ರಾನ್ವಿಸೃಜೇಲ್ಲಬ್ಧದಕ್ಷಿಣಾನ್ || ೪೯ ||**

**ಏವಂ ಕೃತವ್ರತೋ ವಿಪ್ರ ಭೋಗಾನ್ಭುಕ್ತ್ವೇಹ ವಾಂಛಿತಾನ್ |**
**ವ್ಯೋಮಯಾನೇನ ಸಾನ್ನಿಧ್ಯಂ ಲಭತೇ ಚ ರಮಾಪತೇಃ || ೫೦ ||**

**ಊರ್ಜಸ್ಯ ಶುಕ್ಲೈಕಾದಶ್ಯಾಂ ಸಮುಪೋಷ್ಯ ಪ್ರಬೋಧಿನೀಂ |**
**ಕೇಶವಂ ಬೋಧಯೇದ್ರಾತ್ರೌ ಸುಸಂಗೀತಾದಿಮಂಗಲೈಃ || ೫೧ ||**

**ಋಗ್ಯಜುಃಸಾಮಮಂತ್ರೈಶ್ಚ ವಾದ್ಯೈರ್ನಾನಾವಿಧೈರಪಿ |**
**ದ್ರಾಕ್ಷೇಕ್ಷುದಾಡಿಮೈಶ್ಚಾನ್ಯೈ ರಂಭಾಶೃಂಗಾಟಕಾದಿಭಿಃ || ೫೨ ||**

**ಸಮರ್ಪಣೈಸ್ತತೋ ರಾತ್ರ್ಯಾಂ ವ್ಯತೀತಾಯಾಂ ಪರೇಹನಿ |**
**ಸ್ನಾತ್ವಾ ನಿತ್ಯಕ್ರಿಯಾಂ ಕೃತ್ವಾ ಗದಾದಾಮೋದರಂ ಯಜೇತ್ || ೫೩ ||**

---

ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು ಅವರನ್ನು ವಿಸರ್ಜನೆ ಮಾಡಬೇಕು.

೫೦. ಈರೀತಿ ವ್ರತವನ್ನಾಚರಿಸುವವನು ಇಲ್ಲಿ ಇಷ್ಟಭೋಗಗಳನ್ನೆಲ್ಲಾ ಅನುಭವಿಸಿ ವಿಮಾನದಲ್ಲಿ ಕುಳಿತು ರಮಾಪತಿಯ ಸಾನಿಧ್ಯವನ್ನು ಹೊಂದುವನು.

೫೧-೫೪. ಕಾರ್ತಿಕ ಶುಕ್ಲಪಕ್ಷದ ಪ್ರಬೋಧಿನೀ ಎಂಬ ಏಕಾದಶಿಯ ದಿನದಲ್ಲಿ ಸಮೀಚೀನವಾದ ಸಂಗೀತ ಮುಂತಾದ ಮಂಗಳಧ್ವನಿಗಳು, ಋಕ್ಕು, ಯಜುರ್ವೇದ ಮತ್ತು ಸಾಮವೇದಗಳ ಮಂತ್ರಗಳು, ನಾನಾವಿಧ ವಾದ್ಯಗಳು ಇವುಗಳಿಂದಲೂ, ದ್ರಾಕ್ಷಿ, ಕಬ್ಬು, ದಾಳಿಂಬರೆ, ಇನ್ನೂ ಇತರವಾದ ಬಾಳೆ ಮುಂತಾದ ಫಲಗಳ ನೈವೇದ್ಯ ಮಾಡಿ ಕೇಶವನನ್ನು ರಾತ್ರಿ ಎಬ್ಬಿಸಬೇಕು.

ರಾತ್ರಿ ಕಳೆದಮೇಲೆ ಮಾರನೆಯದಿನ ಸ್ನಾನಮಾಡಿ ಸಂಧ್ಯಾವಂದನಾದಿ ನಿತ್ಯಕರ್ಮವನ್ನು ಮಾಡಿಕೊಂಡು ಗದಾದಾಮೋದರನನ್ನು ಷೋಡ

ಉಪಚಾರೈಃ ಷೋಡಶಭಿಃ ಪೌರುಷೇಣಾಪಿ ಸೂಕ್ತತಃ |
ಸಂಭೋಜ್ಯ ವಿಪ್ರಾನ್ವಿಸೃಜೇದ್ದಕ್ಷಿಣಾಭಿಃ ಪ್ರತೋಷಿತಾನ್ || ೫೪ ||

ತತಸ್ತಾಂ ಪ್ರತಿಮಾಂ ಹೈಮೀಂ ಸಧೇನುಂ ಗುರವೇಽರ್ಪಯೇತ್ |
ಏವಂ ಯಃ ಕುರುತೇ ಭಕ್ತ್ಯಾ ಬೋಧನೀವ್ರತಮಾದೃತಃ || ೫೫ ||

ಸ ಭುಕ್ತ್ವೇಹ ವರಾನ್ಭೋಗಾನ್ವೈಷ್ಣವಂ ಲಭತೇ ಪದಂ |
ಮಾರ್ಗಸ್ಯ ಕೃಷ್ಣೈಕಾದಶ್ಯಾಮುತ್ಪನ್ನಾಂ ಸಮುಪೋಷ್ಯ ವೈ || ೫೬ ||

ದ್ವಾದಶ್ಯಾಂ ಕೃಷ್ಣಮಭ್ಯರ್ಚೇದ್ಗಂಧಾದ್ಯೈರುಪಚಾರಕೈಃ |
ತತಃ ಸಂಭೋಜ್ಯ ವಿಪ್ರಾಗ್ರ್ಯಾನ್ದತ್ವಾ ತೇಭ್ಯಶ್ಚ ದಕ್ಷಿಣಾಂ || ೫೭ ||

ವಿಸೃಜ್ಯ ಪಶ್ಚಾದ್ಭುಂಜೀತ ಸ್ವಯಮಿಷ್ಟೈಃ ಸಮಾಹಿತಃ |
ಏವಂ ಯೋ ಭಕ್ತಿಭಾವೇನ ಉತ್ಪನ್ನಾವ್ರತಮಾಚರೇತ್ || ೫೮ ||

ಸ ವಿಮಾನಂ ಸಮಾರುಹ್ಯ ಯಾತ್ಯಂತೇ ವೈಷ್ಣವಂ ಪದಂ |
ಮಾರ್ಗಸ್ಯ ಶುಕ್ಲೈಕಾದಶ್ಯಾಂ ಮೋಕ್ಷಾಖ್ಯಾಂ ಸಮುಪೋಷ್ಯ ವೈ || ೫೯ ||

---

ಶೋಪಚಾರಗಳು ಮತ್ತು ಪುರುಷಸೂಕ್ತಗಳಿಂದ ಪೂಜಿಸಬೇಕು. ಬಳಿಕ ಬ್ರಾಹ್ಮಣಭೋಜನಮಾಡಿಸಿ, ಅವರನ್ನು ದಕ್ಷಿಣಾದಾನದಿಂದ ಸಂತೋಷಪಡಿಸಿ ವಿಸರ್ಜನೆಮಾಡಬೇಕು.'

೫೫–೬೬. ತರುವಾಯ ಆ ಬಂಗಾರದ ಪ್ರತಿಮೆಯನ್ನು ಗೋವಿನ ಸಹಿತವಾಗಿ ಗುರುಗಳಿಗೆ ಸಮರ್ಪಿಸಬೇಕು. ಈರೀತಿಯಾಗಿ ವಿಶ್ವಾಸಪೂರ್ವಕವಾಗಿ ಬೋಧಿನೀವ್ರತವನ್ನಾಚರಿಸುವವನು ಇಲ್ಲಿ ಒಳ್ಳೆಯ ಭೋಗಗಳನ್ನನುಭವಿಸಿ ವಿಷ್ಣುಸ್ಥಾನವನ್ನು ಹೊಂದುವನು.

ಮಾರ್ಗಶೀರ್ಷ ಕೃಷ್ಣಪಕ್ಷದ ಉತ್ಪನ್ನಾ ಎಂಬ ಏಕಾದಶಿಯ ದಿನದಲ್ಲಿ ಉಪವಾಸಮಾಡಿ ದ್ವಾದಶಿಯದಿನದಲ್ಲಿ ಗಂಗಾದಿ ಉಪಚಾರಗಳಿಂದ ಕೃಷ್ಣನನ್ನು ಪೂಜಿಸಿ ಶ್ರೇಷ್ಠಬ್ರಾಹ್ಮಣರಿಗೆ ಭೋಜನಮಾಡಿಸಿ ಅವರಿಗೆ ದಕ್ಷಿಣೆಕೊಟ್ಟು ವಿಸರ್ಜನೆಮಾಡಿ ತರುವಾಯ ತಾನು ಇಷ್ಟದಿಂದ ಸಹಿತನಾಗಿ ಸಮಾಧಾನ ಮನಸ್ಸಿನಿಂದ ಭೋಜನಮಾಡಬೇಕು.

ದ್ವಾದಶ್ಯಾಂ ಕೃಷ್ಣಮಭ್ಯರ್ಚೇದ್ಗಂಧಾದ್ಯೈರುಪಚಾರಕೈಃ ।
ತತಃ ಸಂಭೋಜ್ಯ ವಿಪ್ರಾಗ್ರ್ಯಾನ್ ದತ್ವಾ ತೇಭ್ಯಶ್ಚ ದಕ್ಷಿಣಾಂ ॥ ೬೦ ॥

ವಿಸೃಜ್ಯ ಪಶ್ಚಾದ್ಭುಂಜೀತ ಸ್ವಯಮಿಷ್ಟೈಃ ಸಮಾಹಿತಃ ।
ಏವಂ ಯೋ ಭಕ್ತಿಭಾವೇನ ಮೋಕ್ಷಾಖ್ಯಾವ್ರತಮಾಚರೇತ್ ॥ ೬೧ ॥

ಸ ವಿಮಾನಂ ಸಮಾರುಹ್ಯ ಯಾತ್ಯಂತೇ ವೈಷ್ಣವಂ ಪದಂ ।
ಮಾರ್ಗಸ್ಯ ಶುಕ್ಲೈಕಾದಶ್ಯಾಂ ಮೋಕ್ಷಾಖ್ಯಾಂ ಸಮುಪೋಷ್ಯ ವೈ ॥ ೬೨ ॥

ದ್ವಾದಶ್ಯಾಂ ಪ್ರಾತರಭ್ಯರ್ಚ್ಯ ಹ್ಯನಂತಂ ವಿಶ್ವರೂಪಕಂ ।
ಸರ್ವೈರೇವೋಪಚಾರೈಸ್ತು ವಿಪ್ರಾನ್ಸಂಭೋಜಯೇದ್ದ್ವಿಜಃ ॥ ೬೩ ॥

---

ಈರೀತಿಯಾಗಿ ಭಕ್ತಿಯಿಂದ ಉತ್ಪನ್ನಾವ್ರತವನ್ನು ಆಚರಿಸುವವನು ವಿಮಾನವನ್ನು ಹತ್ತಿ ವಿಷ್ಣುಲೋಕಕ್ಕೆ ಹೋಗುವನು.

ಮಾರ್ಗಶೀರ್ಷ ಶುಕ್ಲಪಕ್ಷದ ಮೋಕ್ಷಾ ಎಂಬ ಏಕಾದಶಿಯ ದಿನದಲ್ಲಿ ಉಪವಾಸಮಾಡಿ ದ್ವಾದಶಿಯದಿನದಲ್ಲಿ ಗಂಧ ಮುಂತಾದ ಉಪಚಾರಗಳಿಂದ ಕೃಷ್ಣನನ್ನು ಪೂಜಿಸಿ ತರುವಾಯ ಉತ್ತಮಬ್ರಾಹ್ಮಣರಿಗೆ ಭೋಜನಮಾಡಿಸಿ ಅವರಿಗೆ ದಕ್ಷಿಣೆಕೊಟ್ಟು ವಿಸರ್ಜನೆಮಾಡಿ ತಾನೂ ಇಷ್ಟರೊಡನೆ ಸಂತೋಷದಿಂದ ಭೋಜನಮಾಡಬೇಕು.

ಈರೀತಿಯಾಗಿ ಭಕ್ತಿಭಾವದಿಂದ ಮೋಕ್ಷೈಕಾದಶಿಯ ವ್ರತವನ್ನಾಚರಿಸುವವನು ವಿಮಾನಾರೂಢನಾಗಿ ಕೊನೆಯಲ್ಲಿ ವಿಷ್ಣುಲೋಕವನ್ನು ಸೇರಿ ಸುಖಪಡುವನು.

ಮಾರ್ಗಶೀರ್ಷ ಶುಕ್ಲಪಕ್ಷದ ಮೋಕ್ಷಾ ಎಂಬ ಏಕಾದಶಿಯ ದಿನದಲ್ಲಿ ಉಪವಾಸಮಾಡಿ ದ್ವಾದಶಿಯದಿನ ಬೆಳಗ್ಗೆ ವಿಶ್ವರೂಪಿಯಾದ ಅನಂತನನ್ನು ಸಕಲೋಪಚಾರಗಳಿಂದಲೂ ಪೂಜಿಸಿ ಬ್ರಾಹ್ಮಣಭೋಜನಮಾಡಿಸಿ ಅವರಿಗೆ ದಕ್ಷಿಣೆಕೊಟ್ಟು ವಿಸರ್ಜನೆಮಾಡಿ ತಾನೂ ಬಂಧುಗಳ ಸಹಿತವಾಗಿ ಭೋಜನಮಾಡಬೇಕು.

ವಿಸೃಜ್ಯ ದಕ್ಷಿಣಾಂ ದತ್ವಾ ಸ್ವಯಂ ಭುಂಜೀತ ಬಾಂಧವೈಃ |
ಏವಂ ಕೃತ್ವಾಚ್ಯುತಂ ವಿಪ್ರ ಭುಕ್ತ್ವಾ ಭೋಗಾನಿಹೇಪ್ಸಿತಾನ್ || ೬೪ ||

ದಶ ಪೂರ್ವಾನ್ದಶ ಪರಾನ್ಸಮುದ್ಧೃತ್ಯ ವ್ರಜೇದ್ಧರಿಂ |
ಪೌಷಸ್ಯ ಕೃಷ್ಣೈಕಾದಶ್ಯಾಂ ಸಫಲಾಂ ಸಮುಪೋಷ್ಯ ವೈ
ದ್ವಾದಶ್ಯಾಮಚ್ಯುತಂ ಪ್ರಾರ್ಥ್ಯ ಸರ್ವೈರೇವೋಪಚಾರಕೈಃ || ೬೫ ||

ಸಂಭೋಜ್ಯ ವಿಪ್ರಾನ್ಮಧುರೈರ್ವಿಸೃಜೇಲ್ಲಬ್ಧದಕ್ಷಿಣಾನ್ |
ಏವಂ ಕೃತ್ವಾ ವ್ರತಂ ವಿಪ್ರ ಸಫಲಾಯಾ ವಿಧಾನತಃ |
ಭುಕ್ತ್ವೇಹ ಭೋಗಾನಖಿಲಾನ್ಯಾತ್ಯಂತೇ ವೈಷ್ಣವಂ ಪದಂ || ೬೬ ||

ಪೌಷಸ್ಯ ಶುಕ್ಲೈಕಾದಶ್ಯಾಂ ಪುತ್ರದಾಂ ಸಮುಪೋಷ್ಯ ವೈ |
ದ್ವಾದಶ್ಯಾಂ ಚಕ್ರಿಣಂ ಪ್ರಾರ್ಚೇದರ್ಘ್ಯಾದ್ಯೈರುಪಚಾರಕೈಃ || ೬೭ ||

---

ಈರೀತಿ ಮೋಕ್ಷವ್ರತವನ್ನಾಚರಿಸಿದವನು ಇಲ್ಲಿ ಅಪೇಕ್ಷಿಸಿದ ಭೋಗಗಳನ್ನನುಭವಿಸಿ ತನಗೆ ಪೂರ್ವೋತ್ತರಗಳಲ್ಲಿನ ಹತ್ತುಮಂದಿ ಪಿತೃಗಳನ್ನುದ್ಧರಿಸಿ ಹರಿಯ ಸಾನ್ನಿಧ್ಯವನ್ನು ಹೊಂದುವನು.

ಪುಷ್ಯ ಕೃಷ್ಣಪಕ್ಷದ ಸಫಲಾ ಎಂಬ ಏಕಾದಶಿಯಲ್ಲಿ ಉಪವಾಸಮಾಡಿ ದ್ವಾದಶಿಯದಿನ ಸಕಲೋಪಚಾರಗಳಿಂದ ಅಚ್ಯುತನನ್ನು ಪೂಜಿಸಿ ಮಧುರ ಭಕ್ಷ್ಯಗಳನ್ನು ಮಾಡಿಸಿ ಬ್ರಾಹ್ಮಣಭೋಜನಮಾಡಿಸಿ ಅವರಿಗೆ ದಕ್ಷಿಣೆಕೊಟ್ಟು ವಿಸರ್ಜನೆಮಾಡಬೇಕು. ಈರೀತಿ ಸಫಲಾವ್ರತವನ್ನಾಚರಿಸಿದವನು ಇಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ ಕೊನೆಯಲ್ಲಿ ವಿಷ್ಣುಲೋಕಕ್ಕೆ ಹೋಗುವನು.

ಪುಷ್ಯ ಶುಕ್ಲಪಕ್ಷದ ಪುತ್ರದಾ ಎಂಬ ಏಕಾದಶಿಯ ದಿನದಲ್ಲಿ ಉಪವಾಸ ಮಾಡಿ ದ್ವಾದಶಿಯ ದಿನದಲ್ಲಿ ಅರ್ಘ್ಯಾದ್ಯುಪಚಾರಗಳಿಂದ ಚಕ್ರಪಾಣಿಯನ್ನು ಪೂಜಿಸಬೇಕು.

ತತಃ ಸಂಭೋಜ್ಯ ವಿಪ್ರಾಗ್ರ್ಯಾನ್ದತ್ವಾ ತೇಭ್ಯಸ್ತು ದಕ್ಷಿಣಾಂ ।
ವಿಸೃಜ್ಯ ಸ್ವಯಮಶ್ನೀಯಾಚ್ಛೇಷಾನ್ನಂ ಸ್ವೇಷ್ಟಬಾಂಧವೈಃ ॥ ೬೮ ॥

ಏವಂ ಕೃತವ್ರತೋ ವಿಪ್ರ ಭುಕ್ತ್ವಾ ಭೋಗಾನಿಹೇಪ್ಸಿತಾನ್ ।
ವಿಮಾನವರಮಾರುಹ್ಯ ಯಾತ್ಯಂತೇ ಹರಿಮಂದಿರಂ ॥ ೬೯ ॥

ಮಾಘಸ್ಯ ಕೃಷ್ಣೈಕಾದಶ್ಯಾಂ ಷಟ್ತಿಲಾಂ ಸಮುಪೋಷ್ಯ ವೈ ।
ಸ್ನಾತ್ವಾ ದತ್ವಾ ತರ್ಪಯಿತ್ವಾ ಹುತ್ವಾ ಭಕ್ತ್ಯಾ ಸಮರ್ಚ್ಯ ಚ ॥ ೭೦ ॥

ತಿಲೈರೇವ ದ್ವಿಜಶ್ರೇಷ್ಠ ದ್ವಾದಶ್ಯಾಂ ಪ್ರಾತರೇವ ಹಿ ।
ವೈಕುಂಠಂ ಸಮ್ಯಗಭ್ಯರ್ಚ್ಯ ಸರ್ವೈರೇವೋಪಚಾರಕೈಃ ॥ ೭೧ ॥

ದ್ವಿಜಾನ್ಸಂಭೋಜ್ಯ ವಿಸೃಜೇತ್ ದತ್ವಾ ತೇಭ್ಯಶ್ಚ ದಕ್ಷಿಣಾಂ ।
ಏವಂ ಕೃತ್ವಾ ವ್ರತಂ ವಿಪ್ರ ವಿಧಿನಾ ಸುಸಮಾಹಿತಃ ॥ ೭೨ ॥

---

೬೮. ತರುವಾಯ ಉತ್ತಮ ವಿಪ್ರರಿಗೆ ಭೋಜನಮಾಡಿಸಿ ಅವರಿಗೆ ದಕ್ಷಿಣೆಕೊಟ್ಟು ವಿಸರ್ಜನೆಮಾಡಿ ಉಳಿದ ಅನ್ನವನ್ನು ಇಷ್ಟಬಂಧುಗಳಸಹಿತವಾಗಿ ಯಜಮಾನನು ಭೋಜನಮಾಡಬೇಕು

೬೯. ಈರೀತಿಯಾಗಿ ವ್ರತವನ್ನು ಮಾಡಿದ ಮನುಷ್ಯನು ಇಲ್ಲಿ ಇಷ್ಟಪಟ್ಟ ಭೋಗಗಳನ್ನೆಲ್ಲಾ ಅನುಭವಿಸಿ ಕೊನೆಗೆ ಉತ್ತಮವಿಮಾನಾರೂಢನಾಗಿ ಹರಿಮಂದಿರಕ್ಕೆ ಹೋಗುವನು.

೭೦-೮೦. ಮಾಘ ಕೃಷ್ಣಪಕ್ಷದ ಷಟ್ತಿಲಾ ಎಂಬ ಏಕಾದಶಿಯ ದಿನದಲ್ಲಿ ಉಪವಾಸಮಾಡಿ, ಸ್ನಾನ, ದಾನ, ತರ್ಪಣ, ಹೋಮ, ಪೂಜೆಗಳನ್ನು ಭಕ್ತಿಪೂರ್ವಕವಾಗಿ ತಿಲಗಳಿಂದಮಾಡಿ, ದ್ವಾದಶಿಯ ಪ್ರಾತಃಕಾಲದಲ್ಲಿ ಸರ್ವೋಪಚಾರಗಳಿಂದ ವೈಕುಂಠನನ್ನರ್ಚಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು ವಿಸರ್ಜನೆಮಾಡಬೇಕು.

ಭುಕ್ತ್ವೇಹ ವಾಂಛಿತಾನ್ಭೋಗಾನಂತೇ ವಿಷ್ಣುಪದಂ ಲಭೇತ್ ।
ಮಾಘಸ್ಯ ಶುಕ್ಲೈಕಾದಶ್ಯಾಂ ಸಮುಪೋಷ್ಯ ಜಯಾಹ್ವಯಾಂ ॥ ೭೩ ॥

ಪ್ರಾತರ್ಹರಿದಿನೇಭ್ಯರ್ಚ್ಯ ಶ್ರೀಪತಿಂ ಪುರುಷಂ ದ್ವಿಜ ।
ಭೋಜಯಿತ್ವಾ ದಕ್ಷಿಣಾಂ ಚ ದತ್ವಾ ವಿಪ್ರಾನ್ ವಿಸೃಜ್ಯ ಚ ॥ ೭೪ ॥

ಸ್ವಯಂ ಭುಂಜೀತ ತಚ್ಛೇಷಂ ಪ್ರಯತೋ ನಿಜಬಾಂಧವೈಃ ।
ಯ ಏವಂ ಕುರುತೇ ವಿಪ್ರ ವ್ರತಂ ಕೇಶವತೋಷಣಂ ॥ ೭೫ ॥

ಸ ಭುಕ್ತ್ವೇಹ ವರಾನ್ಭೋಗಾನಂತೇ ವಿಷ್ಣೋಃ ಪದಂ ವ್ರಜೇತ್ ।
ತಪಸ್ಯ ಕೃಷ್ಣೈಕಾದಶ್ಯಾಂ ವಿಜಯಾಂ ಸಮುಪೋಷ್ಯ ವೈ ॥ ೭೬ ॥

ದ್ವಾದಶ್ಯಾಂ ಪ್ರಾತರಭ್ಯರ್ಚ್ಯ ಯೋಗೀಶಂ ಗಂಧಪೂರ್ವಕೈಃ ।
ತತಃ ಸಂಭೋಜ್ಯ ಭೂದೇವಾನ್ದಕ್ಷಿಣಾಭಿಃ ಪ್ರತೋಷ್ಯ ತಾನ್ ॥ ೭೭ ॥

ವಿಸೃಜ್ಯ ಬಾಂಧವೈಃ ಸಾರ್ಧಂ ಸ್ವಯಮಶ್ನೀತ ವಾಗ್ಯತಃ ।
ಏವಂ ಕೃತವ್ರತೋ ಮರ್ತ್ಯೋ ಭುಕ್ತ್ವಾ ಭೋಗಾನಿಹೇಪ್ಸಿತಾನ್ ॥ ೭೮ ॥

---

ಈರೀತಿ ವ್ರತವನ್ನಾಚರಿಸಿ ಸಮಾಧಾನಚಿತ್ತದಿಂದಿರುವವನು ಇಲ್ಲಿ ಇಷ್ಟ ಭೋಗಗಳನ್ನನುಭವಿಸಿ ಕೊನೆಯಲ್ಲಿ ವಿಷ್ಣುಸ್ಥಾನವನ್ನು ಹೊಂದುವನು.

ಮಾಘ ಶುಕ್ಲಪಕ್ಷದ ಜಯಾನಾಮಕವಾದ ಏಕಾದಶಿಯದಿನದಲ್ಲಿ ಉಪವಾಸಮಾಡಿ ದ್ವಾದಶಿಯದಿನ ಬೆಳಗ್ಗೆ ಪುರುಷನಾಮಕನಾದ ಶ್ರೀಪತಿಯನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು ವಿಸರ್ಜನೆಮಾಡಿ ಅದರ ಶೇಷವನ್ನು ತನ್ನ ಬಂಧುಗಳಸಹಿತವಾಗಿ ನಿಯಮದಿಂದ ಭೋಜನ ಮಾಡಬೇಕು.

ಕೇಶವಪ್ರೀತಿಕರವಾದ ಈ ವ್ರತವನ್ನು ಮಾಡಿದವನು ಇಲ್ಲಿ ಉತ್ತಮ ಭೋಗಗಳನ್ನನುಭವಿಸಿ ಕೊನೆಗೆ ವಿಷ್ಣುಸ್ಥಾನಕ್ಕೆ ಹೋಗಿ ಸುಖಪಡುವನು.

**ದೇಹಾಂತೇ ವೈಷ್ಣವಂ ಲೋಕಂ ಯಾತಿ ದೇವೈಃ ಸುಸತ್ಕೃತಃ |**
**ಫಾಲ್ಗುನಸ್ಯ ಸಿತೇ ಪಕ್ಷೇ ಏಕಾದಶ್ಯಾಂ ದ್ವಿಜೋತ್ತಮ || ೭೯ ||**

**ಉಪೋಷ್ಯಾಮಲಕೀಂ ಭಕ್ತ್ಯಾ ದ್ವಾದಶ್ಯಾಂ ಪ್ರಾತರರ್ಚಯೇತ್ |**
**ಪುಂಡರೀಕಾಕ್ಷಮಖಿಲೈರುಪಚಾರೈಸ್ತತೋ ದ್ವಿಜಾನ್ || ೮೦ ||**

**ಭೋಜಯಿತ್ವಾ ವರಾನ್ನೇನ ದದ್ಯಾತ್ತೇಭ್ಯಸ್ತು ದಕ್ಷಿಣಾಂ |**
**ಏವಂ ಕೃತ್ವಾ ವಿಧಾನೇನಾಮಲಕ್ಯಾಃ ಪೂಜನಾದಿಕಂ || ೮೧ ||**

---

ಫಾಲ್ಗುಣ ಕೃಷ್ಣಪಕ್ಷದ ವಿಜಯಾ ಎಂಬ ಏಕಾದಶಿಯದಿನದಲ್ಲಿ ಉಪವಾಸಮಾಡಿ ದ್ವಾದಶಿಯ ಪ್ರಾತಃಕಾಲದಲ್ಲಿ ಗಂಧಾದಿಗಳಿಂದ ಯೋಗೀಶನನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಿ ಅವರನ್ನು ದಕ್ಷಿಣೆಗಳಿಂದ ಸಂತೋಷಪಡಿಸಿ ವಿಸರ್ಜನೆಮಾಡಿ ತಾನು ಬಂಧುಗಳಸಹಿತ ನಿಯಮದಿಂದ ಊಟಮಾಡಬೇಕು.

ಈರೀತಿ ವ್ರತವನ್ನಾಚರಿಸಿದ ಮನುಷ್ಯನು ಇಲ್ಲಿ ಇಷ್ಟಪಟ್ಟ ಭೋಗಗಳನ್ನು ಭೋಗಿಸಿ ಮರಣಾನಂತರ ದೇವತೆಗಳಿಂದ ಸತ್ಕರಿಸಲ್ಪಟ್ಟು ವಿಷ್ಣುಲೋಕಕ್ಕೆ ಹೋಗುವನು.

ಫಾಲ್ಗುಣ ಶುಕ್ಲಪಕ್ಷದ ಆಮಲಕೀ ಎಂಬ ಏಕಾದಶಿಯಲ್ಲಿ ಉಪವಾಸಮಾಡಿ ದ್ವಾದಶಿಯ ಪ್ರಾತಃಕಾಲದಲ್ಲಿ ಸಮಸ್ತೋಪಚಾರಗಳಿಂದ ಪುಂಡರೀಕಾಕ್ಷನನ್ನು ಪೂಜಿಸಬೇಕು.

೮೧-೮೨. ಬಳಿಕ ಬ್ರಾಹ್ಮಣರಿಗೆ ಮೃಷ್ಟಾನ್ನಭೋಜನಮಾಡಿಸಿ ದಕ್ಷಿಣೆ ಕೊಡಬೇಕು. ಈರೀತಿ ವಿಧಾನೋಕ್ತಪ್ರಕಾರ ಪೂಜಾದಿಗಳನ್ನು ಮಾಡಿ ಆಮಲಕೀವ್ರತವನ್ನಾಚರಿಸಿದ ಮನುಷ್ಯನು ವಿಷ್ಣುವಿನ ಪರಮಪದಕ್ಕೆ ಹೋಗುವನು.

ಏವಂ ಕೃತವ್ರತೋ ಮರ್ತ್ಯೋ ವ್ರಜೇದ್ವಿಷ್ಣೋಃ ಪರಂ ಪದಂ |
ಚೈತ್ರಸ್ಯ ಕೃಷ್ಣೈಕಾದಶ್ಯಾಂ ಪಾಪಮೋಚನಿಕಂ ಭವೇತ್ || ೮೨ ||

ಇತ್ಥಂ ಕೃಷ್ಣೇ ತಥಾ ಶುಕ್ಲೇ ವ್ರತಂ ಚೈಕಾದಶೀಭವಂ |
ಮೋಕ್ಷದಂ ಕೀರ್ತಿದಂ ವಿಪ್ರ ನಾಸ್ತ್ಯಸ್ಮಿನ್ಸಂಶಯಃ ಕ್ವಚಿತ್ || ೮೩ ||

ಯತಸ್ತ್ರಿದಿನಸಂಸಾಧ್ಯಂ ಕೀರ್ತಿತಂ ಪಾಪನಾಶನಂ |
ಸರ್ವವ್ರತೋತ್ತಮಂ ವಿಪ್ರ ತತೋ ಜ್ಞೇಯಂ ಮಹಾಫಲಂ || ೮೪ ||

ತ್ಯಜೇಚ್ಚತ್ವಾರಿ ಭುಕ್ತಾನಿ ನಾರದೈತದ್ದಿನತ್ರಯೇ |
ಆದ್ಯಂತಯೋರೇಕಮೇಕಂ ಮಧ್ಯಮೇ ದ್ವಯಮೇವ ಹಿ || ೮೫ ||

---

ಚೈತ್ರ ಕೃಷ್ಣಪಕ್ಷದ ಏಕಾದಶಿಯಲ್ಲಿ ಉಪವಾಸವನ್ನಾಚರಿಸಿದರೆ ಪಾಪ ಪರಿಹಾರವಾಗುವುದು.

೮೩. ಈರೀತಿಯಾಗಿ ಕೃಷ್ಣ ಮತ್ತು ಶುಕ್ಲಪಕ್ಷಗಳಲ್ಲಿನ ಏಕಾದಶೀ ವ್ರತವು ಮೋಕ್ಷದಾಯಕವೆಂದು ಉಕ್ತವಾಗಿದೆ. ಈ ವಿಷಯದಲ್ಲಿ ಸಂಶಯ ಲೇಶವೂ ಇಲ್ಲ.

೮೪. ದಿನತ್ರಯಸಾಧ್ಯವಾದ ಈ ವ್ರತವು ಪಾಪನಾಶಕ ಮತ್ತು ಸಕಲ ವ್ರತೋತ್ತಮ ಎಂಬುದಾಗಿ ಉಕ್ತವಾಗಿರುವುದರಿಂದ ಇದು ಮಹಾಫಲದಾಯಕ ವೆಂದು ತಿಳಿಯಬೇಕು.

೮೫. ನಾರದನೇ ! ಈ ಮೂರು ದಿನಗಳಪೈಕಿ ದಶಮೀ ಮತ್ತು ದ್ವಾದಶೀ ದಿನಗಳಲ್ಲಿ ಏಕಭುಕ್ತವನ್ನಾಚರಿಸಿ ಮಧ್ಯದಿನವಾದ ಏಕಾದಶಿಯಲ್ಲಿ ಎರಡುಹೊತ್ತೂ ಊಟಮಾಡಬಾರದು. ಒಟ್ಟಿನಲ್ಲಿ ನಾಲ್ಕು ಊಟಗಳನ್ನು ಬಿಡಬೇಕು.

ಅಥ ತೇ ನಿಯಮಾನ್ವಚ್ಮಿ ವ್ರತೇ ಹ್ಯಸ್ಮಿನ್ದಿನತ್ರಯೇ ।
ಕಾಂಸ್ಯಂ ಮಾಂಸಂ ಮಸೂರಾನ್ನಂ ಚಣಕಾನ್ ಕೋದ್ರವಾಂಸ್ತಥಾ ॥೮೬॥

ಶಾಕಂ ಮಧು ಪರಾನ್ನಂ ಚ ಪುನರ್ಭೋಜನಮೈಥುನೇ ।
ದಶಮ್ಯಾಂ ದಶವಸ್ತೂನಿ ವರ್ಜಯೇದ್ವೈಷ್ಣವಃ ಸದಾ ॥ ೮೭ ॥

ದ್ಯೂತಕ್ರೀಡಾಂ ಚ ನಿದ್ರಾಂ ಚ ತಾಂಬೂಲಂ ದಂತಧಾವನಂ ।
ಪರಾಪವಾದಂ ಪೈಶುನ್ಯಂ ಸ್ತೇಯಂ ಹಿಂಸಾಂ ತಥಾ ರತಿಂ ॥ ೮೮ ॥

ಕೋಪಂ ಹ್ಯನೃತವಾಕ್ಯಂ ಚ ಏಕಾದಶ್ಯಾಂ ವಿವರ್ಜಯೇತ್ ।
ಕಾಂಸ್ಯಂ ಮಾಂಸಂ ಸುರಾಂ ಕ್ಷೌದ್ರಂ ತೈಲಂ ವಿಣ್ಮ್ಲೇಚ್ಛಭಾಷಣಂ ॥೮೯॥

ವ್ಯಾಯಾಮಂ ಚ ಪ್ರವಾಸಂ ಚ ಪುನರ್ಭೋಜನಮೈಥುನೇ ।
ಅಸ್ಪೃಶ್ಯಸ್ಪರ್ಶಮಾಶೂರಂ ದ್ವಾದಶ್ಯಾಂ ದ್ವಾದಶ ತ್ಯಜೇತ್ ॥ ೯೦ ॥

---

೮೬-೮೭. ನಾರದನೇ ! ಈಗ ಈ ಮೂರು ದಿನಗಳಲ್ಲಿ ಅನುಸರಿಸಬೇಕಾದ ನಿಯಮಗಳನ್ನು ನಿನಗೆ ಹೇಳುವೆನು ಕೇಳು :—

ವೈಷ್ಣವನು ದಶಮಿಯ ದಿನದಲ್ಲಿ ಯಾವಾಗಲೂ ಕಾಂಸ್ಯ, ಮಾಂಸ, ಮಸೂರಾನ್ನ, ಕಡಲೆ, ಹಾರಕ, ಶಾಕ, ಮಧು, ಪರಾನ್ನ, ಎರಡನೆಯಸಾರಿ ಭೋಜನಮಾಡುವುದು, ಮೈಥುನ ಈ ಹತ್ತನ್ನೂ ತ್ಯಜಿಸಬೇಕು.

೮೮-೯೦. ಏಕಾದಶಿಯ ದಿನದಲ್ಲಿ ಜೂಜು, ನಿದ್ರೆ, ತಾಂಬೂಲ, ದಂತಧಾವನ, ಪರಾಪವಾದಕಥನ, ಪೈಶುನ್ಯ, ಕಳ್ಳತನ, ಹಿಂಸೆ, ರತಿ, ಕೋಪ, ಸುಳ್ಳುನುಡಿಯುವುದು ಇವುಗಳನ್ನು ಬಿಡಬೇಕು.

ದ್ವಾದಶಿಯ ದಿನದಲ್ಲಿ ಕಾಂಸ್ಯ, ಮಾಂಸ, ಮದ್ಯ, ಮಧು, ತೈಲ, ಮ್ಲೇಂಛಭಾಷಣೆ, ವ್ಯಾಯಾಮ, ಪ್ರವಾಸ, ಎರಡನೆಯ ಭೋಜನ, ಸಂಭೋಗ ಅಸ್ಪೃಶ್ಯಸ್ಪರ್ಶ, ಆಶೂರ ಎಂಬೀ ಹನ್ನೆರಡನ್ನೂ ತ್ಯಾಗಮಾಡಬೇಕು.

ಏವಂ ನಿಯಮಕೃದ್ವಿಪ್ರ ಉಪವಾಸಂ ಸಮಾಚರೇತ್ ।
ಶಕ್ತೋ ಶಕ್ತಸ್ತು ಮತಿಮಾನೇಕಭುಕ್ತಂ ನ ನಕ್ತಕಂ ॥ ೯೧ ॥

ಅಯಾಚಿತಂ ವಾಪಿ ಚರೇನ್ನ ತ್ಯಜೇದ್ವ್ರತಮೀದೃಶಂ ॥ ೯೨ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸಸ್ಥಿತೈಕಾದಶೀವ್ರತಕಥನಂ ನಾಮ ವಿಂಶತ್ಯಧಿಕಶತತಮೋಽಧ್ಯಾಯಃ

---

೯೧-೯೨. ಈ ರೀತಿಯಾಗಿ ಶಕ್ತನಾದವನು ನಿಯಮಪೂರ್ವಕವಾಗಿ ಉಪವಾಸವನ್ನಾಚರಿಸಬೇಕು. ಅಶಕ್ತನಾದ ಬುದ್ಧಿವಂತನು ಒಪ್ಪತ್ತು ಆಹಾರ ವನ್ನು ತೆಗೆದುಕೊಳ್ಳಬಹುದು. ರಾತ್ರಿ ಊಟಮಾಡಬಾರದು, ಅಥವಾ ಅಯಾಚಿತವನ್ನಾದರೂ ಆಚರಿಸಬೇಕು. ಇಂತಹ ಏಕಾದಶೀ ವ್ರತವನ್ನು ಮಾತ್ರ ಬಿಡಬಾರದು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳುಗಳ ಏಕಾದಶೀವ್ರತ ನಿರೂಪಣೆಯೆಂಬ ನೂರಿಪ್ಪತ್ತನೆಯ ಅಧ್ಯಾಯವು ಮುಗಿದುದು



## ಏಕವಿಂಶತ್ಯಧಿಕಶತತಮೋಽಧ್ಯಾಯಃ

### ಸನಾತನ ಉವಾಚ

ಅಥ ವ್ರತಾನಿ ದ್ವಾದಶ್ಯಾಃ ಕಥಯಾಮಿ ತವಾನಘ ।
ಯಾನಿ ಕೃತ್ವಾ ನರೋ ಲೋಕೇ ವಿಷ್ಣೋಃ ಪ್ರಿಯತರೋ ಭವೇತ್ ॥ ೧ ॥

ಚೈತ್ರಸ್ಯ ಶುಕ್ಲದ್ವಾದಶ್ಯಾಂ ಮದನವ್ರತಮಾಚರೇತ್ ।
ಸ್ಥಾಪಯೇದವ್ರಣಂ ಕುಂಭಂ ಸಿತತಂಡುಲಪೂರಿತಂ ॥ ೨ ॥

ನಾನಾಫಲಯುತಂ ತದ್ವದಿಕ್ಷುದಂಡಸಮನ್ವಿತಂ ।
ಸಿತವಸ್ತ್ರಯುಗಚ್ಛನ್ನಂ ಸಿತಚಂದನಚರ್ಚಿತಂ ॥ ೩ ॥

ನಾನಾಭಕ್ಷ್ಯಸಮೋಪೇತಂ ಸಹಿರಣ್ಯಂ ಸ್ವಶಕ್ತಿತಃ ।
ತಾಮ್ರಪಾತ್ರಂ ಗುಡೋಪೇತಂ ತಸ್ಯೋಪರಿ ನಿವೇಶಯೇತ್ ॥ ೪ ॥

---

### ನೂರಿಪ್ಪತ್ತೊಂದನೆಯ ಅಧ್ಯಾಯವು

ಸನಾತನನು ಹೇಳಿದನು—ಪಾಪರಹಿತನಾದ ನಾರದನೇ! ಲೋಕದಲ್ಲಿ ಯಾವ ವ್ರತವನ್ನು ಮಾಡಿ ಮನುಷ್ಯನು ವಿಷ್ಣುವಿಗೆ ಪ್ರಿಯತರನಾಗುವನೋ ಅಂತಹ ದ್ವಾದಶೀವ್ರತಗಳನ್ನು ನಿನಗೆ ಹೇಳುವೆನು.

೨-೪. ಚೈತ್ರ ಶುಕ್ಲ ದ್ವಾದಶಿಯ ದಿನದಲ್ಲಿ ಮದನವ್ರತವನ್ನಾಚರಿಸಬೇಕು. ಗಟ್ಟಿಯಾಗಿರುವ, ಬಿಳಿಯ ಅಕ್ಕಿಯಿಂದ ಪೂರ್ಣವಾದ, ನಾನಾಫಲಗಳಿಂದ ಯುಕ್ತವಾದ, ಕಬ್ಬಿನಜಲ್ಲೆಗಳಿಂದ ಕೂಡಿದ, ಎರಡು ಬಿಳಿಯ ವಸ್ತ್ರಗಳನ್ನು ಹೊದಿಸಿದ, ಶುಕ್ಲಗಂಧವನ್ನು ಹಚ್ಚಿರುವ, ನಾನಾವಿಧಭಕ್ಷ್ಯಗಳಿಂದ ಸಹಿತವಾದ ಕಲಶವನ್ನು ಸ್ಥಾಪಿಸಿ, ಅದರಲ್ಲಿ ತನ್ನ ಶಕ್ತ್ಯನುಸಾರವಾಗಿ ಹಿರಣ್ಯವನ್ನು ಹಾಕಿ, ಅದರಮೇಲೆ ಬೆಲ್ಲಸಹಿತವಾದ ತಾಮ್ರಪಾತ್ರೆಯನ್ನಿಡಬೇಕು.

ತತ್ರ ಸಂಪೂಜಯೇದ್ದೇವಂ ಕಾಮರೂಪಿಣಮಚ್ಯುತಂ ।
ಗಂಧಾದ್ಯೈರುಪಚಾರೈಸ್ತು ಸೋಽಪವಾಸೋ ಪರೇಽಹನಿ ॥ ೫ ॥

ಪುನಃ ಪ್ರಾತಃ ಸಮಭ್ಯರ್ಚ್ಯ ಬ್ರಾಹ್ಮಣಾಯ ನಿವೇದಯೇತ್ ।
ಬ್ರಾಹ್ಮಣಾನ್ಭೋಜಯೇಚ್ಚೈವ ತೇಭ್ಯೋ ದದ್ಯಾಚ್ಚ ದಕ್ಷಿಣಾಂ ॥ ೬ ॥

ವರ್ಷಮೇವಂ ವ್ರತಂ ಕೃತ್ವಾ ಘೃತಧೇನುಸಮನ್ವಿತಾಂ ।
ಶಯ್ಯಾಂ ತು ದದ್ಯಾದ್ಗುರವೇ ಸರ್ವೋಪಸ್ಕರಸಂಯುತಾಂ ॥ ೭ ॥

ಕಾಂಚನಂ ಕಾಮದೇವಂ ಚ ಶುಕ್ಲಾಂ ಗಾಂ ಚ ಪಯಸ್ವಿನೀಂ ।
ವಾಸೋಭಿರ್ದ್ವಿಜದಾಂಪತ್ಯಂ ಪೂಜ್ಯ ಶಕ್ತ್ಯಾ ಪ್ರತರ್ಪಯೇತ್ ॥ ೮ ॥

ಪ್ರೀಯತಾಂ ಕಾಮರೂಪೀ ಮೇ ಹರಿರಿತ್ಯೇವಮುಚ್ಚರನ್ ।
ಯಃ ಕುರ್ಯಾದ್ವಿಧಿನಾನೇನ ಮದನದ್ವಾದಶೀವ್ರತಂ ॥ ೯ ॥

---

೫-೬. ಅದರಲ್ಲಿ ಕಾಮರೂಪಿಯಾದ ಅಚ್ಯುತದೇವನನ್ನು ಗಂಧಾದ್ಯುಪಚಾರಗಳಿಂದ ಪೂಜಿಸಬೇಕು. ಅನಂತರ ಉಪವಾಸದಿಂದ ಮಾರನೆಯದಿನ ಪ್ರಾತಃಕಾಲದಲ್ಲಿ ಪುನಃ ಪೂಜೆಮಾಡಿ ಬ್ರಾಹ್ಮಣನಿಗೆ ಸಮರ್ಪಿಸಬೇಕು. ಬಳಿಕ ಬ್ರಾಹ್ಮಣರಿಗೆ ಭೋಜನಮಾಡಿಸಿ ಅವರಿಗೆ ದಕ್ಷಿಣೆ ಕೊಡಬೇಕು.

೭. ಈರೀತಿಯಾಗಿ ಒಂದುವರ್ಷವ್ರತಮಾಡಿ ಘೃತಧೇನು ಸಹಿತವಾಗಿ ಸಕಲಪರಿಕರಯುಕ್ತವಾದ ಹಾಸಿಗೆಯನ್ನು ಗುರುಗಳಿಗೆ ದಾನಮಾಡಬೇಕು.

೮. ಬಂಗಾರದ ಕಾಮದೇವಪ್ರತಿಮೆ, ಹಾಲುಕರೆಯುತ್ತಿರುವ ಬಿಳಿಯ ಗೋವು ಮತ್ತು ವಸ್ತ್ರ ಇವುಗಳನ್ನು ತನ್ನ ಶಕ್ತ್ಯನುಸಾರವಾಗಿ ದ್ವಿಜದಂಪತಿಗಳಿಗೆ ಕೊಟ್ಟು ಅವರನ್ನು ಸತ್ಕರಿಸಿ ಸಂತೋಷಪಡಿಸಬೇಕು.

೯-೧೦. 'ಕಾಮರೂಪಿಯಾದ ಹರಿಯು ನನಗೆ ಪ್ರಸನ್ನನಾಗಲಿ ಎಂಬುದಾಗಿ ಪ್ರಾರ್ಥಿಸುತ್ತಾ ಈ ವಿಧಾನದಿಂದ ಮದನದ್ವಾದಶೀ ವ್ರತವನ್ನಾ

**ಸ ಸರ್ವಪಾಪವಿನಿರ್ಮುಕ್ತಃ ಪ್ರಾಪ್ನೋತಿ ಹರಿಸಾಮ್ಯತಾಂ ।**
**ಅಸ್ಯಾಮೇವ ಸಮುದ್ದಿಷ್ಟಂ ಭರ್ತೃದ್ವಾದಶಿಕಾವ್ರತಂ ॥ ೧೦ ॥**

**ಸ್ವಾಸ್ತೃತಾಂ ತತ್ರ ಶಯ್ಯಾಂ ತು ಕೃತ್ವಾತ್ರ ಶ್ರೀಯುತಂ ಹರಿಂ ।**
**ಸಂಸ್ಥಾಪ್ಯ ಮಂಡಪಂ ಪುಷ್ಪೈಸ್ತದುಪರ್ಯುಪಕಲ್ಪಯೇತ್ ॥ ೧೧ ॥**

**ತತಃ ಸಂಪೂಜ್ಯ ಗಂಧಾದ್ಯೈರ್ವ್ರತೀ ಜಾಗರಣಂ ನಿಶಿ ।**
**ನೃತ್ಯವಾದಿತ್ರಗೀತಾದ್ಯೈಸ್ತತಃ ಪ್ರಾತಃ ಪರೇಽಹನಿ ॥ ೧೨ ॥**

**ಸರೌಪ್ಯಂ ಶ್ರೀಹರಿಂ ಹೈಮಂ ದ್ವಿಜಾಗ್ರ್ಯಾಯ ನಿವೇದಯೇತ್ ।**
**ದ್ವಿಜಾನ್ಸಂಭೋಜ್ಯ ವಿಸೃಜೇದ್ದಕ್ಷಿಣಾಭಿಃ ಪ್ರತೋಷಿತಾನ್ ॥ ೧೩ ॥**

---

ಚರಿಸುವವನು ಸಕಲಪಾಪಗಳನ್ನು ನಾಶಪಡಿಸಿಕೊಂಡು ಹರಿಸಾರೂಪ್ಯವನ್ನು ಹೊಂದುವನು.

ಈದಿನದಲ್ಲಿಯೇ ಭರ್ತೃದ್ವಾದಶೀವ್ರತವೂ ವಿಹಿತವಾಗಿದೆ.

೧೧. ಅದರ ವಿಧಾನ:—ಪುಷ್ಪಮಂಟಪವನ್ನು ರಚಿಸಿ ಅದರಲ್ಲಿ ಹಾಸಿಗೆಯನ್ನು ಹಾಸಿ ಅದರಮೇಲೆ ಲಕ್ಷ್ಮೀಸಹಿತ ಹರಿಯನ್ನು ಸ್ಥಾಪಿಸಬೇಕು.

೧೨-೧೩. ಅನಂತರ ಆ ಲಕ್ಷ್ಮೀಸಹಿತ ಹರಿಯನ್ನು ಗಂಧಾದ್ಯುಪಚಾರಗಳಿಂದ ಪೂಜಿಸಿ ವ್ರತಕರ್ತನು ರಾತ್ರಿ ನರ್ತನ, ವಾದ್ಯ, ಗೀತೆ ಮುಂತಾದುವುಗಳಿಂದ ಜಾಗರಣೆಮಾಡಿ ಮಾರನೆಯದಿನ ಪ್ರಾತಃಕಾಲದಲ್ಲಿ ರೌಪ್ಯಸಹಿತವಾದ ಬಂಗಾರದ ಶ್ರೀಹರಿಪ್ರತಿಮೆಯನ್ನು ಶ್ರೇಷ್ಠನಾದ ಬ್ರಾಹ್ಮಣನಿಗೆ ದಾನಮಾಡಬೇಕು. ಬಳಿಕ ಬ್ರಾಹ್ಮಣರಿಗೆ ಭೋಜನಮಾಡಿಸಿ, ದಕ್ಷಿಣಾದಾನದಿಂದ ಅವರನ್ನು ಸಂತೋಷಪಡಿಸಿ ವಿಸರ್ಜನೆಮಾಡಬೇಕು.

ಏವಂ ಕೃತವ್ರತಸ್ಯಾಪಿ ದಾಂಪತ್ಯಂ ಜಾಯತೇ ಸ್ಥಿರಂ ।
ಸಪ್ತಜನ್ಮಸು ಭುಂಕ್ತೇ ಚ ಭೋಗಾನ್ ಲೋಕದ್ವಯೇಪ್ಸಿತಾನ್ ॥ ೧೪ ॥

ವೈಶಾಖಶುಕ್ಲದ್ವಾದಶ್ಯಾಂ ಸೋಪವಾಸೋ ಜಿತೇಂದ್ರಿಯಃ ।
ಸಂಪೂಜ್ಯ ಮಾಧವಂ ಭಕ್ತ್ಯಾ ಗಂಧಾದ್ಯೈರುಪಚಾರಕೈಃ ॥ ೧೫ ॥

ಪಕ್ವಾನ್ನಂ ತೃಪ್ತಿಜನಕಂ ಮಧುರಂ ಸೋದಕುಂಭಕಂ ।
ವಿಪ್ರಾಯ ದದ್ಯಾದ್ವಿಧಿವನ್ಮಾಧವಃ ಪ್ರೀಯತಾಮಿತಿ ॥ ೧೬ ॥

ದ್ವಾದಶ್ಯಾಂ ಜ್ಯೇಷ್ಠಶುಕ್ಲಾಯಾಂ ಪೂಜಯಿತ್ವಾ ತ್ರಿವಿಕ್ರಮಂ ।
ಗಂಧಾದ್ಯೈರ್ಮಧುರಾನ್ನಾಢ್ಯಂ ಕರಕಂ ವಿನಿವೇದಯೇತ್ ॥ ೧೭ ॥

ವ್ರತೀ ದ್ವಿಜಾಯ ತತ್ಪಶ್ಚಾದೇಕಭಕ್ತಂ ಸಮಾಚರೇತ್ ।
ವ್ರತೇನಾನೇನ ಸಂತುಷ್ಟೋ ದೇವದೇವಸ್ತ್ರಿವಿಕ್ರಮಃ ॥ ೧೮ ॥

೧೪. ಈರೀತಿಯಾಗಿ ವ್ರತವನ್ನಾಚರಿಸುವವನಿಗೆ ಏಳುಜನ್ಮದಲ್ಲಿ ದಾಂಪತ್ಯವು ಸ್ಥಿರವಾಗಿರುವುದು. ಮತ್ತು ಈ ಲೋಕ ಪರಲೋಕಗಳಲ್ಲಿ ಇಷ್ಟಭೋಗಗಳನ್ನೂ ಅನುಭವಿಸುವನು.

೧೫-೧೬. ವೈಶಾಖ ಶುಕ್ಲ ದ್ವಾದಶಿಯ ದಿನದಲ್ಲಿ ಜಿತೇಂದ್ರಿಯನಾಗಿ ಉಪವಾಸದಿಂದ ಮಾಧವನನ್ನು ಭಕ್ತಿಪೂರ್ವಕವಾಗಿ ಗಂಧಾದ್ಯುಪಚಾರಗಳಿಂದ ಪೂಜಿಸಿ ಮಧುರವಾದ ತೃಪ್ತಿಜನಕಪಕ್ವಾನ್ನವನ್ನು ಉದಕುಂಭಸಹಿತವಾಗಿ ಮಾಧವನು ಪ್ರೀತನಾಗಲೆಂದು ಸಂಕಲ್ಪಿಸಿ ವಿಧಿವತ್ತಾಗಿ ಬ್ರಾಹ್ಮಣನಿಗೆ ದಾನ ಮಾಡಬೇಕು.

೧೭-೨೨. ಜ್ಯೇಷ್ಠ ಶುಕ್ಲ ದ್ವಾದಶಿಯ ದಿನದಲ್ಲಿ ಗಂಧಾದಿಗಳಿಂದ ತ್ರಿವಿಕ್ರಮನನ್ನು ಪೂಜಿಸಿ ವ್ರತಕರ್ತನು ಮಧುರಾನ್ನಪೂರ್ಣವಾದ ಕಲಶವನ್ನು ಬ್ರಾಹ್ಮಣನಿಗೆ ದಾನಮಾಡಿ ಆದಿನ ಒಪ್ಪತ್ತೂಟಮಾಡಬೇಕು.

ಈ ವ್ರತದಿಂದ ಪ್ರಸನ್ನನಾದ ದೇವದೇವನಾದ ತ್ರಿವಿಕ್ರಮನು ಬಹಳ ಭೋಗಗಳನ್ನಿತ್ತು ಕೊನೆಗೆ ಮೋಕ್ಷವನ್ನೂ ಕೊಡುವನು.

ದದಾತಿ ವಿಪುಲಾನ್ಭೋಗಾನಂತೇ ಮೋಕ್ಷಂ ಚ ನಾರದ ।
ಆಷಾಢಶುಕ್ಲದ್ವಾದಶ್ಯಾಂ ದ್ವಿಜಾನ್ದ್ವಾದಶ ಭೋಜಯೇತ್ ॥ ೧೯ ॥

ಮಧುರಾನ್ನೇನ ತಾನ್ಸಂಪೂಜ್ಯ ಪೃಥಗ್ಗಂಧಾದಿಕೈಃ ಕ್ರಮಾತ್ ।
ತೇಭ್ಯೋ ವಾಸಾಂಸಿ ದಂಡಾಂಶ್ಚ ಬ್ರಹ್ಮಸೂತ್ರಾಣಿ ಮುದ್ರಿಕಾಃ ॥ ೨೦ ॥

ವಸ್ತ್ರಾಣಿ ಚ ದದೇದ್ಭಕ್ತ್ಯಾ ವಿಷ್ಣುರ್ಮೇ ಪ್ರೀಯತಾಮಿತಿ ।
ದ್ವಾದಶ್ಯಾಂ ತು ನಭಃಶುಕ್ಲೇ ಶ್ರೀಧರಂ ಪೂಜಯೇದ್ವ್ರತೀ ॥ ೨೧ ॥

ಗಂಧಾದ್ಯೈಸ್ತತ್ಪುರೋ ಭಕ್ತ್ಯಾ ದಧಿಭಕ್ತೈರ್ದ್ವಿಜೋತ್ತಮಾನ್ ।
ಸಂಭೋಜ್ಯ ದಕ್ಷಿಣಾಂ ರೌಪ್ಯಾಂ ದತ್ವಾ ನತ್ವಾ ವಿಸರ್ಜಯೇತ್ ॥ ೨೨ ॥

ವ್ರತೇನಾನೇನ ದೇವೇಶಃ ಶ್ರೀಧರಃ ಪ್ರೀಯತಾಮಿತಿ ।
ದ್ವಾದಶ್ಯಾಂ ತು ನಭಃ ಶುಕ್ಲೇ ವ್ರತೀ ಸಂಪೂಜ್ಯ ವಾಮನಂ ॥ ೨೩ ॥

ಆಷಾಢ ಶುಕ್ಲ ದ್ವಾದಶಿಯ ದಿನದಲ್ಲಿ ಹನ್ನೆರಡು ಬ್ರಾಹ್ಮಣರನ್ನು ಪ್ರತ್ಯೇಕವಾಗಿ ಗಂಧಾದಿಗಳಿಂದ ಕ್ರಮವಾಗಿ ಪೂಜಿಸಿ ಭೋಜನ ಮಾಡಿಸಬೇಕು. ಅನಂತರ ಅವರಿಗೆ ವಸ್ತ್ರ, ದಂಡ, ಯಜ್ಞೋಪವೀತ, ಉಂಗುರ ಇವುಗಳನ್ನು ವಿಷ್ಣುವು ಪ್ರೀತನಾಗಲೆಂದು ಸಂಕಲ್ಪಿಸಿ ಭಕ್ತಿಯಿಂದ ದಾನಮಾಡಬೇಕು

ಶ್ರಾವಣ ಶುಕ್ಲ ದ್ವಾದಶಿಯ ದಿನದಲ್ಲಿ ವ್ರತಕರ್ತನು ಶ್ರೀಧರನನ್ನು ಗಂಧಾದ್ಯುಪಚಾರಗಳಿಂದ ಪೂಜಿಸಿ ದೇವರ ಸನ್ನಿಧಾನದಲ್ಲಿ ದಧಿವ್ರತವನ್ನು ಸಂಕಲ್ಪಿಸಿ ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನಮಾಡಿಸಿ ರಜತದ ದಕ್ಷಿಣೆಯನ್ನು ಕೊಟ್ಟು ನಮಸ್ಕಾರಮಾಡಿ ವಿಸರ್ಜನೆಮಾಡಬೇಕು.

೨೩-೨೪. ಈ ವ್ರತದಿಂದ ದೇವೇಶನಾದ ಶ್ರೀಧರನು ಸಂತುಷ್ಟನಾಗಲೆಂದು ಅನುಸಂಧಾನಮಾಡಬೇಕು.

ತದಗ್ರೇ ಭೋಜಯೇದ್ವಿಪ್ರಾನ್ಪಾಯಸೈರ್ದ್ವಾದಶೈವ ಚ ।
ಸೌವರ್ಣಾಂ ದಕ್ಷಿಣಾಂ ದತ್ವಾ ವಿಷ್ಣುಪ್ರೀತಿಕರೋ ಭವೇತ್ ॥ ೨೪ ॥

ದ್ವಾದಶ್ಯಾಮಿಷಶುಕ್ಲಾಯಾಂ ಪದ್ಮನಾಭಂ ಸಮರ್ಚಯೇತ್ ।
ಗಂಧಾದ್ಯೈರುಪಚಾರೈಸ್ತು ತದಗ್ರೇ ಭೋಜಯೇದ್ದ್ವಿಜಾನ್ ॥ ೨೫ ॥

ಮಧುರಾನ್ನೇನ ವಸ್ತ್ರಾಢ್ಯಂ ಸೌವರ್ಣಾಂ ದಕ್ಷಿಣಾಂ ದದೇತ್ ।
ವ್ರತೇನಾನೇನ ಸಂತುಷ್ಟಃ ಪದ್ಮನಾಭೋ ದ್ವಿಜೋತ್ತಮ ॥ ೨೬ ॥

ಶ್ವೇತದ್ವೀಪಗತಿಂ ದದ್ಯಾದ್ದೇಹಭೋಗಾಂಶ್ಚ ವಾಂಛಿತಾನ್ ।
ಕಾರ್ತಿಕೇ ಕೃಷ್ಣಪಕ್ಷೇ ತು ಗೋವತ್ಸದ್ವಾದಶೀವ್ರತಂ ॥ ೨೭ ॥

ತತ್ರ ವತ್ಸಯುತಾಂ ಗಾಂ ತು ಸಮಾಲಿಖ್ಯ ಸುಗಂಧಿಭಿಃ ।
ಚಂದನಾದ್ಯೈಸ್ತಥಾ ಪುಷ್ಪಮಾಲಾಭಿಃ ಪ್ರಾರ್ಚ್ಯ ತಾಮ್ರಕೇ ॥ ೨೮ ॥

---

ಭಾದ್ರಪದ ಶುಕ್ಲ ದ್ವಾದಶಿಯ ದಿನದಲ್ಲಿ ವಾಮನನನ್ನು ಪೂಜಿಸಿ ಆ ದೇವರಸನ್ನಿಧಿಯಲ್ಲಿ ಪಾಯಸಗಳಿಂದ ಹನ್ನೆರಡುಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಸುವರ್ಣದಕ್ಷಿಣೆಯನ್ನು ಕೊಟ್ಟು ವಿಷ್ಣುಪ್ರೀತಿಯನ್ನು ಸಂಪಾದಿಸಬೇಕು.

೨೫-೨೭. ಆಶ್ವಯುಜ ಶುಕ್ಲ ದ್ವಾದಶಿಯ ದಿನದಲ್ಲಿ ಗಂಧಾದ್ಯುಪಚಾರಗಳಿಂದ ಪದ್ಮನಾಭನನ್ನು ಪೂಜಿಸಿ ಅನಂತರ ಮಧುರಾನ್ನವನ್ನು ಬ್ರಾಹ್ಮಣರಿಗೆ ಭೋಜನಮಾಡಿಸಿ ವಸ್ತ್ರಸಹಿತವಾಗಿ, ಸುವರ್ಣದಕ್ಷಿಣೆಯನ್ನು ಕೊಡಬೇಕು.

ದ್ವಿಜಶ್ರೇಷ್ಠನೇ ! ಈ ವ್ರತದಿಂದ ಸಂತುಷ್ಟನಾದ ಪದ್ಮನಾಭನು ಅಪೇಕ್ಷಿಸಿದ ದೇಹಭೋಗಗಳನ್ನು ಕೊಟ್ಟು ಶ್ವೇತದ್ವೀಪಗತಿಯನ್ನು ಕೊಡುವನು.

ಕಾರ್ತಿಕ ಕೃಷ್ಣಪಕ್ಷದಲ್ಲಿ ಗೋವತ್ಸದ್ವಾದಶೀವ್ರತವು ವಿಹಿತವಾಗಿದೆ.

೨೮-೨೯. ಆದಿನದಲ್ಲಿ ಸುವಾಸನೆಯ ಗಂಧಾದಿಗಳಿಂದ ಕರುಸಹಿತವಾಗಿ

ಪಾತ್ರೇ ಯಥಾಕ್ಷತತಿಲೈರರ್ಘ್ಯಂ ಕೃತ್ವಾ ವಿಧಾನತಃ ।
ಪ್ರದದ್ಯಾತ್ಪಾದಮೂಲೇಸ್ಯಾ ಮಂತ್ರೇಣಾನೇನ ನಾರದ ॥ ೨೯ ॥

ಕ್ಷೀರೋದಾರ್ಣವಸಂಭೂತೇ ಸುರಾಸುರನಮಸ್ಕೃತೇ ।
ಸರ್ವದೇವಮಯೇ ದೇವಿ ಸರ್ವದೇವೈರಲಂಕೃತೇ ॥ ೩೦ ॥

ಮಾತರ್ಮಾತರ್ಗವಾಂ ಮಾತರ್ಗೃಹಾಣಾರ್ಘ್ಯಂ ನಮೋಸ್ತು ತೇ ।
ತತೋ ಮಾಷಾದಿಸಂಸಿದ್ಧಾನ್ವಟಕಾಂಶ್ಚ ನಿವೇದಯೇತ್ ॥ ೩೧ ॥

ಏವಂ ಪಂಚ ದಶೈಕಂ ವಾ ಯಥಾವಿಭವಮಾತ್ಮನಃ ।
ಸುರಭಿ ತ್ವಂ ಜಗನ್ಮಾತಾ ನಿತ್ಯಂ ವಿಷ್ಣುಪದೇ ಸ್ಥಿತಾ ॥ ೩೨ ॥

ಸರ್ವದೇವಮಯೇ ಗ್ರಾಸಂ ಮಯಾದತ್ತಮಿಮಂ ಗ್ರಸ ।
ಸರ್ವದೇವಮಯೇ ದೇವಿ ಸರ್ವದೇವೈರಲಂಕೃತೇ ॥ ೩೩ ॥

---

ಗೋವನ್ನು ಬರೆದು ಪುಷ್ಪಮಾಲಿಕೆಗಳಿಂದ ಪೂಜಿಸಿ ತಾಮ್ರಪಾತ್ರೆಯಲ್ಲಿ ಅಕ್ಷತೆ ತಿಲಗಳಿಂದ ವಿಧಿವತ್ತಾಗಿ ಅರ್ಘ್ಯವನ್ನು ಕೊಟ್ಟು ಮುಂದಿನ ಮಂತ್ರದಿಂದ ಆ ಗೋವಿನ ಪಾದಮೂಲದಲ್ಲಿ ಅರ್ಘ್ಯವನ್ನು ಕೊಡಬೇಕು.

೩೦-೩೧. ಮಂತ್ರ:—'ಕ್ಷೀರಸಾಗರಜಾತಳು, ಸುರಾಸುರವಂದಿತಳು, ಸಕಲದೇವತೆಗಳಿಂದ ಸಹಿತಳು ಮತ್ತು ಸರ್ವದೇವಮಯಳೂ ಆಗಿರುವ ಮಾತೆಯೇ! ಗೋಮಾತಯೇ! ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರಮಾಡುವೆನು'

ಅನಂತರ ಉದ್ದು ಮೊದಲಾದುವುಗಳಿಂದ ಸಿದ್ಧಪಡಿಸಿದ ವಟಕಗಳನ್ನು ನೈವೇದ್ಯಮಾಡಬೇಕು.

೩೨-೩೬. ಈರೀತಿಯಾಗಿ ಐದು ಅಥವಾ ಹತ್ತು ಇಲ್ಲವೇ ಒಂದು ಗೋವನ್ನು ತನ್ನ ಸಂಪತ್ತಿಗನುಸಾರವಾಗಿ ರಚಿಸಿ ಪೂಜಿಸಬೇಕು. ಅನಂತರ 'ಸುರಭಿಯಾದ ನೀನು ಲೋಕಮಾತೆಯು, ಯಾವಾಗಲೂ ವಿಷ್ಣುಪಾದಸನ್ನಿಧಿ

**ಮಾತರ್ಮಮಾಭಿಲಷಿತಂ ಸಫಲಂ ಕುರು ನಂದಿನಿ |**
**ತದ್ದಿನೇ ತೈಲಪಕ್ವಂ ಚ ಸ್ಥಾಲೀಪಕ್ವಂ ದ್ವಿಜೋತ್ತಮ || ೩೪ ||**

**ಗೋಕ್ಷೀರಂ ಗೋಘೃತಂ ಚೈವ ದಧಿ ತಕ್ರಂ ಚ ವರ್ಜಯೇತ್ |**
**ದ್ವಾದಶ್ಯಾಮೂರ್ಜಶುಕ್ಲಾಯಾಂ ದೇವಂ ದಾಮೋದರಂ ದ್ವಿಜ || ೩೫ ||**

**ಸಮಭ್ಯರ್ಚ್ಯೋಪಚಾರೈಸ್ತು ಗಂಧಾದ್ಯೈಃ ಸುಸಮಾಹಿತಃ |**
**ತದಗ್ರೇ ಭೋಜಯೇದ್ವಿಪ್ರಾನ್ಪಕ್ವಾನ್ನೇನಾರ್ಕಸಂಖ್ಯಕಾನ್ || ೩೬ ||**

**ತತಃ ಕುಂಭಾನಪಾಂ ಪೂರ್ಣಾನ್ವಸ್ತ್ರಾಚ್ಛನ್ನಾನ್ಸಮರ್ಚಿತಾನ್ |**
**ಸಪೂಗಮೋದಕಸ್ವರ್ಣಾಂಸ್ತೇಭ್ಯಃ ಪ್ರೀತ್ಯಾ ಸಮರ್ಪಯೇತ್ || ೩೭ ||**

---

ಯಲ್ಲಿರುವವಳು, ಸರ್ವದೇವಮಯಳು. ನನ್ನಿಂದ ಕೊಡಲ್ಪಟ್ಟ ಈ ಗ್ರಾಸವನ್ನು ಸ್ವೀಕರಿಸು ! ಸರ್ವದೇವಮಯಳು, ಸರ್ವದೇವತೆಗಳಿಂದ ಅಲಂಕೃತದೇವಿಯೂ ಆದ ಸಮೃದ್ಧಮಾತೆಯೇ ! ನನ್ನ ಅಭಿಲಾಷೆಯನ್ನು ಸಫಲಗೊಳಿಸು ' ಎಂಬುದಾಗಿ ಪ್ರಾರ್ಥಿಸಬೇಕು.

ಆದಿನದಲ್ಲಿ ತೈಲಪಕ್ವ, ಸ್ಥಾಲೀಪಕ್ವ, ಗೋಕ್ಷೀರ, ಗೋಘೃತ, ಮೊಸರು, ಮಜ್ಜಿಗೆ ಇವೆಲ್ಲವನ್ನೂ ಬಿಡಬೇಕು ಸೇವಿಸಬಾರದು.

ಕಾರ್ತಿಕ ಶುಕ್ಲ ದ್ವಾದಶಿಯ ದಿನದಲ್ಲಿ ದಾಮೋದರದೇವನನ್ನು ಗಂಧಾದ್ಯುಪಚಾರಗಳಿಂದ ಸಮಾಧಾನಮನಸ್ಕನಾಗಿ ಪೂಜಿಸಿ, ಅನಂತರ ಪಕ್ವಾನ್ನಗಳಿಂದ ಹನ್ನೆರಡುಮಂದಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

೩೭-೩೮. ತರುವಾಯ ನೀರುತುಂಬಿದ ಕುಂಭಗಳನ್ನು ವಸ್ತ್ರದಿಂದ ಆಚ್ಛಾದನೆಮಾಡಿ ಪೂಜಿಸಿ ಅವನ್ನು ಆ ಬ್ರಾಹ್ಮಣರಿಗೆ ಅಡಿಕೆ, ಮೋದಕ, ಸುವರ್ಣಗಳ ಸಹಿತವಾಗಿ ಆದರದಿಂದ ಸಮರ್ಪಿಸಬೇಕು.

ಏವಂ ಕೃತೇ ಪ್ರಿಯೋ ವಿಷ್ಣೋರ್ಜಾಯತೇಽಖಿಲಭೋಗಭುಕ್ ।
ದೇಹಾಂತೇ ವಿಷ್ಣುಸಾಯುಜ್ಯಂ ಲಭತೇ ನಾತ್ರ ಸಂಶಯಃ ॥ ೩೮ ॥

ನೀರಾಜನವ್ರತಂ ಚಾತ್ರ ಗದಿತಂ ತನ್ನಿಬೋಧ ಮೇ ।
ಸುಪ್ತೋತ್ಥಿತಂ ಜಗನ್ನಾಥಮಲಂಕೃತ್ಯ ನಿಶಾಗಮೇ ॥ ೩೯ ॥

ಅಲಂಕೃತೋ ಭವಂ ವಹ್ನಿಮುತ್ಪಾದ್ಯಾಭ್ಯರ್ಚ್ಯ ಮಂತ್ರತಃ ।
ಹುತ್ವಾ ತತ್ರ ಸಮುದ್ದೀಪ್ತೇ ರೌಪ್ಯದೀಪಿಕಯಾ ಮುನೇ ॥ ೪೦ ॥

ಗಂಧಪುಷ್ಪಾದ್ಯರ್ಚಿತಯಾ ಜನೈರ್ನೀರಾಜಯೇದ್ಧರಿಂ ।
ತತ್ರೈವಾನುಗತಾಂ ಲಕ್ಷ್ಮೀಂ ಬ್ರಹ್ಮಾಣೀಂ ಚಂಡಿಕಾಂ ತಥಾ ॥ ೪೧ ॥

ಆದಿತ್ಯಂ ಶಂಕರಂ ಗೌರೀಂ ಯಕ್ಷಂ ಗಣಪತಿಂ ಗ್ರಹಾನ್ ।
ಮಾತೄಃ ಪಿತೄನ್ನಗಾನ್ನಾಗಾನ್ಸರ್ವಾನ್ನೀರಾಜಯೇತ್ಕ್ರಮಾತ್ ॥ ೪೨ ॥

---

ಈರೀತಿಯಾಗಿ ಮಾಡಿದರೆ ವಿಷ್ಣುವಿಗೆ ಪ್ರಿಯನಾಗಿ ಸಮಸ್ತಭೋಗಗಳನ್ನೂ ಅನುಭವಿಸಿ, ಮರಣಾನಂತರ ವಿಷ್ಣುಸಾಯುಜ್ಯವನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹವಿಲ್ಲ

೩೯-೪೨. ಈದಿನದಲ್ಲಿಯೇ ನೀರಾಜನವ್ರತವೂ ವಿಹಿತವಾಗಿದೆ. ಅದರ ವಿಧಾನವನ್ನು ಹೇಳುವೆನು, ಕೇಳು :—ಯಜಮಾನನು ಅಲಂಕೃತನಾಗಿ ರಾತ್ರಿ ಪ್ರಾರಂಭಕಾಲದಲ್ಲಿ ಚಾತುರ್ಮಾಸ್ಯದಲ್ಲಿ ಶಯನಮಾಡಿ ಆಗ ಎದ್ದಿದ್ದ ಜಗನ್ನಾಥನನ್ನು ಚೆನ್ನಾಗಿ ಅಲಂಕರಿಸಿ, ಭವಾಗ್ನಿಯನ್ನು ಹೊತ್ತಿಸಿ, ಮಂತ್ರದಿಂದ ಪೂಜಿಸಿ, ಅದರಲ್ಲಿ ಹೋಮಮಾಡಿ, ಬೆಳ್ಳಿಯ ಹಣತೆಗಳಲ್ಲಿ ದೀಪಹಚ್ಚಿ, ಅದನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ ಅದರಿಂದ ಹರಿಗೆ ಮಂಗಳಾರತಿ ಮಾಡಬೇಕು. ಅಲ್ಲಿಯೇ ಸನ್ನಿಹಿತರಾಗಿದ್ದ ಲಕ್ಷ್ಮೀ, ಸರಸ್ವತೀ, ಚಂಡಿಕೆ, ಸೂರ್ಯ, ಶಂಕರ, ಗೌರೀ, ಯಕ್ಷ, ಗಣಪತಿ, ಗ್ರಹಗಳು, ಮಾತೃದೇವತೆ, ಪಿತೃದೇವತೆ, ನಾಗ ಮುಂತಾದ ಸರ್ವರಿಗೂ ಕ್ರಮವಾಗಿ ಮಂಗಳಾರತಿ ಮಾಡಬೇಕು.

ಗವಾಂ ನೀರಾಜನಂ ಕುರ್ಯಾನ್ಮಹಿಷ್ಯಾದೇಶ್ಚ ಮಂಡಲಂ |
ನಮೋ ಜಯೇತಿ ಶಬ್ದೈಶ್ಚ ಘಂಟಾಶಂಖಾದಿನಿಃಸ್ವನೈಃ || ೪೩ ||

ಸಿಂದೂರಾಲಿಪ್ತಶೃಂಗಾಣಾಂ ಚಿತ್ರಾಂಗಾಣಾಂ ಚ ವರ್ಣಕೈಃ |
ಗವಾಂ ಕೋಲಾಹಲೇ ವೃತ್ತೇ ನೀರಾಜನಮಹೋತ್ಸವೇ || ೪೪ ||

ತುರಗಾಂಲ್ಲಕ್ಷಣೋಪೇತಾನ್ ಗಜಾಂಶ್ಚ ಮದವಿಪ್ಲುತಾನ್ !
ರಾಜಚಿಹ್ನಾನಿ ಸರ್ವಾಣಿ ಛತ್ರಾದೀನಿ ಚ ನಾರದ || ೪೫ ||

ರಾಜಾ ಪುರೋಧಸಾ ಸಾರ್ಧಂ ಮಂತ್ರಿಭೃತ್ಯ ಪುರಸ್ಸರಃ |
ಪೂಜಯಿತ್ವಾ ಯಥಾನ್ಯಾಯಂ ನೀರಾಜ್ಯ ಸ್ವಯಮಾದರಾತ್ || ೪೬ ||

ಶಂಖತೂರ್ಯಾದಿಘೋಷೈಶ್ಚ ನಾನಾರತ್ನವಿನಿರ್ಮಿತೇ |
ಸಿಂಹಾಸನೇ ನವೇ ಕ್ಲೃಪ್ತೇ ತಿಷ್ಠೇತ್ಸಮ್ಯಗಲಂಕೃತಃ || ೪೭ ||

---

೪೩. ಗೋವುಗಳಿಗೂ ಮಂಗಳಾರತಿ ಮಾಡಬೇಕು. ಮಹಿಷ್ಯಾದಿಗಳಿಗೆ ಮಂಡಲವನ್ನು ಮಾಡಬೇಕು. ಆಗ 'ನಮಃ, ಜಯ' ಶಬ್ದಗಳನ್ನೂ ಘಂಟೆ, ಶಂಖ ಮುಂತಾದುವುಗಳ ಧ್ವನಿಯನ್ನೂ ಮಾಡಬೇಕು.

೪೪-೪೭. ಆ ನೀರಾಜನಮಹೋತ್ಸವದಲ್ಲಿ ಸಿಂದೂರವನ್ನು ಹಚ್ಚಿದ ಶೃಂಗಗಳುಳ್ಳ, ಬಣ್ಣಗಳಿಂದ ಚಿತ್ರಿತವಾದ ಅವಯವಗಳುಳ್ಳ ಗೋವುಗಳ ಕೋಲಾಹಲವಾದಾಗ ಸುಲಕ್ಷಣಯುಕ್ತವಾದ ಅಶ್ವ, ಮದಿಸಿದ ಆನೆ, ಛತ್ರಿ ಮುಂತಾದ ರಾಜಚಿಹ್ನೆಗಳನ್ನೆಲ್ಲಾ ರಾಜನು ಮಂತ್ರಿ, ಭೃತ್ಯರಸಹಿತನಾಗಿ ಪುರೋಹಿತನಿಂದ ಪೂಜೆಮಾಡಿಸಿ, ತಾನೇ ಯಥೋಚಿತವಾಗಿ ಆದರದಿಂದ ಮಂಗಳಾರತಿಮಾಡಿ, ಶಂಖ, ತೂರ್ಯಾದಿಧ್ವನಿಯನ್ನು ಮಾಡಿಸುತ್ತಾ, ನಾನಾರತ್ನಗಳಿಂದ ರಚಿಸಿದ, ಕ್ಲೃಪ್ತವಾದ ನೂತನಸಿಂಹಾಸನದಲ್ಲಿ ಚೆನ್ನಾಗಿ ಅಲಂಕಾರಮಾಡಿಕೊಂಡು, ಕುಳಿತುಕೊಳ್ಳಬೇಕು.

ತತಃ ಸುಲಕ್ಷಣೈರ್ಯುಕ್ತಾ ವೇಶ್ಯಾ ವಾಥ ಕುಲಾಂಗನಾ ।
ಶೀರ್ಷೋಪರಿ ನರೇಂದ್ರಸ್ಯ ತಯಾ ನೀರಾಜಯೇಚ್ಛನೈಃ ॥ ೪೮ ॥

ಏವಮೇಷಾ ಮಹಾಶಾಂತಿಃ ಕರ್ತವ್ಯಾ ಪ್ರತಿವತ್ಸರಂ ।
ರಾಜ್ಞಾ ವಿತ್ತವತಾನ್ಯೇನ ವರ್ಷಮಾರೋಗ್ಯಮಿಚ್ಛತಾ ॥ ೪೯ ॥

ಯೇಷಾಂ ರಾಷ್ಟ್ರೇ ಪುರೇ ಗ್ರಾಮೇ ಕ್ರಿಯತೇ ಶಾಂತಿರುತ್ತಮಾ ।
ನೀರಾಜನಾಭಿಧಾ ವಿಪ್ರಾ ತದ್ರೋಗಾ ಯಾಂತಿ ಸಂಕ್ಷಯಂ ॥ ೫೦ ॥

ದ್ವಾದಶ್ಯಾಂ ಮಾರ್ಗಶುಕ್ಲಾಯಾಂ ಸಾಧ್ಯವ್ರತಮನುತ್ತಮಂ ।
ಮನೋಭವಸ್ತಥಾ ಪ್ರಾಣೋ ನರೋ ಯಾತಶ್ಚ ವೀರ್ಯವಾನ್ ॥ ೫೧ ॥

ಚಿತಿರ್ಹಯೋ ನೃಪಶ್ಚೈವ ಹಂಸೋ ನಾರಾಯಣಸ್ತಥಾ ।
ವಿಭುಶ್ಚಾಪಿ ಪ್ರಭುಶ್ಚೈವ ಸಾಧ್ಯಾ ದ್ವಾದಶ ಕೀರ್ತಿತಾಃ ॥ ೫೨ ॥

೪೮. ಅನಂತರ ಸಲಕ್ಷಣಳಾದ ವೇಶ್ಯೆ ಅಥವಾ ಕುಲಾಂಗನೆಯು ರಾಜನಿಗೆ ಮೆಲ್ಲಗೆ ಆರತಿಯನ್ನು ಮಾಡಿ ಮಂತ್ರಾಕ್ಷತೆಯನ್ನು ತಲೆಯಮೇಲೆ ಹಾಕಬೇಕು.

೪೯. ವರ್ಷ ಪೂರ್ತಿಯಾಗಿ ಆರೋಗ್ಯದಿಂದಿರಬೇಕೆಂದು ಬಯಸುವ ರಾಜನು ಅಥವಾ ಶ್ರೀಮಂತನು ಈರೀತಿಯಾಗಿ ಪ್ರತಿವರ್ಷವೂ ಮಹಾಶಾಂತಿಯನ್ನಾಚರಿಸಬೇಕು.

೫೦. ಯಾರದೇಶ, ಪಟ್ಟಣ, ಅಥವಾ ಗ್ರಾಮದಲ್ಲಿ ನೀರಾಜನವೆಂಬ ಉತ್ತಮಶಾಂತಿಯು ಆಚರಿಸಲ್ಪಡುತ್ತದೆಯೋ ಆ ದೇಶಾದಿಗಳಲ್ಲಿ ರೋಗಗಳೆಲ್ಲವೂ ನಾಶವಾಗುವುವು

೫೧-೫೨. ಮಾರ್ಗಶೀರ್ಷ ಶುಕ್ಲ ದ್ವಾದಶಿಯ ದಿನದಲ್ಲಿ ಸರ್ವೋತ್ತಮವಾದ ಸಾಧ್ಯವ್ರತವು ವಿಹಿತವಾಗಿದೆ

ಮನೋಭವ, ಪ್ರಾಣ, ನರ, ಯಾತ, ವೀರ್ಯವಂತ, ಚಿತಿ, ಹಯ, ನೃಪ, ಹಂಸ, ನಾರಾಯಣ, ವಿಭು ಮತ್ತು ಪ್ರಭು ಎಂಬೀ ಹನ್ನೆರಡುಜನರು ಸಾಧ್ಯರೆಂದು ಉಕ್ತರಾಗಿರುವರು.

ಪೂಜಯೇದ್ಗಂಧಪುಷ್ಪಾದ್ಯೈರೇತಾಂಸ್ತಂಡುಲಕಲ್ಪಿತಾನ್ ।
ತತೋ ದ್ವಿಜಾಗ್ರ್ಯಾನ್ಸಂಭೋಜ್ಯ ದ್ವಾದಶಾತ್ರ ಸುದಕ್ಷಿಣಾಃ ॥ ೫೩ ॥

ದತ್ವಾ ತೇಭ್ಯಸ್ತು ವಿಸೃಜೇತ್ಪ್ರೀಯಾನ್ನಾರಾಯಣಸ್ತ್ವಿತಿ ।
ಏತಸ್ಯಾಮೇವ ವಿಹಿತಂ ದ್ವಾದಶಾದಿತ್ಯಸಂಜ್ಞಿತಂ ॥ ೫೪ ॥

ವ್ರತಂ ತತ್ರಾರ್ಚಯೇದ್ಧೀಮಾನ್ ಆದಿತ್ಯಾನ್ದ್ವಾದಶಾಪಿ ಚ ।
ಧಾತಾ ಮಿತ್ರೋಽರ್ಯಮಾ ಪೂಷಾ ಶಕ್ರೋಂಽಶೋ ವರುಣೋ ಭಗಃ ॥

ತ್ವಷ್ಟಾ ವಿವಸ್ವಾನ್ಸವಿತಾ ವಿಷ್ಣುರ್ದ್ವಾದಶ ಈರಿತಾಃ ।
ಪ್ರತಿಮಾಸಂ ತು ಶುಕ್ಲಾಯಾಂ ದ್ವಾದಶ್ಯಾಮರ್ಚ್ಯ ಯತ್ನತಃ ॥ ೫೬ ॥

ವರ್ಷಂ ನಯೇದ್ವ್ರತಾಂತೇ ತು ಪ್ರತಿಮಾ ದ್ವಾದಶಾಪಿ ಚ ।
ಹೈಮೀಃ ಸಂಪೂಜ್ಯ ವಿಧಿನಾ ಭೋಜಯಿತ್ವಾ ದ್ವಿಜೋತ್ತಮಾನ್ ॥ ೫೭ ॥

---

೫೩-೫೯. ಅಕ್ಕಿಯಿಂದ ಈ ಹನ್ನೆರಡು ಸಾಧ್ಯಮೂರ್ತಿಗಳನ್ನು ರಚಿಸಿ ಅವನ್ನು ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಅನಂತರ ನಾರಾಯಣ ಪ್ರೀತನಾಗಲೆಂದು ಸಂಕಲ್ಪಿಸಿ ಹನ್ನೆರಡುಮಂದಿ ಶ್ರೇಷ್ಠ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಅವರಿಗೆ ದಕ್ಷಿಣೆಕೊಟ್ಟು ವಿಸರ್ಜನೆಮಾಡಬೇಕು.

ಈದಿನದಲ್ಲಿಯೇ ದ್ವಾದಶಾದಿತ್ಯ ಎಂಬ ವ್ರತವು ವಿಹಿತವಾಗಿದೆ. ಆ ವ್ರತದಲ್ಲಿ ಜ್ಞಾನಿಯು ಹನ್ನೆರಡು ಆದಿತ್ಯರನ್ನು ಪೂಜಿಸಬೇಕು.

ಧಾತಾ, ಮಿತ್ರ, ಅರ್ಯಮಾ, ಪೂಷಾ, ಶುಕ್ರ, ಅಂಶ, ವರುಣ, ಭಗ, ತ್ವಷ್ಟಾ, ವಿವಸ್ವಾನ್, ಸವಿತಾ ಮತ್ತು ವಿಷ್ಣು ಈ ಹನ್ನೆರಡು ಮಂದಿಯೂ ದ್ವಾದಶಾದಿತ್ಯರೆಂದು ಉಕ್ತರಾಗಿರುವರು.

ಪ್ರತಿತಿಂಗಳ ಶುಕ್ಲ ದ್ವಾದಶಿಯಲ್ಲಿಯೂ ಬಂಗಾರದ ದ್ವಾದಶಾದಿತ್ಯ ಪ್ರತಿಮೆಗಳನ್ನು ಪೂಜಿಸಿ ವಿಧಿವತ್ತಾಗಿ ದ್ವಿಜೋತ್ತಮರಿಗೆ ಮಧುರಾನ್ನಗಳಿಂದ ಭೋಜನಮಾಡಿಸುತ್ತಾ ಪ್ರತ್ಯೇಕವಾಗಿ ಅವರನ್ನು ಸತ್ಕರಿಸಿ ವ್ರತವನ್ನು ದೇವರಿಗೆ ಅರ್ಪಿಸಬೇಕು.

ಮಧುರಾನ್ನೈಃ ಸುಸತ್ಕೃತ್ಯ ಪ್ರತ್ಯೇಕಂ ಚಾರ್ಪಯೇದ್ವ್ರತೀ ।
ಏವಂ ವ್ರತಂ ನರಃ ಕೃತ್ವಾ ದ್ವಾದಶಾದಿತ್ಯಸಂಜ್ಞಕಂ　　|| ೫೮ ||

ಸೂರ್ಯಲೋಕಂ ಸಮಾಸಾದ್ಯ ಭುಕ್ತ್ವಾ ಭೋಗಾಂಶ್ಚಿರಂ ತತಃ ।
ಜಾಯತೇ ಭುವಿ ಧರ್ಮಾತ್ಮಾ ಮಾನುಷ್ಯೇ ರೋಗವರ್ಜಿತಃ　　|| ೫೯ ||

ತತೋ ವ್ರತಸ್ಯ ಪುಣ್ಯೇನ ಪುನರೇವ ಲಭೇದ್ವ್ರತಂ ।
ತತ್ಪುಣ್ಯೇನ ರವೇರ್ಭಿತ್ವಾ ಮಂಡಲಂ ದ್ವಿಜಸತ್ತಮ　　|| ೬೦ ||

ನಿರಂಜನಂ ನಿರಾಕಾರಂ ನಿರ್ದ್ವಂದ್ವಂ ಬ್ರಹ್ಮಚಾಪ್ನುಯಾತ್ ।
ಅತ್ರೈವಾಖಂಡಸಂಜ್ಞಂ ಚ ವ್ರತಮುಕ್ತಂ ದ್ವಿಜೋತ್ತಮ　　|| ೬೧ ||

ಮೂರ್ತಿಂ ನಿರ್ಮಾಯ ಸೌವರ್ಣೀಂ ಜನಾರ್ದನಸಮಾಹ್ವಯಾಂ ।
ಅಭ್ಯರ್ಚ್ಯ ಗಂಧಪುಷ್ಪಾದ್ಯೈಸ್ತದಗ್ರೇ ಭೋಜಯೇದ್ದ್ವಿಜಾನ್　　|| ೬೨ ||

---

ಈರೀತಿ ದ್ವಾದಶಾದಿತ್ಯನಾಮಕವಾದ ವ್ರತವನ್ನು ಮಾಡಿದ ಮನುಷ್ಯನು ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಬಹುಕಾಲದವರೆಗೆ ಭೋಗಗಳನ್ನನುಭವಿಸಿ ಭೂಲೋಕದಲ್ಲಿ ರೋಗಾದಿಗಳಿಲ್ಲದ ಮನುಷ್ಯನಾಗಿ ಹುಟ್ಟುವನು.

೬೦-೬೧. ತರುವಾಯ ಆ ವ್ರತ ಪುಣ್ಯಪ್ರಭಾವದಿಂದ ಪುನಃ ವ್ರತವು ಲಭಿಸುವುದು. ಹಾಗೆ ಆಚರಿಸಿದ ವ್ರತದ ಪುಣ್ಯಪ್ರಭಾವದಿಂದ ಸೂರ್ಯಮಂಡಲ ವನ್ನು ಭೇದಿಸಿ ನಿರ್ದೋಷನು, ಪ್ರಾಕೃತಾಕಾರರಹಿತನು, ದ್ವಂದ್ವಶೂನ್ಯನೂ ಆದ ಬ್ರಹ್ಮನನ್ನು ಹೊಂದುವನು.

ಈ ದಿನದಲ್ಲಿಯೇ ಅಖಂಡವೆಂಬ ವ್ರತವೂ ವಿಹಿತವಾಗಿದೆ.

೬೨-೬೭. ವಿಧಾನ:—ಬಂಗಾರದ ಜನಾರ್ದನ ಮೂರ್ತಿಯನ್ನು ರಚಿಸಿ, ಅದನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ, ಆ ದೇವತೆಯ ಸನ್ನಿಧಿಯಲ್ಲಿ ಹನ್ನೆರಡುಜನ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಯಜಮಾನನು ಪ್ರತಿತಿಂಗಳ ದ್ವಾದಶಿಯಲ್ಲಿಯೂ ನಕ್ತಭೋಜನಮಾಡುತ್ತಾ ಜಿತೇಂದ್ರಿಯನಾಗಿರಬೇಕು.

ದ್ವಾದಶ್ಯಾಂ ಪ್ರತಿಮಾಸಂ ತು ನಕ್ತಾಶೀಃ ಸ್ಯಾಜ್ಜಿತೇಂದ್ರಿಯಃ |
ತತಃ ಸಮಾಂತೇ ತಾಂ ಮೂರ್ತಿಂ ಸಮಭ್ಯರ್ಚ್ಯ ವಿಧಾನತಃ || ೬೩ ||

ಗುರವೇ ಧೇನುಸಹಿತಾಂ ದದ್ಯಾತ್ಸಂಪ್ರಾರ್ಥಯೇತ್ತಥಾ |
ಶತಜನ್ಮಸು ಯತ್ಕಿಂಚಿನ್ಮಯಾ ಖಂಡವ್ರತಂ ಕೃತಂ || ೬೪ ||

ಭಗವಂಸ್ತ್ವತ್ಪ್ರಸಾದೇನ-ತದಖಂಡಮಿಹಾಸ್ತು ಮೇ |
ತತಃ ಸಂಭೋಜ್ಯ ವಿಪ್ರಾಗ್ರ್ಯಾನ್ಸಖಂಡಾಢ್ಯೈಸ್ತು ಪಾಯಸೈಃ || ೬೫ ||

ದ್ವಾದಶೈವ ಹಿ ಸೌವರ್ಣೀಂ ದಕ್ಷಿಣಾಂ ಪ್ರದದೇನ್ನಮೇತ್ |
ಇತಿ ಕೃತ್ವಾ ವ್ರತಂ ವಿಪ್ರ ಪ್ರೀಣಯಿತ್ವಾ ಜನಾರ್ದನಂ || ೬೬ ||

ಸೌವರ್ಣೇನ ವಿಮಾನೇನ ಯಾತಿ ವಿಷ್ಣೋಃ ಪರಂ ಪದಂ |
ಪೌಷಸ್ಯ ಕೃಷ್ಣದ್ವಾದಶ್ಯಾಂ ರೂಪವ್ರತಮುದೀರಿತಂ || ೬೭ ||

---

ವರ್ಷದ ಕೊನೆಯಲ್ಲಿ ಆ ಮೂರ್ತಿಯನ್ನು ವಿಧಿವತ್ತಾಗಿ ಪೂಜಿಸಿ ಅದನ್ನು ಗೋಸಹಿತವಾಗಿ ಗುರುಗಳಿಗೆ ದಾನಮಾಡಬೇಕು. ಹಾಗೆಯೇ 'ಭಗವಂತನೇ! ನೂರು ಜನ್ಮಗಳಲ್ಲಿ ಸ್ವಲ್ಪವಾಗಿ ನನ್ನಿಂದ ಆಚರಿಸಲ್ಪಟ್ಟ ಖಂಡವ್ರತವೇ ನಿನ್ನ ಅನುಗ್ರಹದಿಂದ ಇಲ್ಲಿ ಅಖಂಡವಾಗಿ ಪರಿಣಮಿಸಲಿ' ಎಂದು ಪ್ರಾರ್ಥಿಸಬೇಕು. ತರುವಾಯ ಶ್ರೇಷ್ಠರಾದ ಹನ್ನೆರಡು ಬ್ರಾಹ್ಮಣರಿಗೆ ಸಕ್ಕರೆಯ ಪಾಯಸಗಳಿಂದ ಭೋಜನಮಾಡಿಸಿ, ಸುವರ್ಣದ ದಕ್ಷಿಣೆಯನ್ನು ಕೊಟ್ಟು ನಮಸ್ಕರಿಸಬೇಕು.

ಈರೀತಿಯಾಗಿ ವ್ರತವನ್ನಾಚರಿಸಿ ಜನಾರ್ದನನನ್ನು ಸಂತೋಷಪಡಿಸಿದ ಮನುಷ್ಯನು ಸುವರ್ಣವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಪ್ರಯಾಣ ಮಾಡುವನು.

ಪುಷ್ಯ ಕೃಷ್ಣ ದ್ವಾದಶಿಯ ದಿನದಲ್ಲಿ ರೂಪವ್ರತವು ವಿಹಿತವಾಗಿದೆ.

ದಶಮ್ಯಾಂ ವಿಧಿವತ್ ಸ್ನಾತ್ವಾ ಗೃಹ್ಣೀಯಾದ್ಗೋಮಯಂ ವ್ರತೀ |
ಶ್ವೇತಾಯಾ ವೈಕವರ್ಷಾಯಾ ಅಂತರಿಕ್ಷಗತಂ ದ್ವಿಜ || ೬೮ ||

ಅಷ್ಟೋತ್ತರಶತಂ ತೇನ ಪಿಂಡಿಕಾಃ ಕಲ್ಪ್ಯ ನಾರದ |
ಶೋಷಯೇದಾತಪೇ ಧೃತ್ವಾ ಪಾತ್ರೇ ತಾಮ್ರೇಥ ಮೃನ್ಮಯೇ || ೬೯ ||

ಏಕಾದಶ್ಯಾಂ ಸೋಪವಾಸಃ ಸಮಭ್ಯರ್ಚ್ಯ ವಿಧಾನತಃ |
ಸೌವರ್ಣೀಂ ಪ್ರತಿಮಾಂ ವಿಷ್ಣೋರ್ನಿಶಾಯಾಂ ಜಾಗರಂ ಚರೇತ್ || ೭೦ ||

ಸುಮಂಗಲೈರ್ಗೀತವಾದ್ಯೈಃ ಸ್ತೋತ್ರಪಾಠೈರ್ಜಪಾದಿಭಿಃ |
ತತಃ ಪ್ರಭಾತೇ ದ್ವಾದಶ್ಯಾಂ ತಿಲಪಾತ್ರೋಪರಿ ಸ್ಥಿತಾಂ || ೭೧ ||

ಅಂಬುಪೂರ್ಣೇ ಘಟೇ ನ್ಯಸ್ಯ ಪೂಜಯೇದುಪಚಾರಕೈಃ |
ತತೋಗ್ನಿಂ ನವಮುತ್ಪಾದ್ಯ ಕಾಷ್ಠಸಂಘರ್ಷಣಾದಿಭಿಃ || ೭೨ ||

---

೬೮-೭೪. ಅದರ ವಿಧಾನ:—ವ್ರತಿಯು ದಶಮಿಯ ದಿನದಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಒಂದುವರ್ಷದ ಶುಕ್ಲಗೋವಿನ ಸಗಣಿಯನ್ನು ನೆಲದಲ್ಲಿ ಬೀಳದಂತೆ ಮೇಲೆಯೇ ತೆಗೆದುಕೊಂಡು ಅದರಿಂದ ನೂರೆಂಟು ಉಂಡೆಗಳನ್ನು ಮಾಡಿ, ಅವನ್ನು ಬಿಸಲಿನಲ್ಲಿ ಒಣಗಿಸಿ ತಾಮ್ರ ಅಥವಾ ಮಣ್ಣಿನ ಪಾತ್ರೆಯಲ್ಲಿಡಬೇಕು. ಏಕಾದಶಿಯ ದಿನದಲ್ಲಿ ಉಪವಾಸದಿಂದ ವಿಧಾನೋಕ್ತಪ್ರಕಾರವಾಗಿ ಬಂಗಾರದ ವಿಷ್ಣುಪ್ರತಿಮೆಯನ್ನು ಪೂಜಿಸಿ ಆರಾತ್ರಿ ಮಂಗಳಗಾನ, ವಾದ್ಯ, ಸ್ತೋತ್ರಪಾಠ ಮತ್ತು ಜಪ ಮುಂತಾದುವುಗಳಿಂದ ಜಾಗರಣೆಮಾಡಬೇಕು. ತರುವಾಯ ದ್ವಾದಶಿಯ ಬೆಳಗ್ಗೆ ತಿಲಪಾತ್ರೆಯಮೇಲಿಟ್ಟಿದ್ದ ಪ್ರತಿಮೆಯನ್ನು ನೀರುತುಂಬಿದ ಕಲಶದಮೇಲಿಟ್ಟು ಉಪಚಾರಗಳಿಂದ ಪೂಜಿಸಬೇಕು. ಆನಂತರ ಕಾಷ್ಠಸಂಘರ್ಷಣೆ ಮುಂತಾದುವುಗಳಿಂದ ನೂತನವಾಗಿ ಅಗ್ನಿಯನ್ನು

ತಂ ಸಮಭ್ಯರ್ಚ್ಯ ವಿಧಿವದೇಕೈಕಾಂ ಪಿಂಡಿಕಾಂ ಸುಧೀಃ ।
ಹೋಮಯೇತ್ಸತಿಲಾಜ್ಯಾಂ ಚ ದ್ವಾದಶಾಕ್ಷರವಿದ್ಯಯಾ ॥ ೭೩ ॥

ವೈಷ್ಣವ್ಯಾಥ ಚ ಪೂರ್ತ್ಯಾರ್ಥ ಚ ಶತಮಷ್ಟೋತ್ತರಂ ತತಃ ।
ಭೋಜಯೇತ್ಪಾಯಸೈರ್ವಿಪ್ರಾನ್ಪ್ರೀತ್ಯಾ ಸುಸ್ನಿಗ್ಧಮಾನಸಃ ॥ ೭೪ ॥

ಸಹಿತಾಂ ಚ ಘಟೇನೈವ ಪ್ರತಿಮಾಂ ಗುರವೇರ್ಪಯೇತ್ ।
ವಿಪ್ರೇಭ್ಯೋ ದಕ್ಷಿಣಾಂ ಶಕ್ತ್ಯಾ ದತ್ವಾ ನತ್ವಾ ವಿಸರ್ಜಯೇತ್ ।
ನರೋ ವಾ ಯದಿ ವಾ ನಾರೀ ವ್ರತಂ ಕೃತ್ವೈವಮಾದರಾತ್ ॥ ೭೫ ॥

ಲಭತೇ ರೂಪಸೌಭಾಗ್ಯಂ ನಾತ್ರ ಕಾರ್ಯಾ ವಿಚಾರಣಾ ।
ಸಹಸ್ಯೇ ಶುಕ್ಲಪಕ್ಷೇತು ಸುಜನ್ಮದ್ವಾದಶೀವ್ರತಂ ॥ ೭೬ ॥

---

ನಿರ್ಮಾಣಮಾಡಿ, ವಿಧಿವತ್ತಾಗಿ ಅದನ್ನು ಪೂಜಿಸಿ, ಅದರಲ್ಲಿ ದಶಮಿಯ ದಿನದಲ್ಲಿ ಮಾಡಿಟ್ಟಿದ್ದ ಒಂದೊಂದು ಗೋಮಯಪಿಂಡವನ್ನೂ ಎಳ್ಳು, ತುಪ್ಪಸಹಿತವಾಗಿ ವೈಷ್ಣವ ದ್ವಾದಶಾಕ್ಷರ ವಿದ್ಯೆಯಿಂದ ಹೋಮಮಾಡುತ್ತಾ ನೂರೆಂಟು ಉಂಡೆಗಳನ್ನೂ ಸಂಪೂರ್ಣವಾಗಿ ಹೋಮಮಾಡಬೇಕು. ಅನಂತರ ಸ್ನಿಗ್ಧ ಮನಸ್ಕನಾಗಿ ಆದರಪೂರ್ವಕವಾಗಿ ಬ್ರಾಹ್ಮಣರಿಗೆ ಪಾಯಸಗಳಿಂದ ಭೋಜನ ಮಾಡಿಸಬೇಕು.

೭೫-೭೬. ಬಳಿಕ ಪೂಜಿತವಾದ ಸುವರ್ಣಪ್ರತಿಮೆಯನ್ನು ಕುಂಭ ಸಹಿತವಾಗಿ ಗುರುಗಳಿಗೆ ಸಮರ್ಪಿಸಬೇಕು. ಬ್ರಾಹ್ಮಣರಿಗೆ ದಕ್ಷಿಣೆಕೊಟ್ಟು ನಮಸ್ಕರಿಸಿ ವಿಸರ್ಜನೆ ಮಾಡಬೇಕು.

ಪುರುಷ ಅಥವಾ ಸ್ತ್ರೀಯು ಈರೀತಿಯಾಗಿ ಭಕ್ತಿಯಿಂದ ವ್ರತವನ್ನು ಮಾಡಿದರೆ ರೂಪಸೌಭಾಗ್ಯವನ್ನು ಹೊಂದುವರು. ಈ ವಿಷಯದಲ್ಲಿ ಸಂಶಯಪಡಬಾರದು.

ಮಾರ್ಗಶೀರ್ಷ ಶುಕ್ಲಪಕ್ಷ ದ್ವಾದಶಿಯ ದಿನದಲ್ಲಿ ಸುಜನ್ಮ ದ್ವಾದಶೀ ವ್ರತವು ವಿಹಿತವಾಗಿದೆ.

ತತ್ರ ಸ್ನಾತ್ವಾ ವಿಧಾನೇನ ಗೃಹ್ಣೀಯಾದ್ವಾರ್ಷಿಕವ್ರತಂ ।
ಪೀತ್ವಾ ಗೋಶೃಂಗವಾರ್ಯಾದೌ ತಾಂ ಚ ಕೃತ್ವಾ ಪ್ರದಕ್ಷಿಣಂ ॥ ೭೭ ॥

ಪ್ರತಿಮಾಸಂ ತತಃ ಶುಕ್ಲೇ ದ್ವಾದಶ್ಯಾಂ ದಾನಮಾಚರೇತ್ ।
ಘೃತಂ ಪ್ರಸ್ಥಂ ತಚ್ಚತುಷ್ಕಂ ಕ್ರಮಾದ್ವ್ರೀಹೇರ್ಯವಸ್ಯ ಚ ॥ ೭೮ ॥

ದ್ವಿರಕ್ತಿಕಂ ಹೇಮತಿಲಾಢಕಾರ್ಧಂ ಪಯಸಾಂ ಘಟಂ ।
ರೌಪ್ಯಸ್ಯ ಮಾಷಮೇಕಂ ಚ ತೃಪ್ತಿಕೃನ್ಮಿಷ್ಟಪಕ್ವಕಂ ॥ ೭೯ ॥

ಛತ್ರಂ ಮಾಷಾರ್ಧಹೇಮ್ನಶ್ಚ ಪ್ರಸ್ಥಂ ಫಾಣಿತಮುತ್ತಮಂ ।
ಚಂದನಂ ಪಲಿಕಂ ವಸ್ತ್ರಂ ಪಂಚಹಸ್ತೋನ್ಮಿತಂ ತನುಂ ॥ ೮೦ ॥

ಏವಂ ತು ಮಾಸಿಕಂ ದಾನಂ ಕೃತ್ವಾ ಪ್ರಾಶ್ಯ ಯಥಾಕ್ರಮಂ ।
ಗೋಮೂತ್ರಂ ಜಲಮಾಜ್ಯಂ ವಾ ಪಕ್ವಾನ್ನ ಶಾಕಂ ಚತುರ್ವಿಧಂ ॥ ೮೧ ॥

---

೭೭-೮೦. ಆ ದಿನದಲ್ಲಿ ಸ್ನಾನಮಾಡಿ ವಿಧಾನೋಕ್ತಪ್ರಕಾರವಾಗಿ ವಾರ್ಷಿಕ ವ್ರತವನ್ನು ಸ್ವೀಕರಿಸಬೇಕು. ಗೋಶೃಂಗೋದಕಾದಿಗಳನ್ನು ಪಾನ ಮಾಡಿ, ಅದನ್ನು ಪ್ರದಕ್ಷಿಣೆಮಾಡಿ ಪ್ರತಿಮಾಸದ ಶುಕ್ಲ ದ್ವಾದಶಿಯಲ್ಲಿಯೂ ದಾನಮಾಡಬೇಕು.

ಒಂದುಬಳ್ಳ ಘೃತ, ಅದರ ನಾಲ್ಕರಷ್ಟು ಬತ್ತ ಮತ್ತು ಗೋಧಿ, ಎರಡು ಗುಂಜಿ ಬಂಗಾರ, ಅರ್ಧಕೊಳಗ ಎಳ್ಳು, ಹಾಲು ತುಂಬಿದ ತಂಬಿಗೆ, ಒಂದು ಮಾಷದಷ್ಟು ಬೆಳ್ಳಿ, ತೃಪ್ತಿಕರವಾದ ಪಕ್ವಾನ್ನ, ಅರ್ಧಮಾಷ ಸುವರ್ಣದ ಛತ್ರಿ, ಒಂದುಬಳ್ಳ ಒಳ್ಳೆಯ ಕಲ್ಲುಸಕ್ಕರೆ, ಗಂಧ, ಪಲಿಕ, ವಸ್ತ್ರ, ಐದು ಹಸ್ತಪರಿಮಿತ ಚರ್ಮ ಇವುಗಳನ್ನು ದಾನಮಾಡಬೇಕು.

೮೧-೮೨. ಈರೀತಿ ಮಾಸಿಕದಾನಮಾಡಿ ಕ್ರಮವಾಗಿ ಗಂಜಲ, ಜಲ, ಅಥವಾ ತುಪ್ಪವನ್ನು ಪ್ರಾಶನಮಾಡಿ ನಾಲ್ಕುವಿಧಶಾಕಗಳ ಪಲ್ಯ, ಮೊಸರು,

ದಧಿಯುಕ್ತಂ ಚ ಯಾವಾನ್ನಂ ತಿಲಾಜ್ಯಂ ಶರ್ಕರಾನ್ವಿತಂ ।
ದರ್ಭಾಂಬುಕ್ಷೀರಮುದಿತಂ ಪ್ರಾಶನಂ ಪ್ರತಿಮಾಸಿಕಂ ॥ ೮೨ ॥

ಏವಂ ಕೃತವ್ರತೋ ವರ್ಷೇ ಸೌವರ್ಣೀಂ ಪ್ರತಿಮಾಂ ರವೇಃ ।
ಕೃತ್ವಾ ವೈ ತಾಮ್ರಪತ್ರಸ್ಥಾಂ ನ್ಯಸ್ಯಾಭ್ಯರ್ಚ್ಯ ವಿಧಾನತಃ ॥ ೮೩ ॥

ಗುರವೇ ಧೇನುಸಹಿತಾಂ ಪ್ರತ್ಯರ್ಪ್ಯ ಪ್ರಣಮೇತ್ಪರಃ ।
ವಿಪ್ರಾನ್ ದ್ವಾದಶ ಸಂಭೋಜ್ಯ ತೇಭ್ಯೋ ದದ್ಯಾಚ್ಚ ದಕ್ಷಿಣಾಂ ॥ ೮೪ ॥

ಏವಂ ಕೃತವ್ರತೋ ವಿಪ್ರ ಜನ್ಮಾಪ್ನೋತ್ಯುತ್ತಮೇ ಕುಲೇ ।
ನೀರೋಗೋ ಧನಧಾನ್ಯಾಢ್ಯೋ ಭವೇಚ್ಚಾವಿಕಲೇಂದ್ರಿಯಃ ॥ ೮೫ ॥

---

ಎಳ್ಳು, ತುಪ್ಪ, ಸಕ್ಕರೆ ಇವುಗಳಿಂದ ಕೂಡಿದ ಗೋಧಿಯ ಅನ್ನ ಇವುಗಳನ್ನು ಭೋಜನಮಾಡಬೇಕು

ಪ್ರತಿಮಾಸದ ದ್ವಾದಶಿಯಲ್ಲಿಯೂ ದರ್ಭಜಲಹಾಲುಗಳ ಪ್ರಾಶನವು ವಿಹಿತವಾಗಿದೆ.

೮೩-೮೫. ಈರೀತಿ ಒಂದುವರ್ಷವ್ರತವನ್ನಾಚರಿಸಿದಮೇಲೆ ಬಂಗಾರದ ಸೂರ್ಯಪ್ರತಿಮೆಯನ್ನು ಮಾಡಿಸಿ ತಾಮ್ರ ಪಾತ್ರೆಯಲ್ಲಿ ಅದನ್ನು ವಿಧಾನೋಕ್ತ ಪ್ರಕಾರವಾಗಿ ಪೂಜಿಸಿ ಗೋವಿನಸಹಿತವಾಗಿ ಅದನ್ನು ಗುರುಗಳಿಗೆ ಸಮರ್ಪಿಸಿ ನಮಸ್ಕಾರಮಾಡಬೇಕು. ಬಳಿಕ ಹನ್ನೆರಡುಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ದಕ್ಷಿಣೆಯನ್ನು ಕೊಡಬೇಕು.

ಈರೀತಿ ವ್ರತವನ್ನಾಚರಿಸಿದ ಮನುಷ್ಯನು ಉತ್ತಮ ಕುಲದಲ್ಲಿ ಜನ್ಮ ತಾಳುವನು ಮತ್ತು ನೀರೋಗನು, ಧನಧಾನ್ಯಸಂಪನ್ನನು, ಇಂದ್ರಿಯವೈಕಲ್ಯ ವಿಲ್ಲದವನೂ ಆಗುವನು.

ಮಾಘಸ್ಯ ಶುಕ್ಲದ್ವಾದಶ್ಯಾಂ ವಿಷ್ಣುಚಿಂತನತತ್ಪರಃ　　॥ ೮೬ ॥

ವೈಷ್ಣವಂ ಲಭತೇ ಧಾಮ ಭುಕ್ತ್ವಾ ಭೋಗಾನಿಹೇಪ್ಸಿತಾನ್ ।
ಅಂತ್ಯೇ ಸಿತಾಯಾಂ ದ್ವಾದಶ್ಯಾಂ ಸೌವರ್ಣೀಂ ಪ್ರತಿಮಾಂ ಹರೇಃ॥ ೮೭ ॥

ಅಭ್ಯರ್ಚ್ಯ ಗಂಧಪುಷ್ಪಾದ್ಯೈರ್ದದ್ಯಾದ್ವೇದವಿದೇ ದ್ವಿಜ ।
ದ್ವಿಷಟ್ಕಸಂಖ್ಯಾನ್ವಿಪ್ರಾಂಶ್ಚ ಭೋಜಯಿತ್ವಾ ಚ ದಕ್ಷಿಣಾಂ　　॥ ೮೮ ॥

ದತ್ವಾ ವಿಸರ್ಜಯೇತ್ಪಶ್ಚಾತ್ಸ್ವಯಂ ಭುಂಜೀತ ಬಾಂಧವೈಃ ।
ತ್ರಿಸ್ಪೃಶೋನ್ಮೀಲನೀ ಪಕ್ಷವರ್ಧಿನೀ ವಂಜುಲೀ ತಥಾ ।　　॥ ೮೯ ॥

ಜಯಾ ಚ ವಿಜಯಾ ಚೈವ ಜಯಂತೀ ಚಾಪರಾಜಿತಾ ।
ಏತಾ ಅಷ್ಟೌ ಸದೋಪೋಷ್ಯಾ ದ್ವಾದಶ್ಯಃ ಪಾಪಹಾರಿಕಾಃ　　॥ ೯೦ ॥

---

೮೬-೯೦. ಮಾಘಶುಕ್ಲದ್ವಾದಶಿಯ ದಿನದಲ್ಲಿ ವಿಷ್ಣುಧ್ಯಾನನಿರತನಾದವನು ಇಲ್ಲಿ ಅಪೇಕ್ಷಿಸಿದ ಭೋಗಗಳನ್ನೆಲ್ಲಾ ಅನುಭವಿಸಿ, ವಿಷ್ಣುಧಾಮ ಎಂದರೆ ವೈಕುಂಠವನ್ನು ಹೊಂದುವನು.

ಫಾಲ್ಗುಣ ಶುಕ್ಲ ದ್ವಾದಶಿಯ ದಿನದಲ್ಲಿ ಬಂಗಾರದ ಹರಿಯ ಪ್ರತಿಮೆಯನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ, ವೇದಜ್ಞಾನಿಯಾದ ಬ್ರಾಹ್ಮಣನಿಗೆ ಅದನ್ನು ದಾನಮಾಡಬೇಕು. ಬಳಿಕ ಹನ್ನೆರಡುಬ್ರಾಹ್ಮಣರಿಗೆ ಭೋಜನ ಮಾಡಿಸಿ ದಕ್ಷಿಣೆಯನ್ನು ಕೊಟ್ಟು ವಿಸರ್ಜನೆಮಾಡಬೇಕು. ಅನಂತರ ಬಂಧುಗಳ ಸಹಿತವಾಗಿ ತಾನು ಭೋಜನಮಾಡಬೇಕು.

ತ್ರಿಸ್ಪೃಶಾ, ಉನ್ಮೀಲಿನೀ, ಪಕ್ಷವರ್ಧಿನೀ, ವಂಜುಲೀ, ಜಯಾ, ವಿಜಯಾ, ಜಯಂತೀ ಮತ್ತು ಅಪರಾಜಿತಾ ಎಂಬೀ ಎಂಟು ದ್ವಾದಶಿಗಳು ಪಾಪಪರಿಹಾರಕಗಳು. ಆದಿನಗಳಲ್ಲಿ ಯಾವಾಗಲೂ ಉಪವಾಸ ಮಾಡಬೇಕು.

### ಶ್ರೀನಾರದ ಉವಾಚ

ಕೀದೃಶಂ ಲಕ್ಷಣಂ ಬ್ರಹ್ಮನ್ನೇತಾಸಾಂ ಕಿಂ ಫಲಂ ತಥಾ ।
ತತ್ಸರ್ವಂ ಮೇ ಸಮಾಚಕ್ಷ್ವ ಯಾಶ್ಚಾನ್ಯಾಃ ಪುಣ್ಯದಾಯಿಕಾಃ ॥ ೯೧ ॥

### ಸೂತ ಉವಾಚ

ಇತ್ಥಂ ಸನಾತನಃ ಪೃಷ್ಟೋ ನಾರದೇನ ದ್ವಿಜೋತ್ತಮಾಃ ।
ಪ್ರಶಸ್ಯ ಭ್ರಾತರಂ ಪ್ರಾಹ ಮಹಾಭಾಗವತಂ ಮುನಿಃ ॥ ೯೨ ॥

### ಸನಾತನ ಉವಾಚ

ಸಾಧು ಪೃಷ್ಟಂ ತ್ವಯಾ ಭ್ರಾತಃ ಸಾಧೂನಾಂ ಸಂಶಯಚ್ಛಿದಾ ।
ವಕ್ಷ್ಯೇ ಮಹಾದ್ವಾದಶೀನಾಂ ಲಕ್ಷಣಂ ಚ ಫಲಂ ಪೃಥಕ್ ॥ ೯೩ ॥

---

೯೧. ನಾರದನು ಹೇಳಿದನು:—ಸನಾತನನೇ ! ಈ ದ್ವಾದಶಿಗಳಿಗೇನು ಲಕ್ಷಣ? ಅವುಗಳ ಅನುಷ್ಠಾನದಿಂದಾಗುವ ಫಲವೇನು ? ಅವೆಲ್ಲವನ್ನೂ ಮತ್ತು ಇತರ ಪುಣ್ಯದಾಯಕದ್ವಾದಶಿಗಳನ್ನೂ ಸಹ ನನಗೆ ಹೇಳು.

೯೨. ಸೂತನು ಹೇಳಿದನು:-ಶೌನಕಾದಿ ಬ್ರಾಹ್ಮಣಶ್ರೇಷ್ಠರೇ ! ಈರೀತಿಯಾಗಿ ಕೇಳಿದ ನಾರದನ ಪ್ರಶ್ನೆಯನ್ನು ಲಾಲಿಸಿ ಸನಾತನಮುನಿಯು ಅದನ್ನು ಪ್ರಶಂಸೆಮಾಡಿ ಮಹಾಭಗವದ್ಭಕ್ತನು, ಭ್ರಾತೃವೂ ಆದ ನಾರದನನ್ನು ಕುರಿತು ಮಾತನಾಡಿದನು.

೯೩. ಸನಾತನನು ಹೇಳಿದನು:—ಸಹೋದರನೇ ! ಒಳ್ಳೆಯ ಪ್ರಶ್ನೆಯನ್ನು ಮಾಡಿರುವೆ. ಇದು ಸಾಧುಗಳ ಸಂಶಯವನ್ನು ಪರಿಹರಿಸುತ್ತದೆ. ಮಹಾದ್ವಾದಶಿಗಳ ಲಕ್ಷಣ ಮತ್ತು ಪ್ರತ್ಯೇಕವಾಗಿ ಒಂದೊಂದರ ಫಲಗಳನ್ನು ಹೇಳುವೆನು.

ಏಕಾದಶೀ ನಿವೃತ್ತಾ ಚೇತ್ಸೂರ್ಯಸ್ಯೋದಯತಃ ಪುರಾ ।
ತದಾ ತು ತ್ರಿಸ್ಪೃಶಾ ನಾಮ ದ್ವಾದಶೀ ಸಾ ಮಹಾಫಲಾ ॥ ೯೪ ॥

ಅಸ್ಯಾಮುಪೋಷ್ಯ ಗೋವಿಂದಂ ಯಃ ಪೂಜಯತಿ ನಾರದ ।
ಅಶ್ವಮೇಧಸಹಸ್ರಸ್ಯ ತತ್ಫಲಂ ಲಭತೇ ಧ್ರುವಂ ॥ ೯೫ ॥

ಯದಾರುಣೋದಯೇ ವಿದ್ಧಾ ದಶಮ್ಯೈಕಾದಶೀ ತಿಥಿಃ ।
ತದಾ ತಾಂ ಸಂಪರಿತ್ಯಜ್ಯ ದ್ವಾದಶೀಂ ಸಮುಪೋಷಯೇತ್ ॥ ೯೬ ॥

ತತ್ರೇಷ್ಟ್ವಾ ವಾಸುದೇವಾಖ್ಯಂ ಸಮ್ಯಕ್ಪೂಜಾವಿಧಾನತಃ ।
ರಾಜಸೂಯಸಹಸ್ರಸ್ಯ ಫಲಮುನ್ಮೀಲಿತೇ ಲಭೇತ್ ॥ ೯೭ ॥

---

೯೪-೯೫. ಸೂರ್ಯೋದಯಕ್ಕೆ ಮುಂಚಿತವಾಗಿ ಏಕಾದಶೀತಿಥಿಯು ಕಳೆದುಹೋಗಿದ್ದರೆ ಆಗಿನ ದ್ವಾದಶಿಯು ತ್ರಿಸ್ಪೃಶಾ ಎನಿಸುವುದು. ಇದು ಮಹಾಫಲಕಾರಿಯು.

ಈ ದಿನದಲ್ಲಿ ಉಪವಾಸಮಾಡಿ ಗೋವಿಂದನನ್ನು ಪೂಜಿಸುವ ಮನುಷ್ಯನು ಸಾವಿರ ಅಶ್ವಮೇಧಗಳ ಫಲವನ್ನು ಖಂಡಿತವಾಗಿ ಹೊಂದುವನು.

೯೬. ಏಕಾದಶೀ ತಿಥಿಯು ಅರುಣೋದಯ ಕಾಲದಲ್ಲಿ ದಶಮೀವೇಧ ಯುಕ್ತವಾದಾಗ ಆ ದಿನವನ್ನು ಬಿಟ್ಟು ದ್ವಾದಶಿಯ ದಿನ ಉಪವಾಸ ಮಾಡಬೇಕು.

೯೭. ಆದಿನದಲ್ಲಿ ವಾಸುದೇವನನ್ನು ವಿಧಾನಾನುಸಾರವಾಗಿ ಚೆನ್ನಾಗಿ ಪೂಜೆಮಾಡಿದರೆ ಸಾವಿರ ರಾಜಸೂಯಯಾಗಗಳ ಫಲಬರುತ್ತದೆ. ಇದೇ ಉನ್ಮೀಲನೀ ದ್ವಾದಶಿಯು.

ಯದೋದಯೇ ತು ಸವಿತುರ್ಯಾಮ್ಯಾ ತ್ವೇಕಾದಶೀಂ ಸ್ಪೃಶೇತ್ ।
ತದಾ ವಂಜುಲಕಾಖ್ಯಾಂ ತು ತಾಂ ತ್ಯಕ್ತ್ವೋಪೋಷಯೇತ್ಸದಾ ॥ ೯೮ ॥

ಅಸ್ಯಾಂ ಸಂಕರ್ಷಣಂ ದೇವಂ ಗಂಧಾದ್ಯೈರುಪಚಾರಕೈಃ ।
ಪೂಜಯೇತ್ಸತತಂ ಭಕ್ತ್ಯಾ ಸರ್ವಸ್ಯಾಭಯದಂ ಪರಂ ॥ ೯೯ ॥

ಏಷಾ ಮಹಾದ್ವಾದಶೀ ತು ಸರ್ವರ್ತುಸುಫಲಪ್ರದಾ ।
ಸರ್ವಪಾಪಹರಾ ಪ್ರೋಕ್ತಾ ಸರ್ವಸಂಪತ್ಪ್ರದಾಯಿನೀ ॥ ೧೦೦ ॥

ಕುಹೂರಾಕೇ ಯದಾ ವೃದ್ಧೇ ಸ್ಯಾತಾಂ ವಿಪ್ರ ಯದಾ ತದಾ ।
ಪಕ್ಷವರ್ಧನಿಕಾ ನಾಮ ದ್ವಾದಶೀ ಸಾ ಮಹಾಫಲಾ ॥ ೧೦೧ ॥

---

೯೮. ಯಾವ್ಯೆಯು ಸೂರ್ಯೋದಯಕಾಲದಲ್ಲಿ ಏಕಾದಶಿಯ ಸಂಬಂಧವನ್ನು ಹೊಂದಿದಾಗ ಅದನ್ನು ವಂಜುಲಿಕಾ ಎನ್ನುವರು. ಯಾವಾಗಲೂ ಅದನ್ನು ಬಿಟ್ಟು ಉಪವಾಸಮಾಡಬೇಕು.

೯೯. ಈದಿನದಲ್ಲಿ ಎಲ್ಲರಿಗೂ ಅಭಯಪ್ರದನು, ಉತ್ತಮನೂ ಆದ ಸಂಕರ್ಷಣದೇವನನ್ನು ಗಂಧಾದಿ ಉಪಚಾರಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು.

೧೦೦. ಈ ಮಹಾದ್ವಾದಶಿಯು ಕ್ರತುಗಳ ಫಲವನ್ನೂ ಕೊಡುತ್ತದೆ. ಮತ್ತು ಸಕಲಪಾಪಗಳನ್ನೂ ಪರಿಹರಿಸಿ ಸಕಲೈಶ್ವರ್ಯಗಳನ್ನೂ ಕೊಡುತ್ತದೆ.

೧೦೧. ಅಮಾವಾಸ್ಯೆ ಅಥವಾ ಪೂರ್ಣಿಮಾ ತಿಥಿಗಳು ಅಭಿವೃದ್ಧಿಯಾಗಿರುವ ಪಕ್ಷಗಳ ದ್ವಾದಶಿಯು ಪಕ್ಷವರ್ಧನಿಕಾ ಎನಿಸುವುದು. ಇದು ಮಹಾಫಲದಾಯಕವು.

ತಸ್ಯಾಂ ಸಂಪೂಜಯೇದ್ದೇವಂ ಪ್ರದ್ಯುಮ್ನಂ ? ಗತಾಂ ಪತಿಂ |
ಸರ್ವೈಶ್ವರ್ಯಪ್ರದಂ ಸಾಕ್ಷಾತ್ಪುತ್ರಪೌತ್ರವಿವರ್ಧನಂ ॥ ೧೦೨ ॥

ಯದಾ ತು ಧವಲೇ ಪಕ್ಷೇ ದ್ವಾದಶ್ಯಾದಿಮಘಾನ್ವಿತಾ |
ತದಾ ಪ್ರೋಕ್ತಾ ಜಯಾ ನಾಮ ಸರ್ವಶತ್ರುವಿನಾಶಿನೀ ॥ ೧೦೩ ॥

ಅಸ್ಯಾಂ ಸಂಪೂಜಯೇದ್ದೇವಮನಿರುದ್ಧಂ ರಮಾಪತಿಂ |
ಸರ್ವಕಾಮಪ್ರದಂ ನೃಣಾಂ ಸರ್ವಸೌಭಾಗ್ಯದಾಯಕಂ ॥ ೧೦೪ ॥

ಶ್ರವಣರ್ಕ್ಷಯುತಾ ಚೇತ್ಸ್ಯಾತ್ ದ್ವಾದಶೀ ಧವಲೇ ದಲೇ |
ತದಾ ಸಾ ವಿಜಯಾ ನಾಮ ತಸ್ಯಾಮರ್ಚೇದ್ಗದಾಧರಂ ॥ ೧೦೫ ॥

ಸರ್ವಸೌಖ್ಯಪ್ರದಂ ಶಶ್ವತ್ಸರ್ವಭೋಗಪರಾಯಣಂ |
ಸರ್ವತೀರ್ಥಫಲಂ ವಿಪ್ರ ತಾಂ ಚೋಪೋಷ್ಯಾಪ್ನುಯಾನ್ನರಃ ॥ ೧೦೬ ॥

---

೧೦೨. ಆದಿನದಲ್ಲಿ ಜಗದೊಡೆಯನು, ಸಕಲೈಶ್ವರ್ಯದಾಯಕನು, ಪುತ್ರ ಪೌತ್ರಾದಿವಂಶವರ್ಧಕನೂ ಆಗಿರುವ ಪ್ರದ್ಯುಮ್ನದೇವನನ್ನು ಪೂಜಿಸಬೇಕು.

೧೦೩. ಶುಕ್ಲಪಕ್ಷ ದ್ವಾದಶಿಯು ಮಘಾನಕ್ಷತ್ರ ಸಹಿತವಾಗಿದ್ದರೆ ಅದು ಜಯಾನಾಮಕವಾಗುವುದು ಮತ್ತು ಸಕಲಶತ್ರುಗಳನ್ನೂ ನಾಶಪಡಿಸುವುದು.

೧೦೪ ಈದಿನದಲ್ಲಿ ಸಕಲಾಭೀಷ್ಟಪ್ರದನು, ಮನುಷ್ಯರಿಗೆ ಸೌಭಾಗ್ಯ ದಾಯಕನೂ ಆದ, ಲಕ್ಷ್ಮೀಪತಿಯಾದ ಅನಿರುದ್ಧನನ್ನು ಪೂಜಿಸಬೇಕು.

೧೦೫-೧೦೬. ಶುಕ್ಲಪಕ್ಷದ ದ್ವಾದಶಿಯು ಶ್ರವಣನಕ್ಷತ್ರಸಹಿತವಾದಾಗ ಅದು ವಿಜಯಾ ನಾಮಕವಾಗುವುದು ಆ ದಿನದಲ್ಲಿ ಸಕಲಸೌಖ್ಯದಾಯಕನು, ಯಾವಾಗಲೂ ಭೋಗನಿರತನೂ ಆದ ಗದಾಧರನನ್ನು ಪೂಜಿಸಬೇಕು. ಆದಿನ ದಲ್ಲಿ ಉಪವಾಸಮಾಡುವ ಮನುಷ್ಯನು ಸಕಲತೀರ್ಥಫಲಗಳನ್ನೂ ಹೊಂದುವನು.

ಯದಾ ಸ್ಯಾಚ್ಛುಕ್ಲೇ ಸಿತೇ ಪಕ್ಷೇ ಪ್ರಾಜಾಪತ್ಯರ್ಕ್ಷಸಂಯುತಾ ।
ದ್ವಾದಶೀ ಸಾ ಮಹಾಪುಣ್ಯಾ ಜಯಂತೀ ನಾಮತಃ ಸ್ಮೃತಾ ॥ ೧೦೭ ॥

ಯಸ್ಯಾಂ ಸಮರ್ಚಯೇದ್ದೇವಂ ವಾಮನಂ ಸಿದ್ಧಿದಂ ನೃಣಾಂ ।
ಉಪೋಷಿತೈಷಾ ವಿಪ್ರೇಂದ್ರ ಸರ್ವವ್ರತಫಲಪ್ರದಾ ॥ ೧೦೮ ॥

ಸರ್ವದಾನಫಲಾ ಚಾಪಿ ಭುಕ್ತಿಮುಕ್ತಿಪ್ರದಾಯಿನೀ ।
ಯದಾ ತು ಸ್ಯಾತ್ಸಿತೇ ಪಕ್ಷೇ ದ್ವಾದಶೀ ಜೀವಭಾನ್ವಿತಾ ॥ ೧೦೯ ॥

ತದಾಪರಾಜಿತಾ ಪ್ರೋಕ್ತಾ ಸರ್ವಜ್ಞಾನಪ್ರದಾಯಿನೀ ।
ಅಸ್ಯಾಂ ಸಮರ್ಚಯೇದ್ದೇವಂ ನಾರಾಯಣಮನಾಮಯಂ ॥ ೧೧೦ ॥

ಸಂಸಾರಪಾಶವಿಚ್ಛಿತ್ತಿಕಾರಕಂ ಜ್ಞಾನಸಾಗರಂ ।
ಅಸ್ಯಾಂ ತೂಪೋಷಣಾದೇವ ಮುಕ್ತಸ್ಯಾದ್ವಿಪ್ರಭೋಜನಃ ॥ ೧೧೧ ॥

---

೧೦೭. ಶುಕ್ಲಪಕ್ಷ ದ್ವಾದಶಿಯು ಪ್ರಜಾಪತಿದೇವತಾಕ ನಕ್ಷತ್ರ ಸಹಿತವಾದಾಗ ಅದು ಜಯಂತೀ ಎಂದು ವಿಹಿತವಾಗಿದೆ.

೧೦೮. ಆದಿನದಲ್ಲಿ ಮನುಷ್ಯರಿಗೆ ಸಿದ್ಧಿದಾಯಕನಾದ ವಾಮನದೇವನನ್ನು ಪೂಜಿಸಬೇಕು. ಆದಿನ ಉಪವಾಸಮಾಡಿದರೆ ಅದು ಸಕಲವ್ರತ ಫಲಗಳನ್ನೂ ಕೊಡುತ್ತದೆ.

೧೦೯-೧೧೧. ಆ ಉಪವಾಸವ್ರತವು ಸಕಲದಾನಫಲಗಳನ್ನೂ ಭೋಗಮೋಕ್ಷಗಳನ್ನೂ ಸಹ ಕೊಡುತ್ತದೆ. ಶುಕ್ಲಪಕ್ಷ ದ್ವಾದಶಿಯು ಜೀವನಕ್ಷತ್ರ ಯುತವಾದಾಗ ಅದು ಅಪರಾಜಿತಾ ಎಂದು ಉಕ್ತವಾಗಿದೆ. ಅದು ಸಕಲ ಜ್ಞಾನದಾಯಕವು.

ಈದಿನದಲ್ಲಿ ದೋಷರಹಿತನು, ಸಂಸಾರವೆಂಬ ಪಾಶವನ್ನು ಕತ್ತರಿಸುವವನು, ಜ್ಞಾನನಿಧಿಯೂ ಆದ ನಾರಾಯಣದೇವನನ್ನು ಪೂಜಿಸಬೇಕು.

ಈದಿನದಲ್ಲಿ ಉಪವಾಸಮಾಡಿ ಮಾರನೆಯದಿನ ಬ್ರಾಹ್ಮಣಭೋಜನ ಮಾಡಿಸುವವನು ಮುಕ್ತನಾಗುವನು.

ಯದಾ ತ್ವಾಷಾಢಶುಕ್ಲಾಯಾಂ ದ್ವಾದಶ್ಯಾಂ ಮೈತ್ರಭಂ ಭವೇತ್ |
ತದಾ ವ್ರತದ್ವಯಂ ಕಾರ್ಯಂ ನ ದೋಷೋತ್ರೈಕದೈವತಂ || ೧೧೨ ||

ಶ್ರವಣರ್ಕ್ಷಯುತಾಯಾಂ ಚ ದ್ವಾದಶ್ಯಾಂ ಭಾದ್ರಶುಕ್ಲಕೇ |
ಊರ್ಜೇ ಸಿತಾಯಾಂ ದ್ವಾದಶ್ಯಾಮಂತ್ಯಮೇ ಚ ವ್ರತದ್ವಯಂ || ೧೧೩ ||

ಏತಾಭ್ಯೋನ್ಯತ್ರ ವಿಪ್ರೇಂದ್ರ ದ್ವಾದಶ್ಯಾಮೇಕಭಕ್ತಕಂ |
ನಿಸರ್ಗತಃ ಸಮುದ್ದಿಷ್ಟಂ ವ್ರತಂ ಪಾತಕನಾಶನಂ || ೧೧೪ ||

ಏಕಾದಶ್ಯಾಂ ವ್ರತಂ ನಿತ್ಯಂ ದ್ವಾದಶ್ಯಾ ಸಹಿತಂ ಯತಃ |
ನೋದ್ಯಾಪನಮಿಹೋದ್ದಿಷ್ಟಂ ಕರ್ತವ್ಯಂ ಜೀವಿತಾವಧಿ || ೧೧೫ ||

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸಸ್ಥಿತ ದ್ವಾದಶೀವ್ರತಕಥನಂ ನಾಮ ಏಕವಿಂಶತ್ಯಧಿಕಶತತಮೋಽಧ್ಯಾಯಃ

---

೧೧೨. ಆಷಾಢ ಶುಕ್ಲ ದ್ವಾದಶಿಯ ದಿನದಲ್ಲಿ ಮಿತ್ರದೇವತಾಕನಕ್ಷತ್ರವು ಬಂದರೆ ಆಗ ವ್ರತದ್ವಯವನ್ನು ಮಾಡಬೇಕು ಒಂದೇದಿನದಲ್ಲಿ ಏಕದೇವತಾಕಗಳಾದ ಎರಡುವ್ರತಗಳನ್ನು ಮಾಡಿದರೆ ದೋಷವಿಲ್ಲ.

೧೧೩. ಇದರಂತೆಯೇ ಶ್ರವಣನಕ್ಷತ್ರಯುಕ್ತವಾದ ಭಾದ್ರಪದ ಶುಕ್ಲ ದ್ವಾದಶೀ ಮತ್ತು ಕಾರ್ತಿಕ ಫಾಲ್ಗುಣಗಳ ಶುಕ್ಲ ದ್ವಾದಶಿಗಳಲ್ಲಿಯೂ ವ್ರತದ್ವಯವನ್ನಾಚರಿಸಬೇಕು

೧೧೪. ಈ ದ್ವಾದಶಿಗಳ ಹೊರತು ಉಳಿದ ಎಲ್ಲಾ ದ್ವಾದಶಿಗಳಲ್ಲಿಯೂ ಏಕಭುಕ್ತಿಯು ಸಾಮಾನ್ಯವಾಗಿ ಪಾಪನಾಶಕವ್ರತವೆಂದು ವಿಹಿತವಾಗಿದೆ.

೧೧೫. ದ್ವಾದಶೀ ಸಹಿತವಾದ ಏಕಾದಶೀವ್ರತವು ನಿತ್ಯವಾದುದರಿಂದ ಅದಕ್ಕೆ ಉದ್ಯಾಪನೆಯು ಉಕ್ತವಾಗಿಲ್ಲ. ಬದುಕಿರುವವರೆಗೂ ಈ ವ್ರತವನ್ನು ಮಾಡಬೇಕು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳುಗಳ ದ್ವಾದಶೀ ವ್ರತವಿಧಾನನಿರೂಪಣೆಯೆಂಬ ನೂರಿಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

## ದ್ವಾವಿಂಶತ್ಯಧಿಕಶತತಮೋಽಧ್ಯಾಯಃ

### ಸನಾತನ ಉವಾಚ

**ಅಥಾತಃ ಸಂಪ್ರವಕ್ಷ್ಯಾಮಿ ತ್ರಯೋದಶ್ಯಾ ವ್ರತಾನಿ ತೇ ।**
**ಯಾನಿ ಕೃತ್ವಾ ನರೋ ಭಕ್ತ್ಯಾ ಸುಭಗೋ ಜಾಯತೇ ಭುವಿ ॥ ೧ ॥**

**ಮಧೌ ಶುಕ್ಲತ್ರಯೋದಶ್ಯಾಂ ಮದನಂ ಚಂದನಾತ್ಮಕಂ ।**
**ಕೃತ್ವಾ ಸಂಪೂಜ್ಯ ಯತ್ನೇನ ವೀಜಯೇದ್ವ್ಯಜನೇನ ಚ ॥ ೨ ॥**

**ತತಃ ಸಂಕ್ಷುಭಿತಃ ಕಾಮಃ ಪುತ್ರಪೌತ್ರವಿವರ್ಧನಃ ।**
**ಅನಂಗಪೂಜಾಪ್ಯತ್ರೋಕ್ತಾ ತಾಂ ನಿಬೋಧ ಮುನೀಶ್ವರ ॥ ೩ ॥**

---

### ನೂರಿಪ್ಪತ್ತೆರಡನೆಯ ಅಧ್ಯಾಯವು

೧. ಸನಾತನನು ಹೇಳಿದನು:—ಲೋಕದಲ್ಲಿ ಯಾವ ವ್ರತಗಳನ್ನು ಮಾಡಿ ಮನುಷ್ಯನು ಶ್ರೀಮಂತನಾಗುವನೋ ಅಂತಹ ತ್ರಯೋದಶೀವ್ರತಗಳನ್ನು ಈಗ ನಿನಗೆ ಹೇಳುವೆನು.

೨. ಚೈತ್ರ ಶುಕ್ಲ ತ್ರಯೋದಶಿಯ ದಿನದಲ್ಲಿ ಗಂಧದಿಂದ ಮನ್ಮಥನ ವಿಗ್ರಹವನ್ನು ಮಾಡಿ ಪ್ರಯತ್ನಪೂರ್ವಕವಾಗಿ ಪೂಜೆಮಾಡಿ ಬೀಸಣಿಗೆಯಿಂದ ಬೀಸಬೇಕು.

೩. ಅದರಿಂದ ಕಾಮನು ಸಂತುಷ್ಟನಾಗಿ ಪುತ್ರಪೌತ್ರವರ್ಧಕನಾಗುವನು. ಮುನೀಶ್ವರನೇ! ಈದಿನದಲ್ಲಿ ಅನಂಗಪೂಜೆಯು ವಿಹಿತವಾಗಿದೆ. ಅದರ ವಿಧಾನವನ್ನೂ ಹೇಳುವೆನು ತಿಳಿ.

ಸಿಂದೂರರಜನೀರಾಗೈಃ ಫಲಕೇನಂಗಮಾಲಿಖೇತ್ ।
ರತಿಪ್ರೀತಿಯುತಂ ಶ್ಲಕ್ಷ್ಣಂ ಪುಷ್ಪಚಾಪೇಷುಧಾರಿಣಂ　　॥ ೪ ॥

ಕಾಮದೇವಂ ವಸಂತಂ ಚ ವಾಜಿವಕ್ತ್ರಂ ವೃಷಧ್ವಜಂ ।
ಮಧ್ಯಾಹ್ನೇ ಪೂಜಯೇದ್ಭಕ್ತ್ಯಾ ಗಂಧಸ್ರಗ್ಭೂಷಣಾಂಶುಕೈಃ　　॥ ೫ ॥

ಭಕ್ಷ್ಯೈರ್ನಾನಾವಿಧೈಶ್ಚಾಪಿ ಮಂತ್ರೇಣಾನೇನ ನಾರದ ।
ನಮೋ ಮಾರಾಯ ಕಾಮಾಯ ಕಾಮದೇವಸ್ಯ ಮೂರ್ತಯೇ　　॥ ೬ ॥

ಬ್ರಹ್ಮವಿಷ್ಣುಶಿವೇಂದ್ರಾಣಾಂ ಮನಃ ಕ್ಷೋಭಕರಾಯ ವೈ ।
ತತಸ್ತಸ್ಯಾಗ್ರತೋ ಭಕ್ತ್ಯಾ ಪೂಜಯೇದಂಗನಾಪತಿಂ　　॥ ೭ ॥

ವಸ್ತ್ರಮಾಲ್ಯವಿಭೂಷಾದ್ಯೈಃ ಕಾಮೋಯಮಿತಿ ಚಿಂತಯೇತ್ ।
ಸಂಪೂಜ್ಯ ದ್ವಿಜದಾಂಪತ್ಯಂ ಗಂಧವಸ್ತ್ರವಿಭೂಷಣೈಃ　　॥ ೮ ॥

೪. ಸಿಂದೂರ ಮತ್ತು ಚಕ್ರವರ್ತೀ ಸೊಪ್ಪುಗಳರಾಗಗಳಿಂದ ಹಲಗೆಯ ಮೇಲೆ ರತಿಪ್ರೀತಿಯುಕ್ತನು, ಸ್ನೇಹಯುಕ್ತನು, ಪುಷ್ಪಬಾಣಧನುಸ್ಸುಗಳನ್ನು ಧರಿಸಿರುವವನೂ ಆಗಿರುವ ಅನಂಗನ ವಿಗ್ರಹವನ್ನು ಬರೆಯಬೇಕು.

೫-೬. ಬಳಿಕ ಮಧ್ಯಾಹ್ನಕಾಲದಲ್ಲಿ ಆ ಕಾಮದೇವ, ವಸಂತಮಾಧವ, ಹಯವದನ, ಈಶ್ವರ ಇವರನ್ನು ಗಂಧಮಾಲಿಕೆ, ಆಭರಣ, ವಸ್ತ್ರ ಮತ್ತು ನಾನಾವಿಧಭಕ್ಷ್ಯಗಳಿಂದ ಮುಂದಿನ ಮಂತ್ರವನ್ನು ಹೇಳಿ ಭಕ್ತಿಯಿಂದ ಪೂಜಿಸಬೇಕು.

ಮಂತ್ರ—'ಮನೋಹರನು, ಕಾಮದೇವನ ಪ್ರತಿಮೆಯು, ಬ್ರಹ್ಮ ವಿಷ್ಣು ಶಿವೇಂದ್ರರಿಗೆ ಚಿತ್ತಕ್ಷೋಭಕರನೂ ಆಗಿರುವ ಕಾಮನಿಗೆ ನಮಸ್ಕಾರ.'

ತರುವಾಯ ಆ ಕಾಮದೇವನ ಸನ್ನಿಧಿಯಲ್ಲಿ ಭಕ್ತಿಯಿಂದ ದ್ವಿಜದಂಪತಿಗಳನ್ನು ಇವನೇ ಕಾಮನೆಂದು ಅನುಸಂಧಾನಮಾಡಿ ಗಂಧವಸ್ತ್ರಾಭರಣಗಳಿಂದ ಪೂಜಿಸಬೇಕು.

ಏವಂ ಯಃ ಕುರುತೇ ವಿಪ್ರ ವರ್ಷೇ ವರ್ಷೇ ಮಹೋತ್ಸವಂ |
ವಸಂತಸಮಯೇ ಪ್ರಾಪ್ತೇ ಹೃಷ್ಟಃ ಪುಷ್ಟಃ ಸದೈವ ಸಃ || ೯ ||

ಪ್ರತಿಮಾಸಂ ಪೂಜಯೇದ್ವಾ ಯಾವದ್ವರ್ಷಂ ಸಮಾಪ್ಯತೇ |
ಯದತ್ರ ಹೃದ್ಭವಂ ಕಾಮಂ ಮನ್ಮಥಂ ಚ ರತಿಪ್ರಿಯಂ || ೧೦ ||

ಅನಂಗಂ ಚೈವ ಕಂದರ್ಪಂ ಪೂಜಯೇನ್ಮಕರಧ್ವಜಂ |
ಕುಸುಮಾಯುಧಸಂಜ್ಞಂ ಚ ತತಃ ಪಶ್ಚಾನ್ಮನೋಭವಂ || ೧೧ ||

ವಿಷಮೇಷುಂ ತಥಾ ವಿಪ್ರ ಮಾಲತೀಪ್ರಿಯಮಿತ್ಯಪಿ |
ಅಜಾಯಾ ದಾನಮಪ್ಯುಕ್ತಂ ಸ್ನಾತ್ವಾ ನದ್ಯಾಂ ವಿಧಾನತಃ || ೧೨ ||

ಅಜಾಃ ಪಯಸ್ವಿನೀರ್ದದ್ಯಾದ್ದರಿದ್ರಾಯ ಕುಟುಂಬಿನೇ |
ಭೂಯಸ್ತ್ವನೇನ ದಾನೇನ ಸಲೋಕೇನೈವ ಜಾಯತೇ || ೧೩ ||

---

ಈರೀತಿಯಾಗಿ ವಸಂತಸಮಯದಲ್ಲಿ ಪ್ರತಿವರ್ಷವೂ ಮಹೋತ್ಸವವನ್ನು ಮಾಡುವವನು ಯಾವಾಗಲೂ ಸಂತುಷ್ಟಚಿತ್ತನು ಮತ್ತು ಪುಷ್ಟನೂ ಆಗುವನು.

೧೦-೧೩. ಅಥವಾ ಪ್ರತಿ ತಿಂಗಳ ತ್ರಯೋದಶಿಯಲ್ಲಿಯೂ ವರ್ಷ ಮುಗಿಯುವವರೆಗೂ ಪೂಜಿಸಬೇಕು.

ಈ ವ್ರತದಲ್ಲಿ ಹೃದ್ಭವ, ಕಾಮ, ಮನ್ಮಥ, ರತಿಪ್ರಿಯ, ಅನಂಗ, ಕಂದರ್ಪ, ಮಕರಧ್ವಜ, ಕುಸುಮಾಯುಧ, ಮನೋಭವ, ವಿಷಮೇಷು, ಮತ್ತು ಮಾಲತೀಪ್ರಿಯ ಎಂಬ ನಾಮಧೇಯಗಳಿಂದ ಕಾಮದೇವನನ್ನು ಪೂಜಿಸಬೇಕು.

ಈ ವ್ರತದಲ್ಲಿ ಮೇಕೆಯದಾನವೂ ವಿಹಿತವಾಗಿದೆ. ಯಜಮಾನನು ನದಿಯಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಹಾಲುಕರೆಯುತ್ತಿರುವ ಮೇಕೆಗಳನ್ನು ದರಿದ್ರನು ಮತ್ತು ಕುಟುಂಬಿಯೂ ಆಗಿರುವ ಬ್ರಾಹ್ಮಣನಿಗೆ ದಾನಮಾಡಬೇಕು. ಈ ದಾನಮಾಡಿದವನು ಪುನಃ ಈ ಲೋಕದಲ್ಲಿ ಹುಟ್ಟುವುದಿಲ್ಲ ಎಂದರೆ ಮುಕ್ತನಾಗುವನು.

ಯದೀಯಂ ಶನಿನಾ ಯುಕ್ತಾ ಸಾ ಮಹಾವಾರುಣೀ ಸ್ಮೃತಾ ।
ಗಂಗಾಯಾಂ ಯದಿಲಭ್ಯೇತ ಕೋಟಿಸೂರ್ಯಗ್ರಹಾಧಿಕಾ ॥ ೧೪ ॥

ಶುಭಯೋಗಃ ಶತರ್ಕ್ಷಂ ಚ ಶನೌ ಕಾಮೋ ಮಧೌ ಸಿತೇ ।
ಮಹಾಮಹೇತಿ ವಿಖ್ಯಾತಾ ಕುಲಕೋಟಿವಿಮುಕ್ತಿದಾ ॥ ೧೫ ॥

ರಾಧಶುಕ್ಲತ್ರಯೋದಶ್ಯಾಂ ಕಾಮದೇವವ್ರತಂ ಸ್ಮೃತಂ ।
ತತ್ರ ಗಂಧಾದಿಭಿಃ ಕಾಮಂ ಪೂಜಯೇದುಪವಾಸವಾನ್ ॥ ೧೬ ॥

ಪ್ರತಿಮಾಸಂ ತತಃ ಪಶ್ಚಾತ್ತ್ರಯೋದಶ್ಯಾಂ ಸಿತೇ ದಲೇ ।
ಏವಮೇವ ವ್ರತಂ ಕಾರ್ಯಂ ವರ್ಷಾಂತೇ ಗಾಮಲಂಕೃತಾಂ ॥ ೧೭ ॥

---

೧೪. ಈ ತ್ರಯೋದಶಿಯು ಶನಿವಾರದಿಂದ ಸಹಿತವಾದರೆ ಮಹಾ ವಾರುಣೀ ಎಂದು ಉಕ್ತವಾಗಿದೆ. ಅಂತಹುದು ಗಂಗೆಯ ಸಾನಿಧ್ಯದಲ್ಲಿ ಲಭಿಸಿ ದರೆ ಅದು ಕೋಟಿಸೂರ್ಯಗ್ರಹಣಗಳಿಗಿಂತಲೂ ಹೆಚ್ಚು ಮಹಿಮೆಯುಳ್ಳ ದಾಗುವುದು.

೧೫. ಶನಿವಾರ ಸಹಿತವಾದ, ಚೈತ್ರ ಶುಕ್ಲಪಕ್ಷದ ಕಾಮತ್ರಯೋ ದಶಿಯ ದಿನದಲ್ಲಿ ಶುಭಯೋಗ ಮತ್ತು ಶತತಾರಾನಕ್ಷತ್ರಗಳು ಸಂಭವಿಸಿದರೆ ಅದು ಮಹಾಮಹಾ ಎಂಬುದಾಗಿ ಪ್ರಸಿದ್ಧವಾಗಿದೆ. ಅದನ್ನು ಆಚರಿಸಿದರೆ ಕೋಟಿಕುಲಗಳಿಗೆ ಮುಕ್ತಿಯಾಗುವುದು.

೧೬. ವೈಶಾಖ ಶುಕ್ಲ ತ್ರಯೋದಶಿಯ ದಿನದಲ್ಲಿ ಕಾಮದೇವವ್ರತವು ವಿಹಿತವಾಗಿದೆ. ಆ ವ್ರತದಲ್ಲಿ ಯಜಮಾನನು ಉಪವಾಸವಿದ್ದು ಗಂಧಾದಿ ಗಳಿಂದ ಕಾಮನನ್ನು ಪೂಜಿಸಬೇಕು.

೧೭-೨೨. ಆಮೇಲೆ ಪ್ರತಿತಿಂಗಳಲ್ಲಿಯೂ ಶುಕ್ಲ ತ್ರಯೋದಶಿಯ ದಿವಸ ಇದೇ ರೀತಿಯಾಗಿ ವ್ರತವನ್ನು ಮಾಡಿ, ವರ್ಷಾಂತ್ಯದಲ್ಲಿ ವ್ರತವು ಸಾಂಗವಾಗು

ದದ್ಯಾದ್ವಿಪ್ರಾಯ ಸತ್ಕೃತ್ಯ ವ್ರತಸಾಂಗತ್ವಸಿದ್ಧಯೇ ।
ಜ್ಯೇಷ್ಠಶುಕ್ಲತ್ರಯೋದಶ್ಯಾಂ ದೌರ್ಭಾಗ್ಯಶಮನಂ ವ್ರತಂ ॥ ೧೮ ॥

ತತ್ರ ಸ್ನಾತ್ವಾ ನದೀತೋಯೇ ಪೂಜಯೇಚ್ಛುಚಿದೇಶಜಂ ।
ಶ್ವೇತಮಂದಾರಮರ್ಕಂ ವಾ ಕರವೀರಂ ಚ ರಕ್ತಕಂ ॥ ೧೯ ॥

ನಿರೀಕ್ಷ್ಯ ಗಗನೇ ಸೂರ್ಯಂ ಪ್ರಾರ್ಥಯೇನ್ಮಂತ್ರತಸ್ತದಾ ।
ಮಂದಾರಕರವೀರಾರ್ಕಾ ಭವಂತೋ ಭಾಸ್ಕರಾಂಶಜಾಃ ॥ ೨೦ ॥

ಪೂಜಿತಾ ಮಮ ದೌರ್ಭಾಗ್ಯಂ ನಾಶಯಂತು ನಮೋಽಸ್ತು ವಃ ।
ಇತ್ಥಂ ಯೋಽರ್ಚಯತೇ ಭಕ್ತ್ಯಾ ವರ್ಷೇ ವರ್ಷೇ ದ್ರುಮತ್ರಯಂ ॥ ೨೧ ॥

ನಶ್ಯತೇ ತಸ್ಯ ದೌರ್ಭಾಗ್ಯಂ ನಾತ್ರ ಕಾರ್ಯಾ ವಿಚಾರಣಾ ।
ಶುಚಿಶುಕ್ಲತ್ರಯೋದಶ್ಯಾಮೇಕಭಕ್ತಂ ಸಮಾಚರೇತ್ ॥ ೨೨ ॥

---

ವುದಕ್ಕಾಗಿ ಅಲಂಕರಿಸಲ್ಪಟ್ಟ ಗೋವನ್ನು ಬ್ರಾಹ್ಮಣನಿಗೆ ಸತ್ಕಾರಪೂರ್ವಕವಾಗಿ ದಾನಮಾಡಬೇಕು.

ಜ್ಯೇಷ್ಠ ಶುಕ್ಲ ತ್ರಯೋದಶಿಯ ದಿನದಲ್ಲಿ ದೌರ್ಭಾಗ್ಯಶಮನವೆಂಬ ವ್ರತವು ವಿಹಿತವಾಗಿದೆ. ಆದಿನ ನದಿಯುಜಲದಲ್ಲಿ ಸ್ನಾನವಮಾಡಿ ನಿರ್ಮಲಪ್ರದೇಶದಲ್ಲಿ ಹುಟ್ಟಿದ ಬಿಳಿಯ ಮಂದಾರಪುಷ್ಪ ಅಥವಾ ಅರ್ಕಪುಷ್ಪ ಮತ್ತು ಕೆಂಪು ಕರವೀರಪುಷ್ಪಗಳನ್ನು ಪೂಜಿಸಿ ಅನಂತರ ಆಕಾಶದಲ್ಲಿ ಸೂರ್ಯನನ್ನು ನೋಡಿ ಮುಂದಿನ ಮಂತ್ರವನ್ನು ಹೇಳಿ ಪ್ರಾರ್ಥಿಸಬೇಕು.

ಮಂತ್ರ:—' ಮಂದಾರ, ಅರ್ಕ, ಕರವೀರ ದೇವತೆಗಳೇ! ನೀವು ಸೂರ್ಯನ ಅಂಶದಿಂದ ಜನಿಸಿದವರು. ನನ್ನಿಂದ ಪೂಜಿಸಲ್ಪಟ್ಟ ನೀವು ನನ್ನ ದಾರಿದ್ರ್ಯವನ್ನು ನಾಶಮಾಡಿರಿ ನಿಮಗೆ ನಮಸ್ಕಾರ!' ಈರೀತಿಯಾಗಿ ಪ್ರತಿವರ್ಷವೂ ಭಕ್ತಿಯಿಂದ ಮಂದಾರಾದಿ ಮೂವರನ್ನೂ ಪೂಜಿಸುವವನಿಗೆ ದೌರ್ಭಾಗ್ಯವು ನಾಶವಾಗುವುದು. ಈ ವಿಷಯದಲ್ಲಿ ಸಂಶಯಪಡಬಾರದು.

ಆಷಾಢ ಶುಕ್ಲ ತ್ರಯೋದಶಿಯ ದಿನದಲ್ಲಿ ಏಕಭುಕ್ತವನ್ನಾಚರಿಸಬೇಕು.

ಪೂಜಯಿತ್ವಾ ಜಗನ್ನಾಥಾವುಮಾಮಾಹೇಶ್ವರೀ ತನೂಃ ।
ಹೈಮ್ಯೌ ರೌಪ್ಯೇ ಚ ಮೃನ್ಮಯ್ಯೌ ಯಥಾ ಶಕ್ತ್ಯಾ ವಿಧಾಯ ಚ ॥ ೨೩ ॥

ಸಿಂಹೋಕ್ಷಸ್ಥೇ ದೇವಗೃಹೇ ಗೋಷ್ಠೇ ಬ್ರಾಹ್ಮಣವೇಶ್ಮನಿ ।
ಸ್ಥಾಪಯಿತ್ವಾ ಪ್ರತಿಷ್ಠಾಪ್ಯ ದೈವಮಂತ್ರೇಣ ನಾರದ ॥ ೨೪ ॥

ತತಃ ಪಂಚದಿನಂ ಪೂಜಾ ಚೈಕಭಕ್ತಂ ವ್ರತಂ ತಥಾ ।
ತೃತೀಯದಿವಸೇ ಪ್ರಾತಃ ಸ್ನಾತ್ವಾ ಸಂಪೂಜ್ಯ ತೌ ಪುನಃ ॥ ೨೫ ॥

ಸಮರ್ಪಣೀಯೌ ವಿಪ್ರಾಯ ವೇದವೇದಾಂಗಶಾಲಿನೇ ।
ವರ್ಷೇ ವರ್ಷೇ ತತಃ ಪಶ್ಚಾದ್ವಿಧೇಯಂ ವರ್ಷಪಂಚಕಂ ॥ ೨೬ ॥

ತದಂತೇ ಧೇನುಯುಗ್ಮೇನ ಸಹಿತೌ ತೌ ಪ್ರದಾಪಯೇತ್ ।
ಇತ್ಥಂ ನರೋ ವಾ ನಾರೀ ವಾ ಕೃತ್ವಾ ವ್ರತಮಿದಂ ಶುಭಂ ॥ ೨೭ ॥

---

೨೩-೨೬. ಜಗನ್ನಾಥರಾದ ಪಾರ್ವತೀಪರಮೇಶ್ವರರ ವಿಗ್ರಹಗಳನ್ನು ತನ್ನ ಶಕ್ತ್ಯನುಸಾರವಾಗಿ ಬಂಗಾರ, ಬೆಳ್ಳಿ ಅಥವಾ ಮಣ್ಣಿನಿಂದ ರಚಿಸಿ, ಸಿಂಹೋಕ್ಷಸ್ಥಲ, ದೇವರಮನೆ, ಹಸುವಿನ ಕೊಟ್ಟಿಗೆ ಅಥವಾ ಬ್ರಾಹ್ಮಣಗೃಹದಲ್ಲಿ ಸ್ಥಾಪಿಸಿ ದೈವಮಂತ್ರದಿಂದ ಪ್ರತಿಷ್ಠೆಮಾಡಿ, ಪೂಜಿಸಿ ಆಮೇಲೆ ಐದುದಿನಗಳು ಪೂಜೆ ಮತ್ತು ಏಕಭುಕ್ತಗಳನ್ನಾಚರಿಸಬೇಕು.

ಮೂರನೆಯದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ಆ ಮೂರ್ತಿಗಳನ್ನು ಪುನಃ ಪೂಜೆಮಾಡಿ ವೇದವೇದಾಂಗಜ್ಞಾನಿಯಾದ ಬ್ರಾಹ್ಮಣನಿಗೆ ಸಮರ್ಪಿಸಬೇಕು. ಹೀಗೆಯೇ ಐದುವರ್ಷಗಳಾಗುವವರೆಗೂ ಪ್ರತಿವರ್ಷವೂ ಮಾಡಬೇಕು

೨೭-೩೦. ಕೊನೆಯ ವರ್ಷದಲ್ಲಿ ಆ ಪ್ರತಿಮೆಗಳನ್ನು ಎರಡು ಗೋವುಗಳ ಸಹಿತವಾಗಿ ಬ್ರಾಹ್ಮಣನಿಗೆ ದಾನಮಾಡಬೇಕು ಈರೀತಿ ವ್ರತವನ್ನಾಚರಿಸಿದ ಪುರುಷ ಅಥವಾ ಸ್ತ್ರೀಯು ಏಳುಜನ್ಮಗಳವರೆಗೂ ದಾಂಪತ್ಯ ವಿಚ್ಛೇದವನ್ನು ಹೊಂದುವುದಿಲ್ಲ.

ನೈವ ದಾಂಪತ್ಯವಿಚ್ಛೇದಂ ಲಭತೇ ಸಪ್ತಜನ್ಮಸು ।
ನಭಃ ಶುಕ್ಲತ್ರಯೋದಶ್ಯಾಂ ರತಿಕಾಮವ್ರತಂ ಶುಭಂ ॥ ೨೮ ॥

ವೈಧವ್ಯವಾರಣಂ ಸ್ತ್ರೀಣಾಂ ತಥಾ ಸಂತಾನವರ್ಧನಂ ।
ಕೃತೋಪವಾಸಾ ಕನ್ಯೈವ ನಾರೀ ವಾ ದ್ವಿಜಸತ್ತಮ ॥ ೨೯ ॥

ತಾಮ್ರೇ ವಾ ಮೃನ್ಮಯೇ ವಾಪಿ ಸೌವರ್ಣೇ ರಾಜತೇ ತಥಾ ।
ರತಿಕಾಮೌ ಪ್ರವಿನ್ಯಸ್ಯ ಗಂಧಾದ್ಯೈಃ ಸಮ್ಯಗರ್ಚಯೇತ್ ॥ ೩೦ ॥

ತತಸ್ತು ದ್ವಿಜದಾಂಪತ್ಯಂ ಚತುರ್ದಶ್ಯಾಂ ನಿಮಂತ್ರ್ಯ ಚ ।
ಸತ್ಕೃತ್ಯ ಭೋಜ್ಯ ಪ್ರತಿಮೇ ದದ್ಯಾತ್ತಾಭ್ಯಾಂ ಸದಕ್ಷಿಣೇ ॥ ೩೧ ॥

ಏವಂ ಚತುರ್ದಶಾಬ್ದಂ ಚ ಕೃತ್ವಾ ವ್ರತಮನುತ್ತಮಂ ।
ಧೇನುಯುಗ್ಮಾನ್ವಿತೇ ದೇಯೇ ವ್ರತಸಂಪೂರ್ತಿಹೇತವೇ ॥ ೩೨ ॥

---

ಶ್ರಾವಣ ಶುಕ್ಲ ತ್ರಯೋದಶಿಯ ದಿನದಲ್ಲಿ ಸ್ತ್ರೀಯರಿಗೆ ವೈಧವ್ಯ ಪರಿಹಾರಕವು ಮತ್ತು ಸಂತಾನವರ್ಧಕವೂ ಆದ ಮಂಗಳಕರ ರತಿಕಾಮವ್ರತವನ್ನಾಚರಿಸಬೇಕು.

ಅದರ ವಿಧಾನ:— ಕನ್ಯೆ ಅಥವಾ ನಾರಿಯು ಉಪವಾಸಮಾಡಿ ತಾಮ್ರ ಅಥವಾ ಮಣ್ಣು ಇಲ್ಲವೇ ಬಂಗಾರ ಅಥವಾ ಬೆಳ್ಳಿಯ ರತಿ ಮತ್ತು ಕಾಮನ ವಿಗ್ರಹಗಳನ್ನು ಸ್ಥಾಪಿಸಿ ಗಂಧಾದಿಗಳಿಂದ ಚೆನ್ನಾಗಿ ಪೂಜೆಮಾಡಬೇಕು.

೩೧. ಅನಂತರ ಚತುರ್ದಶಿಯ ದಿನದಲ್ಲಿ ದ್ವಿಜದಂಪತಿಗಳನ್ನು ಆಹ್ವಾನಿಸಿ, ಸತ್ಕಾರಮಾಡಿ, ಅವರಿಗೆ ಭೋಜನಮಾಡಿಸಿ ದಕ್ಷಿಣೆಸಹಿತವಾಗಿ ಆ ಪ್ರತಿಮೆಗಳನ್ನು ಅವರಿಗೆ ಕೊಡಬೇಕು.

೩೨. ಈಪ್ರಕಾರ ಹದಿನಾಲ್ಕುವರ್ಷಗಳಕಾಲ ಸರ್ವೋತ್ತಮವಾದ ಈ ವ್ರತವನ್ನು ಮಾಡಿ ಕೊನೆಯ ವರ್ಷದಲ್ಲಿ ವ್ರತವು ಸಾಂಗವಾಗುವುದಕ್ಕಾಗಿ ಎರಡುಗೋವುಗಳ ಸಹಿತವಾಗಿ ಆ ಪ್ರತಿಮೆಗಳನ್ನು ದಾನಮಾಡಬೇಕು.

ಭಾದ್ರಶುಕ್ಲತ್ರಯೋದಶ್ಯಾಂ ಗೋತ್ರಿರಾತ್ರವ್ರತಂ ಸ್ಮೃತಂ ।
ಲಕ್ಷ್ಮೀನಾರಾಯಣಂ ಕೃತ್ವಾ ಸೌವರ್ಣಂ ವಾಪಿ ರಾಜತಂ ॥ ೩೩ ॥

ಪಂಚಾಮೃತೇನ ಸಂಸ್ನಾಪ್ಯ ಮಂಡಲೇಷ್ಟದಳೇ ಶುಭೇ ।
ಪೀಠೇ ವಿನ್ಯಸ್ಯ ವಸ್ತ್ರಾಢ್ಯಂ ಗಂಧಾದ್ಯೈಃ ಪರಿಪೂಜಯೇತ್ ॥ ೩೪ ॥

ಆರಾರ್ತಿಕಂ ತತಃ ಕೃತ್ವಾ ದದ್ಯಾತ್ಸಾನ್ನೋದಕಂ ಘಟಂ ।
ಏವಂ ದಿನತ್ರಯಂ ಕೃತ್ವಾ ವ್ರತಾಂತೇ ಮಾಸಮರ್ಚ್ಯ ಚ ॥ ೩೫ ॥

ಸಮ್ಯಗರ್ಘಂ ಚ ಸಂಪಾದ್ಯ ದದ್ಯಾನ್ಮಂತ್ರೇಣ ನಾರದ ।
ಪಂಚಗಾವಃ ಸಮುತ್ಪನ್ನಾ ಮಥ್ಯಮಾನೇ ಮಹೋದಧೌ ॥ ೩೬ ॥

ತಾಸಾಂ ಮಧ್ಯೇ ತು ಯಾ ನಂದಾ ತಸ್ಯೈ ಧೇನ್ವೈ ನಮೋನಮಃ ।
ಪ್ರದಕ್ಷಿಣೀಕೃತ್ಯ ತತೋ ದದ್ಯಾದ್ವಿಪ್ರಾಯ ಮಂತ್ರತಃ ॥ ೩೭ ॥

---

೩೩-೩೪. ಭಾದ್ರಪದ ಶುಕ್ಲ ತ್ರಯೋದಶಿಯ ದಿನದಲ್ಲಿ ಗೋತ್ರಿರಾತ್ರ ವ್ರತವು ವಿಹಿತವಾಗಿದೆ.

ಅದರ ವಿಧಾನ:—ಬಂಗಾರ ಅಥವಾ ಬೆಳ್ಳಿಯಿಂದ ಲಕ್ಷ್ಮೀನಾರಾಯಣ ವಿಗ್ರಹವನ್ನು ಮಾಡಿ ಅದಕ್ಕೆ ಪಂಚಾಮೃತದಿಂದ ಅಭಿಷೇಕಮಾಡಿ ಅದನ್ನು ಶುಭಕರವಾದ ಅಷ್ಟದಳಪದ್ಮಪೀಠದಲ್ಲಿ ಸ್ಥಾಪಿಸಿ ವಸ್ತ್ರವನ್ನು ಹೊದಿಸಿ ಗಂಧಾದಿಗಳಿಂದ ಪೂಜಿಸಬೇಕು.

೩೫-೩೭. ಅನಂತರ ಆರತಿಮಾಡಿ ಅನ್ನೋದಕಸಹಿತವಾಗಿ ಕಲಶವನ್ನು ದಾನಮಾಡಬೇಕು ಈರೀತಿ ಮೂರುದಿನಗಳು ಮಾಡಿ, ಅಂತ್ಯದಲ್ಲಿ ಮಾಸಮೂರ್ತಿಯನ್ನು ಪೂಜಿಸಿ, ಅರ್ಘಸಂಗ್ರಹಪೂರ್ವಕವಾಗಿ ಮಂತ್ರದಿಂದ ದಾನಮಾಡಬೇಕು.

ಮಂತ್ರ:—‘ ಮಹಾಸಾಗರವನ್ನು ಮಥನಮಾಡಿದಾಗ ಉತ್ಪನ್ನವಾದ ಐದುಗೋವುಗಳಲ್ಲಿ ಮಧ್ಯದ ನಂದಾ ಎಂಬ ಗೋವಿಗೆ ನಮಸ್ಕಾರ ! ನಮಸ್ಕಾರ !

ಗಾವೋ ಮಮಾಗ್ರತಃ ಸಂತು ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಪಾರ್ಶ್ವತಃ ಸಂತು ಗವಾಂ ಮಧ್ಯೇ ವಸಾಮ್ಯಹಂ ॥ ೩೮ ॥

ತತಶ್ಚ ದ್ವಿಜದಾಂಪತ್ಯಂ ಸಮ್ಯಗಭ್ಯರ್ಚ್ಯ ಭೋಜಯೇತ್ ।
ಲಕ್ಷ್ಮೀನಾರಾಯಣಂ ತಸ್ಮೈ ಸತ್ಕೃತ್ಯ ಪ್ರತಿಪಾದಯೇತ್ ॥ ೩೯ ॥

ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ।
ಕೃತ್ವಾ ಯತ್ಫಲಮಾಪ್ನೋತಿ ಗೋತ್ರಿರಾತ್ರಿವ್ರತಾಚ್ಚ ತತ್ ॥ ೪೦ ॥

ಇಷೇ ಶುಕ್ಲತ್ರಯೋದಶ್ಯಾಂ ತ್ರಿರಾತ್ರಾಶೋಕಕವ್ರತಂ ।
ಹೈಮಂ ಹ್ಯಶೋಕಂ ನಿರ್ಮಾಯ ಪೂಜಯಿತ್ವಾ ವಿಧಾನತಃ ॥ ೪೧ ॥

ಉಪವಾಸಪರಾ ನಾರೀ ನಿತ್ಯಂ ಕುರ್ಯಾತ್ಪ್ರದಕ್ಷಿಣಾಃ ।
ಅಷ್ಟೋತ್ತರಶತಂ ವಿಪ್ರ ಮಂತ್ರೇಣಾನೇನ ಸಾದರಂ ॥ ೪೨ ॥

---

ಎಂಬ ಮಂತ್ರದಿಂದ ಪ್ರದಕ್ಷಿಣೆಮಾಡಿ ಅನಂತರ 'ನನ್ನ ಮುಂದೆ, ಹಿಂದೆ, ಪಕ್ಕಗಳಲ್ಲಿ ಎಲ್ಲೆಲ್ಲಿಯೂ ಗೋವುಗಳು ಸಮೃದ್ಧಿಯಾಗಿರಲಿ. ಅವುಗಳ ಮಧ್ಯದಲ್ಲಿ ನಾನು ವಾಸಮಾಡುವೆನು.'

ಎಂಬ ಮಂತ್ರವನ್ನು ಹೇಳಿ ತರುವಾಯ ದ್ವಿಜದಂಪತಿಗಳನ್ನು ಸತ್ಕರಿಸಿ ಭೋಜನಮಾಡಿಸಿ ಅವರಿಗೆ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ದಾನ ಮಾಡಬೇಕು.

೪೦. ಸಾವಿರಾರು ಅಶ್ವಮೇಧಗಳು ಮತ್ತು ನೂರಾರು ರಾಜಸೂಯಗಳನ್ನೂ ಮಾಡುವುದರಿಂದಾಗುವ ಫಲವು ಗೋತ್ರಿರಾತ್ರವ್ರತದಿಂದ ಲಭಿಸುತ್ತದೆ.

೪೧-೪೨. ಆಶ್ವಯುಜ ಶುಕ್ಲ ತ್ರಯೋದಶಿಯ ದಿನದಲ್ಲಿ ತ್ರಿರಾತ್ರಾಶೋಕವ್ರತವು ವಿಹಿತವಾಗಿದೆ.

ಅದರ ವಿಧಾನಃ—ಬಂಗಾರದ ಅಶೋಕವನ್ನು ನಿರ್ಮಿಸಿ, ಉಪವಾಸನಿರತಳಾದ ನಾರಿಯು ವಿಧಾನೋಕ್ತಪ್ರಕಾರವಾಗಿ ಅದನ್ನು ಪೂಜಿಸಿ, ಪ್ರತಿದಿನವೂ ಈ ಮಂತ್ರದಿಂದ ಭಕ್ತಿಪೂರ್ವಕವಾಗಿ ನೂರೆಂಟು ಪ್ರದಕ್ಷಿಣೆಗಳನ್ನು ಮಾಡಬೇಕು.

ಹರೇಣ ನಿರ್ಮಿತಃ ಪೂರ್ವಂ ತ್ವಮಶೋಕ ಕೃಪಾಲುನಾ ।
ಲೋಕೋಪಕಾರಕರಣಸ್ತತ್ಪ್ರಸೀದ ಶಿವಪ್ರಿಯ ॥ ೪೩ ॥

ತತಸ್ತೃತೀಯೇ ದಿವಸೇ ವೃಕ್ಷೇ ತಸ್ಮಿನ್ವೃಷಧ್ವಜಂ ।
ಸಮಭ್ಯರ್ಚ್ಯ ವಿಧಾನೇನ ದ್ವಿಜಂ ಸಂಭೋಜ್ಯ ದಾಪಯೇತ್ ॥ ೪೪ ॥

ಏವಂ ಕೃತವ್ರತಾ ನಾರೀ ವೈಧವ್ಯಂ ನಾಪ್ನುಯಾತ್ ಕ್ವಚಿತ್ ।
ಪುತ್ರಪೌತ್ರಾದಿಸಹಿತಾ ಭರ್ತುಶ್ಚ ಸ್ಯಾತ್ಸುವಲ್ಲಭಾ ॥ ೪೫ ॥

ಊರ್ಜಕೃಷ್ಣತ್ರಯೋದಶ್ಯಾಮೇಕಭಕ್ತಃಸಮಾಹಿತಃ ।
ಪ್ರದೋಷೇ ತೈಲದೀಪಂ ತು ಪ್ರಜ್ವಾಲ್ಯಾಭ್ಯರ್ಚ್ಯ ಯತ್ನತಃ ॥ ೪೬ ॥

---

೪೩. ಮಂತ್ರ:—'ಅಶೋಕವೃಕ್ಷದೇವತೆಯೇ! ಲೋಕೋಪಕಾರನಿರತನು, ಶಿವಪ್ರಿಯನೂ ಆಗಿರುವ ನೀನು ಪೂರ್ವದಲ್ಲಿ ದಯಾಳುವಾದ ಈಶ್ವರನಿಂದ ನಿರ್ಮಿಸಲ್ಪಟ್ಟಿರುವೆ ಆದಕಾರಣ ನೀನು ನನಗೆ ಪ್ರಸನ್ನನಾಗು.

೪೪. ಅನಂತರ ಮೂರನೆಯದಿನದಲ್ಲಿ ಆ ವೃಕ್ಷದಲ್ಲಿ ಈಶ್ವರನನ್ನು ವಿಧಾನೋಕ್ತಪ್ರಕಾರವಾಗಿ ಪೂಜಿಸಿ, ಬ್ರಾಹ್ಮಣನಿಗೆ ಭೋಜನಮಾಡಿಸಿ ದಾನಮಾಡಬೇಕು.

೪೫. ಈರೀತಿಯಾಗಿ ವ್ರತವನ್ನಾಚರಿಸಿದ ನಾರಿಯು ಯಾವಾಗಲೂ ವೈಧವ್ಯವನ್ನು ಹೊಂದುವುದಿಲ್ಲ. ಅವಳು ಪುತ್ರಪೌತ್ರಾದಿಸಹಿತಳಾಗಿ ಗಂಡನ ಪ್ರೀತಿಪಾತ್ರಳಾಗಿ ಸುಖವಾಗಿರುವಳು.

೪೬-೪೭. ಕಾರ್ತಿಕ ಕೃಷ್ಣ ತ್ರಯೋದಶಿಯ ದಿನದಲ್ಲಿ ಒಪ್ಪತ್ತೂಟ ಮಾಡಿ ಸಮಾಧಾನಮನಸ್ಕನಾಗಿ ಪ್ರದೋಷಕಾಲದಲ್ಲಿ ಎಣ್ಣೆಯದೀಪವನ್ನು

ಗೃಹದ್ವಾರೇ ಬಹಿರ್ದದ್ಯಾದ್ಯಮೋ ಮೇ ಪ್ರೀಯತಾಮಿತಿ ।
ಏವಂ ಕೃತೇ ತು ವಿಪ್ರೇಂದ್ರ ಯಮಪೀಡಾ ನ ಜಾಯತೇ ॥ ೪೭ ॥

ಊರ್ಜಶುಕ್ಲತ್ರಯೋದಶ್ಯಾಮೇಕಭೋಜೀ ದ್ವಿಜೋತ್ತಮ ।
ಪುನಃ ಸ್ನಾತ್ವಾ ಪ್ರದೋಷೇ ತು ವಾಗ್ಯತಃ ಸುಸಮಾಹಿತಃ ॥ ೪೮ ॥

ಪ್ರದೀಪಾನಾಂ ಸಹಸ್ರೇಣ ಶತ್ಯೈನಾಪ್ಯಥವಾ ದ್ವಿಜ ।
ಪ್ರದೀಪಯೇಚ್ಛಿವಂ ವಾಪಿ ದ್ವಾತ್ರಿಂಶದ್ದೀಪಮಾಲಯಾ ॥ ೪೯ ॥

ಘೃತೇನ ದೀಪಯೇದ್ದೀಪಾನ್ಗಂಧಾದ್ಯೈಃ ಪೂಜಯೇಚ್ಛಿವಂ ।
ಫಲೈರ್ನಾನಾವಿಧೈಶ್ಚೈವ ನೈವೇದ್ಯೈರಪಿ ನಾರದ ॥ ೫೦ ॥

ತತಃ ಸ್ತುವೀತ ದೇವೇಶಂ ಶಿವಂ ನಾಮ್ನಾ ಶತೇನ ಚ ।
ತಾನಿ ನಾಮಾನಿ ಕೀರ್ತ್ಯಂತೇ ಸರ್ವಾಭೀಷ್ಟಪ್ರದಾನಿ ವೈ ॥ ೫೧ ॥

---

ಹಚ್ಚಿ, ಅವನ್ನು ಮನೆಯ ಹೊರಗಿನ ಬಾಗಿಲಿನಲ್ಲಿ ಯಮನು ಪ್ರೀತನಾಗಲೆಂದು ಸಂಕಲ್ಪಿಸಿ ಉರಿಸಬೇಕು. ಈ ರೀತಿಯಾಗಿ ಮಾಡಿದರೆ ಯಮಪೀಡೆ ಯುಂಟಾಗುವುದಿಲ್ಲ.

೪೮-೫೦. ದ್ವಿಜೋತ್ತಮನೇ! ಕಾರ್ತಿಕ ಶುಕ್ಲ ತ್ರಯೋದಶಿಯ ದಿನ ದಲ್ಲಿ ಒಪ್ಪತ್ತೂಟಮಾಡಿ ಪ್ರದೋಷಕಾಲದಲ್ಲಿ ಪುನಃ ಸ್ನಾನಮಾಡಿ ವಾಙ್ನಿಯಮ ಮತ್ತು ಚಿತ್ತ ಸಮಾಧಾನವುಳ್ಳವನಾಗಿ ಸಾವಿರ ಅಥವಾ ನೂರು, ಇಲ್ಲವೇ ಮೂವತ್ತೆರಡು ತುಪ್ಪದ ದೀಪಗಳ ಮಾಲಿಕೆಯನ್ನು ರಚಿಸಿ, ಶಿವನನ್ನು ಗಂಧಾದಿಗಳಿಂದ ಪೂಜಿಸಿ ನಾನಾವಿಧ ಫಲಗಳ ನೈವೇದ್ಯವನ್ನು ಮಾಡಬೇಕು.

೫೧. ಅನಂತರ ದೇವೇಶನಾದ ಶಿವನನ್ನು ಶತನಾಮಗಳಿಂದ ಸ್ತೋತ್ರ ಮಾಡಬೇಕು. ಸಕಲಾಭೀಷ್ಟಪ್ರದಗಳಾದ ಆ ನಾಮಸ್ತುತಿಗಳನ್ನು ಹೇಳುವೆನು.

ನಮೋ ರುದ್ರಾಯ ಭೀಮಾಯ ನೀಲಕಂಠಾಯ ವೇಧಸೇ ।
ಕಪರ್ದಿನೇ ಸುರೇಶಾಯ ವ್ಯೋಮಕೇಶಾಯ ವೈ ನಮಃ　　॥ ೫೨ ॥

ವೃಷಧ್ವಜಾಯ ಸೋಮಾಯ ಸೋಮನಾಥಾಯ ವೈ ನಮಃ ।
ದಿಗಂಬರಾಯ ಭೃಂಗಾಯ ಉಮಾಕಾಂತಾಯ ವರ್ಧಿನೇ　　॥ ೫೩ ॥

ತಪೋಮಯಾಯ ವ್ಯಾಪ್ತಾಯ ಶಿಪಿವಿಷ್ಟಾಯ ವೈ ನಮಃ ।
ವ್ಯಾಲಪ್ರಿಯಾಯ ವ್ಯಾಲಾಯ ವ್ಯಾಲಾನಾಂ ಪತಯೇ ನಮಃ　　॥ ೫೪ ॥

ಮಹೀಧರಾಯ ವ್ಯೋಮಾಯ ಪಶೂನಾಂ ಪತಯೇ ನಮಃ ।
ತ್ರಿಪುರಘ್ನಾಯ ಸಿಂಹಾಯ ಶಾರ್ದೂಲಾಯಾರ್ಷಭಾಯ ಚ　　॥ ೫೫ ॥

---

ರುದ್ರಾಯ ನಮಃ
ಭೀಮಾಯ ನಮಃ
ನೀಲಕಂಠಾಯ ನಮಃ
ವೇಧಸೇ ನಮಃ
ಕಪರ್ದಿನೇ ನಮಃ
ಸುರೇಶಾಯ ನಮಃ
ವ್ಯೋಮಕೇಶಾಯ ನಮಃ
ವೃಷಭಧ್ವಜಾಯ ನಮಃ
ಸೋಮಾಯ ನಮಃ
ಸೋಮನಾಥಾಯ ನಮಃ
ದಿಗಂಬರಾಯ ನಮಃ
ಭೃಂಗಾಯ ನಮಃ
ಉಮಾಕಾಂತಾಯ ನಮಃ
ವರ್ಧಿನೇ ನಮಃ
ತಪೋಮಯಾಯ ನಮಃ
ವ್ಯಾಪ್ತಾಯ ನಮಃ
ಶಿಪಿವಿಷ್ಟಾಯ ನಮಃ
ವ್ಯಾಲಪ್ರಿಯಾಯ ನಮಃ
ವ್ಯಾಲಾಯ ನಮಃ
ವ್ಯಾಲಾನಾಂ ಪತಯೇ ನಮಃ
ಮಹೀಧರಾಯ ನಮಃ
ವ್ಯೋಮಾಯ ನಮಃ
ಪಶೂನಾಂ ಪತಯೇ ನಮಃ
ತ್ರಿಪುರಘ್ನಾಯ ನಮಃ
ಸಿಂಹಾಯ ನಮಃ
ಶಾರ್ದೂಲಾಯ ನಮಃ

ಮಿತಾಯ ಮಿತನಾಥಾಯ ಸಿದ್ಧಾಯ ಪರಮೇಷ್ಠಿನೇ ।
ವೇದಗೀತಾಯ ಗುಪ್ತಾಯ ವೇದಗುಹ್ಯಾಯ ವೈ ನಮಃ ॥ ೫೬ ॥

ದೀರ್ಘಾಯ ದೀರ್ಘರೂಪಾಯ ದೀರ್ಘಾರ್ಥಾಯ ಮಹೀಯಸೇ ।
ನಮೋ ಜಗತ್ಪ್ರತಿಷ್ಠಾಯ ವ್ಯೋಮರೂಪಾಯ ವೈ ನಮಃ ॥ ೫೭ ॥

ಕಲ್ಯಾಣಾಯ ವಿಶಿಷ್ಟಾಯ ಶಿಷ್ಟಾಯ ಪರಮಾತ್ಮನೇ ।
ಗಜಕೃತ್ತಿಧರಾಯಾಥ ಅಂಧಕಾಸುರಭೇದಿನೇ ॥ ೫೮ ॥

ನೀಲಲೋಹಿತಶುಕ್ಲಾಯ ಚಂಡಮುಂಡಪ್ರಿಯಾಯ ಚ ।
ಭಕ್ತಿಪ್ರಿಯಾಯ ದೇವಾಯ ಯಜ್ಞಾಂತಾಯಾವ್ಯಯಾಯ ಚ ॥ ೫೯ ॥

---

ಋಷಭಾಯ ನಮಃ
ಮಿತಾಯ ನಮಃ
ಮಿತನಾಥಾಯ ನಮಃ
ಸಿದ್ಧಾಯ ನಮಃ
ಪರಮೇಷ್ಠಿನೇ ನಮಃ
ವೇದಗೀತಾಯ ನಮಃ
ಗುಪ್ತಾಯ ನಮಃ
ವೇದಗುಹ್ಯಾಯ ನಮಃ
ದೀರ್ಘಾಯ ನಮಃ
ದೀರ್ಘರೂಪಾಯ ನಮಃ
ದೀರ್ಘಾರ್ಥಾಯ ನಮಃ
ಮಹೀಯಸೇ ನಮಃ
ಜಗತ್ಪ್ರತಿಷ್ಠಾಯ ನಮಃ
ವ್ಯೋಮರೂಪಾಯ ನಮಃ
ಕಲ್ಯಾಣಾಯ ನಮಃ
ವಿಶಿಷ್ಟಾಯ ನಮಃ
ಶಿಷ್ಟಾಯ ನಮಃ
ಪರಮಾತ್ಮನೇ ನಮಃ
ಗಜಕೃತ್ತಿಧರಾಯ ನಮಃ
ಅಂಧಕಾಸುರಭೇದಿನೇ ನಮಃ
ನೀಲಲೋಹಿತಶುಕ್ಲಾಯ ನಮಃ
ಚಂಡಮುಂಡಪ್ರಿಯಾಯ ನಮಃ
ಭಕ್ತಿಪ್ರಿಯಾಯ ನಮಃ
ದೇವಾಯ ನಮಃ

**ಮಹೇಶಾಯ ನಮಸ್ತುಭ್ಯಂ ಮಹಾದೇವಹರಾಯ ಚ ।**
**ತ್ರಿನೇತ್ರಾಯ ತ್ರಿವೇದಾಯ ವೇದಾಂಗಾಯ ನಮೋನಮಃ ॥ ೬೦ ॥**

**ಅರ್ಥಾಯಾರ್ಥಸ್ವರೂಪಾಯ ಪರಮಾರ್ಥಾಯ ವೈ ನಮಃ ।**
**ವಿಶ್ವರೂಪಾಯ ವಿಶ್ವಾಯ ವಿಶ್ವನಾಥಾಯ ವೈ ನಮಃ ॥ ೬೧ ॥**

**ಶಂಕರಾಯ ಚ ಕಾಲಾಯ ಕಾಲಾವಯವರೂಪಿಣೇ ।**
**ಅರೂಪಾಯ ವಿರೂಪಾಯ ಸೂಕ್ಷ್ಮಸೂಕ್ಷ್ಮಾಯ ವೈ ನಮಃ ॥ ೬೨ ॥**

**ಶ್ಮಶಾನವಾಸಿನೇ ತುಭ್ಯಂ ನಮಸ್ತೇ ಕೃತ್ತಿವಾಸಸೇ ।**
**ಶಶಾಂಕಶೇಖರಾಯಾಥ ರುದ್ರಭೂಮಿಶ್ರಿತಾಯ ಚ ॥ ೬೩ ॥**

---

ಯಜ್ಞಾಂತಾಯ ನಮಃ
ಅವ್ಯಯಾಯ ನಮಃ
ಮಹೇಶಾಯ ನಮಃ
ಮಹಾದೇವಾಯ ನಮಃ
ಹರಾಯ ನಮಃ
ತ್ರಿನೇತ್ರಾಯ ನಮಃ
ತ್ರಿವೇದಾಯ ನಮಃ
ವೇದಾಂಗಾಯ ನಮಃ
ಅರ್ಥಾಯ ನಮಃ
ಅರ್ಥಸ್ವರೂಪಾಯ ನಮಃ
ಪರಮಾರ್ಥಾಯ ನಮಃ
ವಿಶ್ವರೂಪಾಯ ನಮಃ

ವಿಶ್ವಾಯ ನಮಃ
ವಿಶ್ವನಾಥಾಯ ನಮಃ
ಶಂಕರಾಯ ನಮಃ
ಕಾಲಾಯ ನಮಃ
ಕಾಲಾವಯವರೂಪಿಣೇ ನಮಃ
ಅರೂಪಾಯ ನಮಃ
ವಿರೂಪಾಯ ನಮಃ
ಸೂಕ್ಷ್ಮಸೂಕ್ಷ್ಮಾಯ ನಮಃ
ಸ್ಮಶಾನವಾಸಿನೇ ನಮಃ
ಕೃತ್ತಿವಾಸಸೇ ನಮಃ
ಶಶಾಂಕಶೇಖರಾಯ ನಮಃ
ರುದ್ರಭೂಮಿಶ್ರಿತಾಯ ನಮಃ

ದುರ್ಗಾಯ ದುರ್ಗಪಾರಾಯ ದುರ್ಗಾವಯವ ಸಾಕ್ಷಿಣೇ ।
ಲಿಂಗರೂಪಾಯ ಲಿಂಗಾಯ ಲಿಂಗಾನಾಂ ಪತಯೇ ನಮಃ ॥ ೬೪ ॥

ನಮಃ ಪ್ರಭಾವರೂಪಾಯ ಪ್ರಭಾವಾರ್ಥಾಯ ವೈ ನಮಃ ॥ ೬೫ ॥

ನಮೋ ನಮಃ ಕಾರಣಕಾರಣಾಯ ತೇ
ಮೃತ್ಯುಂಜಯಾಯಾತ್ಮಭವಸ್ವರೂಪಿಣೇ ।
ತ್ರಿಯಂಬಕಾಯ ಶಿತಿಕಂಠಭರ್ಗಿಣೇ
ಗೌರೀಯುಜೇ ಮಂಗಲಹೇತವೇ ನಮಃ ॥ ೬೬ ॥

ನಾಮ್ನಾಂ ಶತಮಿದಂ ವಿಪ್ರ ಪಿನಾಕಿಗುಣಕೀರ್ತನಂ ।
ಪಠಿತ್ವಾ ದಕ್ಷಿಣೀಕೃತ್ಯ ಪ್ರಾಯಾನ್ನಿಜನಿಕೇತನಂ ॥ ೬೭ ॥

ಏವಂ ಕೃತ್ವಾ ವ್ರತಂ ವಿಪ್ರ ಮಹಾದೇವಪ್ರಸಾದತಃ ।
ಭುಕ್ತ್ವೇಹ ಭೋಗಾನಖಿಲಾನಂತೇ ಶಿವಪದಂ ಲಭೇತ್ ॥ ೬೮ ॥

---

| | |
|---|---|
| ದುರ್ಗಾಯ ನಮಃ | ಕಾರಣಕಾರಣಾಯ ನಮಃ |
| ದುರ್ಗಪಾರಾಯ ನಮಃ | ಮೃತ್ಯುಂಜಯಾಯ ನಮಃ |
| ದುರ್ಗಾವಯವಸಾಕ್ಷಿಣೇ ನಮಃ | ಆತ್ಮಭವಸ್ವರೂಪಿಣೇ ನಮಃ |
| ಲಿಂಗರೂಪಾಯ ನಮಃ | ತ್ರಿಯಂಬಕಾಯ ನಮಃ |
| ಲಿಂಗಾಯ ನಮಃ | ಶಿತಿಕಂಠಾಯ ನಮಃ |
| ಲಿಂಗಾನಾಂ ಪತಯೇ ನಮಃ | ಭರ್ಗಿಣೇ ನಮಃ |
| ಪ್ರಭಾವರೂಪಾಯ ನಮಃ | ಗೌರೀಯುಜೇ ನಮಃ |
| ಪ್ರಭಾವಾರ್ಥಾಯ ನಮಃ | ಮಂಗಳಹೇತವೇ ನಮಃ |

೬೭. ಈಶ್ವರನ ಗುಣಕಥನರೂಪವಾದ ಈ ನಾಮಶತವನ್ನು ಪಠನೆ ಮಾಡಿ ಪ್ರದಕ್ಷಿಣೆಮಾಡಿ ತನ್ನ ಮನೆಗೆ ಹೋಗಬೇಕು.

೬೮. ಈರೀತಿಯಾಗಿ ವ್ರತವನ್ನಾಚರಿಸಿದವನು ಮಹಾದೇವನ ಅನುಗ್ರಹದಿಂದ ಇಲ್ಲಿ ಸಮಸ್ತಭೋಗಗಳನ್ನೂ ಅನುಭವಿಸಿ, ಕೊನೆಯಲ್ಲಿ ಶಿವಸ್ಥಾನವನ್ನು ಹೊಂದುವನು.

ಮಾರ್ಗಶುಕ್ಲತ್ರಯೋದಶ್ಯಾಂ ಯೋನಂಗಂ ವಿಧಿನಾ ಯಜೇತ್ ।
ತ್ರಿಕಾಲಮೇಕಕಾಲಂ ವಾ ಶಿವಸಂಗಮಸಂಭವಂ　　॥ ೬೯ ॥

ಗಂಧಾದ್ಯೈರುಪಚಾರೈಸ್ತು ಪೂಜಯಿತ್ವಾ ವಿಧಾನತಃ
ಘಟೇ ಮಂಗಲಪಟ್ಟೇ ವಾ ಭೋಜಯೇದ್ದ್ವಿಜದಂಪತೀ　　॥ ೭೦ ॥

ತತಶ್ಚ ದಕ್ಷಿಣಾಂ ದತ್ವಾ ಸ್ವಯಮೇಕಾಶನಂ ಚರೇತ್ ।
ಏವಂ ಕೃತೇ ತು ವಿಪ್ರರ್ಷೇ ನಾನಾಕಾಮಫಲಾವಹಂ　　॥ ೭೧ ॥

ಪ್ರಯಾಗೇ ಮಾಘಮಾಸೇ ತು ತ್ರ್ಯಹಂ ಸ್ನಾತಸ್ಯ ಯತ್ಫಲಂ ।
ನಾಶ್ವಮೇಧಸಹಸ್ರೇಣ ತತ್ಫಲಂ ಲಭತೇ ಭುವಿ　　॥ ೭೨ ॥

ತತ್ರ ಸ್ನಾನಂ ಜಪೋ ಹೋಮೋ ದಾನಂ ಚಾನಂತ್ಯಮಶ್ನುತೇ ।
ಫಾಲ್ಗುನೇ ತು ಸಿತೇ ಪಕ್ಷೇ ತ್ರಯೋದಶ್ಯಾಮುಪೋಷಿತಃ　　॥ ೭೩ ॥

---

೬೯-೭೨. ಮಾರ್ಗಶೀರ್ಷ ಶುಕ್ಲ ತ್ರಯೋದಶಿಯ ದಿನದಲ್ಲಿ ಶಿವ ಸಂಗಮ ಸಂಭೂತನಾದ ಅನಂಗನನ್ನು ಮೂರುಕಾಲಗಳಲ್ಲಿ ಅಥವಾ ಒಂದು ಕಾಲದಲ್ಲಿ ವಿಧಿವತ್ತಾಗಿ ಕಲಶ ಅಥವಾ ಮಂಗಳಪಟ್ಟದಲ್ಲಿ ಪೂಜಿಸಬೇಕು.

ಪೂಜಿಸಿದನಂತರ, ದ್ವಿಜದಂಪತಿಗಳಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು, ತಾನು ಒಪ್ಪತ್ತೂಟಮಾಡಬೇಕು.

ನಾರದನೇ! ನಾನಾವಿಧವಾದ ಅಭೀಷ್ಟಫಲಗಳನ್ನು ಕೊಡುವಂತಹ, ಈ ವ್ರತವನ್ನು ಆಚರಿಸಿದರೆ ಮಾಘಮಾಸದಲ್ಲಿ ಪ್ರಯಾಗಕ್ಷೇತ್ರದಲ್ಲಿ ಗಂಗಾ ಯಮುನೆಗಳ ಸಂಗಮದಲ್ಲಿ ಮೂರು ದಿನಗಳು ಸ್ನಾನಮಾಡುವುದರಿಂದಾಗುವ ಫಲವು ಲಭಿಸುತ್ತದೆ. ಆ ಸ್ನಾನದಿಂದ ಬರುವ ಫಲವು ಸಾವಿರ ಅಶ್ವಮೇಧಗಳಿಂದಲೂ ಬರುವುದಿಲ್ಲ.

೭೩-೭೯. ಮಾಘಮಾಸದಲ್ಲಿ ಪ್ರಯಾಗ ಸಂಗಮಸ್ನಾನ, ಅಲ್ಲಿ ಮಾಡುವ ಜಪ, ಹೋಮ ಮತ್ತು ದಾನಗಳು ಅನಂತಫಲದಾಯಕಗಳಾಗುವುವು.

ನಮಸ್ಕೃತ್ಯ ಜಗನ್ನಾಥಂ ಪ್ರಾರಂಭೇ ಧನದವ್ರತಂ |
ಮಹಾರಾಜಂ ಯಕ್ಷಪತಿಂ ಗಂಧಾದ್ಯೈರುಪಚಾರಕೈಃ || ೭೪ ||

ಲಿಖಿತಂ ವರ್ಣಕೈಃ ಪಟ್ಟೇ ಪೂಜಯೇದ್ಭಕ್ತಿಭಾವತಃ |
ಏವಂ ಶುಕ್ಲತ್ರಯೋದಶ್ಯಾಂ ಪ್ರತಿಮಾಸಂ ದ್ವಿಜೋತ್ತಮ || ೭೫ ||

ಸಂಪೂಜ್ಯ ಸೋಪವಾಸಶ್ಚ ಯಕ್ಷಭಕ್ತೋ ಭವೇನ್ನರಃ |
ತತೋ ವ್ರತಾಂತೇ ತು ಪುನಃ ಸೌವರ್ಣಂ ಧನನಾಯಕಂ || ೭೬ ||

ವಿಧಾಯ ವಿಧಿಭಿಃ ಸಾರ್ಧಂ ಸಪರ್ಯಾಭಿರ್ದ್ವಿಜೋತ್ತಮ |
ಉಪಚಾರೈಃ ಷೋಡಶಭಿಃ ಸ್ನಾನೈಃ ಪಂಚಾಮೃತಾದಿಭಿಃ || ೭೭ ||

ನೈವೇದ್ಯೈರ್ವಿವಿಧೈರ್ಭಕ್ಷ್ಯೈ ಪೂಜಯೇತ್ತು ಸಮಾಹಿತಃ |
ತತೋ ಧೇನುಂ ಯುತಾಂ ಕೃತ್ವಾ ವಸ್ತ್ರಸ್ರಗ್ಗಂಧಭೂಷಣೈಃ || ೭೮ ||

---

ಫಾಲ್ಗುಣ ಶುಕ್ಲಪಕ್ಷದ ತ್ರಯೋದಶಿಯ ದಿನದಲ್ಲಿ ಉಪವಾಸದಿಂದ ಆದಿಯಲ್ಲಿ ಜಗನ್ನಾಥನನ್ನು ನಮಸ್ಕರಿಸಿ ಧನದ ವ್ರತವನ್ನಾಚರಿಸಬೇಕು.

ಪಟ್ಟದಲ್ಲಿ ಯಕ್ಷಪತಿಯಾದ ಕುಬೇರಮಹಾರಾಜನನ್ನು ವರ್ಣಕಗಳಿಂದ ಬರೆದು ಭಕ್ತಿಭಾವದಿಂದ ಪೂಜಿಸಬೇಕು.

ಇದೇರೀತಿಯಾಗಿ ಪ್ರತಿತಿಂಗಳಲ್ಲಿಯೂ ಶುಕ್ಲ ತ್ರಯೋದಶಿಯಲ್ಲಿ ಉಪವಾಸದಿಂದ ಯಕ್ಷಭಕ್ತನಾದ ಮನುಷ್ಯನು ಪೂಜೆಮಾಡಿ, ವ್ರತಾಂತ್ಯದಲ್ಲಿ ಪುನಃ ಬಂಗಾರದಿಂದ ಕುಬೇರನನ್ನು ರಚಿಸಿ, ಅದನ್ನು ವಿಹಿತರೀತಿಯಿಂದ ಪೂಜಿಸಿ, ಪಂಚಾಮೃತಾದಿಗಳಿಂದ ಸ್ನಾನ, ನಾನಾವಿಧನೈವೇದ್ಯ ಇತ್ಯಾದಿ ಷೋಡಶೋಪಚಾರಗಳಿಂದ ಸಮಾಧಾನಮನಸ್ಕನಾಗಿ ಪೂಜಿಸಬೇಕು

ತರುವಾಯ ಕರುಸಹಿತ ಗೋವನ್ನು ವಸ್ತ್ರ, ಮಾಲಿಕೆ, ಗಂಧ, ಆಭರಣಗಳಿಂದ ಅಲಂಕರಿಸಿ ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನಿಗೆ ದಾನಮಾಡಬೇಕು. ಬಳಿಕ ಹನ್ನೆರಡು ಅಥವಾ ಹದಿಮೂರು ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನಮಾಡಿಸಬೇಕು.

ಸವತ್ಸಾಂ ದಾಪಯೇದ್ವಿಪ್ರ ಸಮ್ಯಗ್ವೇದವಿದೇ ಶುಭಾಂ |
ಸಂಭೋಜ್ಯ ವಿಪ್ರಾನ್ಮಿಷ್ಟಾನ್ನೈರ್ದ್ವಾದಶಾಥ ತ್ರಯೋದಶ || ೭೯ ||

ಗುರುಂ ಸಮರ್ಚ್ಯ ವಸ್ತ್ರಾದ್ಯೈಃ ಪ್ರತಿಮಾಂ ತಾಂ ನಿವೇದಯೇತ್ |
ದ್ವಿಜೇಭ್ಯೋ ದಕ್ಷಿಣಾಂ ಶಕ್ತ್ಯಾ ದತ್ತ್ವಾ ನತ್ವಾ ವಿಸೃಜ್ಯ ಚ || ೮೦ ||

ಸ್ವಯಂ ಭುಂಜೀತ ಮತಿಮಾನಿಷ್ಟೈಃ ಸಹ ಸಮಾಹಿತಃ |
ಏವಂ ಕೃತೇ ವ್ರತೇ ವಿಪ್ರ ನಿರ್ಧನಃ ಪ್ರಾಪ್ಯ ವೈಭವಂ || ೮೧ ||

ಮೋದತೇ ಭುವಿ ವಿಖ್ಯಾತೋ ರಾಜರಾಜ ಇವಾಪರಃ || ೮೨ ||

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸಸ್ಥಿತ ತ್ರಯೋದಶೀವ್ರತಕಥನಂ ನಾಮ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ

---

೮೦-೮೨. ಅನಂತರ ಗುರುವನ್ನು ಪೂಜಿಸಿ, ವಸ್ತ್ರಾದಿಗಳಸಹಿತವಾಗಿ ಆ ಪ್ರತಿಮೆಯನ್ನು ಅವರಿಗೆ ಕೊಡಬೇಕು. ಬ್ರಾಹ್ಮಣರಿಗೆ ತನ್ನ ಶಕ್ತ್ಯನುಸಾರವಾಗಿ ದಕ್ಷಿಣೆಕೊಟ್ಟು, ನಮಸ್ಕಾರಮಾಡಿ, ತಾನು, ಇಷ್ಟಬಂಧುಗಳೊಡನೆ ಸಮಾಧಾನವಾಗಿ ಊಟಮಾಡಬೇಕು.

ಈರೀತಿಯಾಗಿ ದರಿದ್ರನಾದವನು ವ್ರತವನ್ನಾಚರಿಸಿದರೆ ಅವನು ಐಶ್ವರ್ಯವನ್ನು ಹೊಂದಿ, ಅಪರರಾಜರಾಜನಂತೆ ಪ್ರಸಿದ್ಧನಾಗಿ ಲೋಕದಲ್ಲಿ ಸುಖಪಡುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳುಗಳ ತ್ರಯೋದಶೀ ವ್ರತವಿಧಾನ ನಿರೂಪಣೆಯೆಂಬ ನೂರಿಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

---

# ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ

## ಸನಾತನ ಉವಾಚ

ಶೃಣು ನಾರದ ವಕ್ಷ್ಯಾಮಿ ಚತುರ್ದಶ್ಯಾ ವ್ರತಾನಿ ತೇ ।
ಯಾನಿ ಕೃತ್ವಾ ನರೋ ಲೋಕೇ ಸರ್ವಾನ್ಕಾಮಾನವಾಪ್ನುಯಾತ್ ॥ ೧ ॥

ಚೈತ್ರಶುಕ್ಲಚತುರ್ದಶ್ಯಾಂ ಕುಂಕುಮಾಗರುಚಂದನೈಃ ।
ಗಂಧಾದ್ಯೈರ್ವಸ್ತ್ರಮಣಿಭಿಃ ಕಾರ್ಯಾರ್ಚಾ ಮಹತೀ ಶಿವೇ ॥ ೨ ॥

ವಿತಾನಧ್ವಜಛತ್ರಾಣಿ ದತ್ವಾ ಪೂಜ್ಯಾಶ್ಚ ಮಾತರಃ ।
ಏವಂ ಕೃತ್ವಾರ್ಚನಂ ವಿಪ್ರ ಸೋಪವಾಸೋಽಥವೈಕಭುಕ್ ॥ ೩ ॥

ಅಶ್ವಮೇಧಾದಿಕಂ ಪುಣ್ಯಂ ಲಭತೇ ಮಾನವೋ ಭುವಿ ।
ಅತ್ರೈವ ದಮನಾರ್ಚಾ ಚ ಕಾರಯೇದ್ಗಂಧಪುಷ್ಪಕೈಃ ॥ ೪ ॥

---

## ನೂರಿಪ್ಪತ್ತಮೂರನೆಯ ಅಧ್ಯಾಯವು

ಸನಾತನನು ಹೇಳಿದನು:—ನಾರದನೇ! ಲೋಕದಲ್ಲಿ ಯಾವ ವ್ರತಗಳನ್ನು ಮಾಡಿ ಮನುಷ್ಯನು ಸಕಲಾಭೀಷ್ಟಗಳನ್ನೂ ಪಡೆಯುವನೋ ಅಂತಹ ಚತುರ್ದಶೀವ್ರತಗಳನ್ನು ನಿನಗೆ ಹೇಳುವೆನು ಕೇಳು.

೨ ಚೈತ್ರ ಶುಕ್ಲ ಚತುರ್ದಶಿಯ ದಿನದಲ್ಲಿ ಕುಂಕುಮ, ಅಗರು, ಚಂದನ, ಗಂಧ ಮುಂತಾದುವುಗಳಿಂದಲೂ, ವಸ್ತ್ರಮಣಿಗಳಿಂದಲೂ ಸಹ ಮಹತ್ತಾದ ಶಿವಪೂಜೆಯನ್ನು ಮಾಡಬೇಕು.

೩-೪. ವಿತಾನ, ಧ್ವಜ, ಛತ್ರಿಗಳನ್ನು ಕೊಟ್ಟು ಮಾತೃದೇವತೆಗಳನ್ನು ಪೂಜಿಸಬೇಕು. ಈರೀತಿಯಾಗಿ ಉಪವಾಸಮಾಡಿ ಅಥವಾ ಒಪ್ಪತ್ತೂಟಮಾಡಿ ಅರ್ಚನೆಯನ್ನು ಮಾಡಿದ ಮನುಷ್ಯನು ಲೋಕದಲ್ಲಿ ಅಶ್ವಮೇಧಾದಿಗಳ ಪುಣ್ಯವನ್ನು ಹೊಂದುವನು. ಈದಿನದಲ್ಲಿಯೇ ಗಂಧಪುಷ್ಪಾದಿಗಳಿಂದ ದಮನಾರ್ಚನೆಯನ್ನು ಮಾಡಿಸಬೇಕು.

ಸಮರ್ಪಯೇತ್ಸುಪೂರ್ಣಾಯಾಂ ಶಿವಾಯ ಶಿವರೂಪಿಣೇ ।
ರಾಧಕೃಷ್ಣಚತುರ್ದಶ್ಯಾಂ ಸೋಽಪವಾಸೋ ನಿಶಾಗಮೇ ॥ ೫ ॥

ಲಿಂಗಮಭ್ಯರ್ಚಯೇಚ್ಛೈವಂ ಸ್ನಾತ್ವಾ ಧೌತಾಂಬರಃ ಸುಧೀಃ ।
ಗಂಧಾದ್ಯೈರುಪಚಾರೈಶ್ಚ ಬಿಲ್ವಪತ್ರೈಶ್ಚ ಸರ್ವತಃ ॥ ೬ ॥

ದತ್ವಾ ಪತ್ರಂ ದ್ವಿಜಾಗ್ರ್ಯಾಯ ಭುಂಜೀತ ಚ ಪರೇಽಹನಿ ।
ಏವಮೇವ ತು ಕೃಷ್ಣಾಸು ಸರ್ವಾಸು ದ್ವಿಜಸತ್ತಮ ॥ ೭ ॥

ಶಿವವ್ರತಂ ಪ್ರಕರ್ತವ್ಯಂ ಧನಸಂತಾನಮಿಚ್ಛತಾ ।
ರಾಧಶುಕ್ಲಚತುರ್ದಶ್ಯಾಂ ಶ್ರೀನೃಸಿಂಹವ್ರತಂ ಚರೇತ್ ॥ ೮ ॥

---

೫-೬. ಅದನ್ನು ಮಂಗಳರೂಪಿಯಾದ ಶಿವನಿಗೆ ಪೂರ್ಣಿಮೆಯ ದಿನದಲ್ಲಿ ಸಮರ್ಪಣೆಮಾಡಬೇಕು.

ವೈಶಾಖ ಕೃಷ್ಣ ಚತುರ್ದಶಿಯ ದಿನದಲ್ಲಿ ಉಪವಾಸಮಾಡಿ ಪ್ರದೋಷ ಕಾಲದಲ್ಲಿ ಸ್ನಾನಮಾಡಿ ಒಗೆದ ಬಟ್ಟೆಗಳನ್ನುಟ್ಟುಕೊಂಡು, ಗಂಧ ಮುಂತಾದ ಉಪಚಾರಗಳಿಂದ ಮತ್ತು ಬಿಲ್ವಪತ್ರೆಗಳಿಂದ ಲಿಂಗವನ್ನು ಪೂಜಿಸಬೇಕು.

೭-೮. ಬಳಿಕ ಶ್ರೇಷ್ಠದ್ವಿಜನಿಗೆ ಪತ್ರೆಯನ್ನು ಕೊಟ್ಟು ಮಾರನೆಯದಿನ ಭೋಜನಮಾಡಬೇಕು. ಇದೇರೀತಿ ಎಲ್ಲಾ ಕೃಷ್ಣ ಚತುರ್ದಶಿಯ ದಿನಗಳಲ್ಲಿಯೂ ಧನ ಮತ್ತು ಸಂತಾನವನ್ನು ಬಯಸುವವನು ಶಿವವ್ರತವನ್ನು ಮಾಡಬೇಕು.

ವೈಶಾಖ ಶುಕ್ಲ ಚತುರ್ದಶಿಯ ದಿನದಲ್ಲಿ ಶ್ರೀ ನೃಸಿಂಹವ್ರತವನ್ನಾಚರಿಸಬೇಕು.

ಉಪವಾಸವಿಧಾನೇನ ಶಕ್ತೋಽಶಕ್ತಸ್ತ್ವಥೈಕಭುಕ್ ।
ನಿಶಾಗಮೇ ತು ಸಂಪೂಜ್ಯ ನೃಸಿಂಹಂ ದೈತ್ಯಸೂದನಂ ॥ ೯ ॥

ಉಪಚಾರೈಃ ಷೋಡಶಭಿಃ ಸ್ನಾನೈಃ ಪಂಚಾಮೃತಾದಿಭಿಃ ।
ತತಃ ಕ್ಷಮಾಪಯೇದ್ದೇವಂ ಮಂತ್ರೇಣಾನೇನ ನಾರದ ॥ ೧೦ ॥

ತಪ್ತಹಾಟಕಕೇಶಾಂತಜ್ವಲತ್ಪಾವಕಲೋಚನ ।
ವಜ್ರಾಧಿಕನಖಸ್ಪರ್ಶ ದಿವ್ಯಸಿಂಹ ನಮೋಽಸ್ತು ತೇ ॥ ೧೧ ॥

ಇತಿ ಸಂಪ್ರಾರ್ಥ್ಯ ದೇವೇಶಂ ವ್ರತೀ ಸ್ಯಾತ್ ಸ್ಥಂಡಿಲೇಶಯಃ ।
ಜಿತೇಂದ್ರಿಯೋ ಜಿತಕ್ರೋಧಃ ಸರ್ವಭೋಗವಿವರ್ಜಿತಃ ॥ ೧೨ ॥

---

೯-೧೦. ಶಕ್ತನಾದರೆ ಆದಿನ ಉಪವಾಸಮಾಡಿ, ಇಲ್ಲವೇ ಅಶಕ್ತನಾದರೆ ಒಪ್ಪತ್ತೂಟಮಾಡಿ ಪ್ರದೋಷಕಾಲದಲ್ಲಿ ದೈತ್ಯಸಂಹಾರಕನಾದ ನರಸಿಂಹನನ್ನು ಷೋಡಶೋಪಚಾರ, ಪಂಚಾಮೃತಸ್ನಾನ ಮುಂತಾದುವುಗಳಿಂದ ಪೂಜಿಸಿ ಈ ಮಂತ್ರದಿಂದ ಕ್ಷಮಾಪಣೆ ಬೇಡಬೇಕು.

೧೧-೧೨. ಮಂತ್ರ:—ಕಾಯಿಸಿದ ಬಂಗಾರದಂತೆ ಹೊಳೆಯುತ್ತಿರುವ ಕೇಶಾಂತಗಳುಳ್ಳ, ಉರಿಯುತ್ತಿರುವ ಅಗ್ನಿಯಂತೆ ಪ್ರಜ್ವಲಿಸುತ್ತಿರುವ ನೇತ್ರಗಳುಳ್ಳ, ವಜ್ರಕ್ಕಿಂತಲೂ ಅಧಿಕವಾದ ನಖಸ್ಪರ್ಶವುಳ್ಳ, ದಿವ್ಯನರಹರಿಯೇ! ನಿನಗೆ ನಮಸ್ಕಾರಮಾಡುವೆನು ಎಂಬುದಾಗಿ ದೇವೇಶನನ್ನು ಪ್ರಾರ್ಥಿಸಿ ವ್ರತಿಯು ಮಂಡಲಾದಿಗಳಿಂದ ಪರಿಶುದ್ಧವಾದ ನೆಲದಮೇಲೆ ಮಲಗಿದವನಾಗಿ ಕ್ರೋಧವಿಲ್ಲದೇ ಜಿತೇಂದ್ರಿಯನಾಗಿ ಸಕಲ ಭೋಗಗಳನ್ನೂ ಬಿಟ್ಟು, ಆ ರಾತ್ರಿಯನ್ನು ಕಳೆಯಬೇಕು.

ಏವಂ ಯಃ ಕುರುತೇ ವಿಪ್ರ ವಿಧಿವದ್ವ್ರತಮುತ್ತಮಂ |
ವರ್ಷೇ ವರ್ಷೇ ಸ ಲಭತೇ ಭುಕ್ತ್ವಭೋಗೋ ಹರೇಃ ಪದಂ || ೧೩ ||

ಓಂಕಾರೇಶ್ವರಯಾತ್ರಾ ಚ ಕಾರ್ಯಾತ್ರೈವ ಮುನೀಶ್ವರ |
ದುರ್ಲಭಂ ವಾರ್ಚನಂ ತತ್ರ ದರ್ಶನಂ ಪಾಪನಾಶನಂ || ೧೪ ||

ಕಿಮತ್ರ ಬಹುನೋಕ್ತೇನ ಪೂಜಾಧ್ಯಾನ ಜಪೇಕ್ಷಣಂ |
ಯದ್ಭವೇತ್ತತ್ಸಮುದ್ದಿಷ್ಟಂ ಜ್ಞಾನಮೋಕ್ಷಪ್ರದಂ ನೃಣಾಂ || ೧೫ ||

ಅತ್ರ ಲಿಂಗವ್ರತಂ ಚಾಪಿ ಕರ್ತವ್ಯಂ ಪಾಪನಾಶನಂ |
ಪಂಚಾಮೃತೈಸ್ತು ಸಂಸ್ನಾಪ್ಯ ಪುನಃ ಸಂಲಿಪ್ಯ ಕುಂಕುಮೈಃ || ೧೬ ||

ನೈವೇದ್ಯೈಶ್ಚ ಫಲೈರ್ಧೂಪೈರ್ದೀಪೈರ್ವಸ್ತ್ರವಿಭೂಷಣೈಃ |
ಏವಂ ಯಃ ಪೂಜಯೇಚ್ಚೈವಂ ಲಿಂಗಂ ಸರ್ವಾರ್ಥಸಿದ್ಧಿದಂ || ೧೭ ||

---

೧೩. ಈರೀತಿಯಾಗಿ ಈ ಉತ್ತಮವ್ರತವನ್ನು ವಿಧಾನೋಕ್ತಪ್ರಕಾರವಾಗಿ ಪ್ರತಿವರ್ಷದಲ್ಲಿಯೂ ಮಾಡುವವನು ಇಲ್ಲಿ ಭೋಗಗಳನ್ನನುಭವಿಸಿ ನಂತರ ಹರಿಮಂದಿರಕ್ಕೆ ಹೋಗಿ ಸುಖಪಡುವನು.

೧೪. ಮುನೀಶ್ವರನೇ! ಈದಿನದಲ್ಲಿಯೇ ಓಂಕಾರೇಶ್ವರಯಾತ್ರೆಯೂ ಸಹ ವಿಹಿತವಾಗಿದೆ. ಆ ದೇವರಪೂಜೆಯು ದುರ್ಲಭವು. ಆದಿನದಲ್ಲಿ ಓಂಕಾರೇಶ್ವರ ದರ್ಶನವು ಪಾಪವನ್ನು ನಾಶಪಡಿಸುತ್ತದೆ.

೧೫. ಈ ವಿಷಯದಲ್ಲಿ ಹೆಚ್ಚು ಹೇಳಿದುದರಿಂದೇನು ಫಲ! ಪೂಜೆ, ಧ್ಯಾನ, ಜಪ, ದರ್ಶನ ಮುಂತಾದ ಆದಿನ ಮಾಡಿದ ಸೇವೆಯೆಲ್ಲವೂ ಮನುಷ್ಯರಿಗೆ ಜ್ಞಾನಮೋಕ್ಷಗಳನ್ನು ಕೊಡುತ್ತವೆಯೆಂದು ಉಕ್ತವಾಗಿದೆ.

೧೬-೨೦. ಆದಿನದಲ್ಲಿಯೇ ಪಾಪನಾಶಕವಾದ ಲಿಂಗವ್ರತವನ್ನೂ ಸಹ ಆಚರಿಸಬೇಕು.

ಭುಕ್ತಿಂ ಮುಕ್ತಿಂ ಸ ಲಭತೇ ಮಹಾದೇವಪ್ರಸಾದತಃ ।
ಜ್ಯೇಷ್ಠಶುಕ್ಲಚತುರ್ದಶ್ಯಾಂ ದಿವಾ ಪಂಚತಯಾ ನಿಶಃ ॥ ೧೮ ॥

ಮುಖೇ ದದೇದ್ಧೇಮಧೇನುಂ ರುದ್ರವ್ರತಮಿದಂ ಸ್ಮೃತಂ ।
ಶುಚಿಶುಕ್ಲಚತುರ್ದಶ್ಯಾಂ ಶಿವಂ ಸಂಪೂಜ್ಯ ಮಾನವಃ ॥ ೧೯ ॥

ದೇಶಕಾಲೋದ್ಭವೈಃ ಪುಷ್ಪೈಃ ಸರ್ವಸಂಪದಮಾಪ್ನುಯಾತ್ ।
ನಭಃಶುಕ್ಲಚತುರ್ದಶ್ಯಾಂ ಪವಿತ್ರಾರೋಪಣಂ ಮತಂ ॥ ೨೦ ॥

ತತ್ಸ್ವಶಾಖೋಕ್ತವಿಧಿನಾ ಕರ್ತವ್ಯಂ ದ್ವಿಜಸತ್ತಮ ।
ಶತಾಭಿಮಂತ್ರಿತಂ ಕೃತ್ವಾ ತತೋ ದೇವ್ಯೈ ನಿವೇದಯೇತ್ ॥ ೨೧ ॥

---

ವಿಧಾನ:— ಲಿಂಗಕ್ಕೆ ಪಂಚಾಮೃತಾಭಿಷೇಕಮಾಡಿ, ಕುಂಕುಮವನ್ನು ಲೇಪಿಸಿ, ಫಲ, ನೈವೇದ್ಯ, ಧೂಪ, ದೀಪ, ವಸ್ತ್ರ ಭೂಷಣ ಇವುಗಳಿಂದ ಸರ್ವಾಭೀಷ್ಟಪ್ರದವಾದ ಶೈವಲಿಂಗವನ್ನು ಪೂಜೆಮಾಡುವವನು ಮಹಾದೇವನ ಅನುಗ್ರಹದಿಂದ ಭೋಗಮೋಕ್ಷಗಳನ್ನು ಹೊಂದುವನು.

ಜ್ಯೇಷ್ಠಶುಕ್ಲಚತುರ್ದಶಿಯ ದಿನದಲ್ಲಿ ಹಗಲು ಕಳೆದಮೇಲೆ ಪ್ರದೋಷಕಾಲದಲ್ಲಿ ಬಂಗಾರದ ಗೋವನ್ನು ದಾನಕೊಡಬೇಕು. ಇದು ರುದ್ರವ್ರತವೆಂದು ವಿಹಿತವಾಗಿದೆ.

ಆಷಾಢಶುಕ್ಲಚತುರ್ದಶಿಯ ದಿನದಲ್ಲಿ ಆಕಾಲದೇಶಗಳಲ್ಲಿ ಹುಟ್ಟಿದ ಹೂವುಗಳಿಂದ ಶಿವನನ್ನು ಪೂಜಿಸಿದ ಮನುಷ್ಯನು ಸಕಲಸಂಪತ್ತುಗಳನ್ನೂ ಹೊಂದುವನು.

ಶ್ರಾವಣಶುಕ್ಲಚತುರ್ದಶಿಯ ದಿನದಲ್ಲಿ ಪವಿತ್ರಾರೋಪಣವು ವಿಹಿತವಾಗಿದೆ.

೨೧-೨೨. ದ್ವಿಜವರ್ಯನೇ! ಅದನ್ನು ತನ್ನ ಶಾಖೋಕ್ತವಿಧಾನಾನುಸ್ಸಾರವಾಗಿ ಮಾಡಿ ನೂರಾವರ್ತಿ ಅಭಿಮಂತ್ರಿಸಿ ಬಳಿಕ ದೇವಿಗೆ ಸಮರ್ಪಿಸ

ಪವಿತ್ರಾರೋಪಣಂ ಕೃತ್ವಾ ನರೋ ನಾರ್ಯಥವಾ ಯದಿ ।
ಮಹಾದೇವ್ಯಾಃ ಪ್ರಸಾದೇನ ಭುಕ್ತಿಂ ಮುಕ್ತಿಮವಾಪ್ನುಯಾತ್ ॥ ೭೨ ॥

ಭಾದ್ರಶುಕ್ಲಚತುರ್ದಶ್ಯಾಮನಂತವ್ರತಮುತ್ತಮಂ ।
ಕರ್ತವ್ಯಮೇಕಭಕ್ತಂ ಹಿ ಗೋಧೂಮಪ್ರಸ್ಥಪಿಷ್ಟಕಂ ॥ ೭೩ ॥

ವಿಪಾಚ್ಯ ಶರ್ಕರಾಜ್ಯಾಕ್ತಮನಂತಾಯ ನಿವೇದಯೇತ್ ।
ಗಂಧಾದ್ಯೈಃ ಪ್ರಾಕ್ ಸಮಭ್ಯರ್ಚ್ಯ ಕಾರ್ಪಾಸಂ ಪಟ್ಟಜಂ ತು ವಾ ॥೭೪॥

ಚತುರ್ದಶಗ್ರಂಥಿಯುತಂ ಸೂತ್ರಂ ಕೃತ್ವಾ ಸುಶೋಭನಂ ।
ತತಃ ಪುರಾಣಮುತ್ಸೃಜ್ಯ ಸೂತ್ರಂ ಕ್ಷಿಪ್ತ್ವಾ ಜಲಾಶಯೇ ॥ ೭೫ ॥

ನಿಬಧ್ನೀಯಾನ್ನವಂ ನಾರೀ ವಾಮೇ ದಕ್ಷೇ ಪುಮಾನ್ ಭುಜೇ ।
ವಿಪಾಚ್ಯ ಪಿಷ್ಟಪಕ್ವಂ ತತ್ ಪ್ರದದ್ಯಾದ್ದಕ್ಷಿಣಾನ್ವಿತಂ ॥ ೭೬ ॥

---

ಬೇಕು. ಪುರುಷ ಅಥವಾ ಸ್ತ್ರೀಯು ಪವಿತ್ರಾರೋಪಣೆಮಾಡಿದರೆ ಮಹಾದೇವಿಯ ಅನುಗ್ರಹದಿಂದ ಭೋಗಮೋಕ್ಷಗಳನ್ನು ಪಡೆಯುವರು.

೭೩-೭೭. ಭಾದ್ರಪದ ಶುಕ್ಲ ಚತುರ್ದಶಿಯ ದಿನದಲ್ಲಿ ಉತ್ತಮವಾದ ಅನಂತವ್ರತವನ್ನಾಚರಿಸಬೇಕು. ಆದಿನ ಒಪ್ಪತ್ತೂಟಮಾಡಬೇಕು ಒಂದು ಬಳ್ಳ ಗೋಧಿಯಹಿಟ್ಟನ್ನು ತುಪ್ಪದಲ್ಲಿ ಪಕ್ವಮಾಡಿ, ಸಕ್ಕರೆಯನ್ನು ಸೇರಿಸಿ ಅದನ್ನು ಗಂಧಾದಿಗಳಿಂದ ಪೂಜೆಮಾಡಿದಮೇಲೆ ಅನಂತನಿಗೆ ನಿವೇದನೆಮಾಡಬೇಕು ಹದಿನಾಲ್ಕು ಗಂಟುಗಳಿಂದ ಯುಕ್ತವಾದ ಹತ್ತಿ ಅಥವಾ ರೇಷ್ಮೆಯ ದಾರವನ್ನು ಪೂಜಾದಿಗಳಿಂದ ಸಂಸ್ಕರಿಸಿದನಂತರ ತಾನು ಧರಿಸಿದ್ದ ಹಳೆಯ ದಾರವನ್ನು ವಿಸರ್ಜನೆಮಾಡಿ ಜಲಾಶಯದಲ್ಲಿ ಹಾಕಿ, ಸಂಸ್ಕೃತವಾದ ಹೊಸ ದಾರವನ್ನು ಹೆಂಗಸು ಎಡಗೈಯಲ್ಲಿಯೂ, ಗಂಡಸು ಬಲಗೈಯಲ್ಲಿಯೂ ಕಟ್ಟಿಕೊಳ್ಳಬೇಕು.

ಸ್ವಯಂ ಚ ತನ್ಮಿತಂ ಚಾದ್ಯಾದೇವಂ ಕುರ್ಯಾದ್ವ್ರತೋತ್ತಮಂ ।
ದ್ವಿಸಪ್ತವರ್ಷಪರ್ಯಂತಂ ತತ ಉದ್ಯಾಪಯೇತ್ಸುಧೀಃ ॥ ೨೭ ॥

ಮಂಡಲಂ ಸರ್ವತೋಭದ್ರಂ ಧೂಮ್ರವರ್ಣೈಃ ಪ್ರಕಲ್ಪ್ಯ ಚ ।
ಸುಶೋಭನೇ ನ್ಯಸೇತ್ತತ್ರ ಕಲಶಂ ತಾಮ್ರಜಂ ಮುನೇ ॥ ೨೮ ॥

ತಸ್ಯೋಪರಿ ನ್ಯಸೇದ್ಧೈಮೀಮನಂತಪ್ರತಿಮಾಂ ಶುಭಾಂ ।
ಪೀತಪಟ್ಟಾಂಶುಕಾಚ್ಛನ್ನಾಂ ತತ್ರ ತಾಂ ವಿಧಿನಾ ಯಜೇತ್ ॥ ೨೯ ॥

ಗಣೇಶಂ ಯೋಜಕಃ ಖೇಟಾಂಲ್ಲೋಕಪಾಂಶ್ಚ ಯಜೇತ್ಪೃಥಕ್ ।
ತತೋ ಹೋಮಂ ಹವಿಷ್ಯೇಣ ಕೃತ್ವಾ ಪೂರ್ಣಾಹುತಿಂ ಚರೇತ್ ॥ ೩೦ ॥

---

ಸಕ್ಕರೆ ತುಪ್ಪಗಳಿಂದ ಪಕ್ವಮಾಡಿದ ಗೋಧಿಯಹಿಟ್ಟನ್ನು ಬ್ರಾಹ್ಮಣರಿಗೆ ದಾನಮಾಡಿ, ದಕ್ಷಿಣೆಕೊಟ್ಟು ನಂತರ ತಾನೂ ಅದನ್ನೇ ಮಿತವಾಗಿ ತಿನ್ನಬೇಕು.

ಈರೀತಿಯಾಗಿ ಈ ಉತ್ತಮವ್ರತವನ್ನು ಹದಿನಾಲ್ಕು ವರ್ಷಗಳಕಾಲ ಮಾಡಿ ಅನಂತರ ಜ್ಞಾನಿಯು ಉದ್ಯಾಪನೆಮಾಡಬೇಕು.

೨೮-೩೦. ಅದರ ವಿಧಾನ—: ಧೂಮ್ರವರ್ಣಗಳಿಂದ ಸರ್ವತೋಭದ್ರ ಮಂಡಲವನ್ನು ರಚಿಸಿ ಶೋಭನವಾದ ಆ ಮಂಡಲದಲ್ಲಿ ತಾಮ್ರಕಲಶವನ್ನಿಟ್ಟು ಅದರಮೇಲೆ ಶುಭವಾದ ಬಂಗಾರದ ಅನಂತಪ್ರತಿಮೆಯನ್ನು ಸ್ಥಾಪಿಸಿ, ಹಳದಿಯ ರೇಷ್ಮೆವಸ್ತ್ರವನ್ನು ಹೊದಿಸಿ ಅದನ್ನು ವಿಧಿವತ್ತಾಗಿ ಪೂಜೆಮಾಡಬೇಕು.

ಪೂಜಕನು ಗಣೇಶ, ನವಗ್ರಹಗಳು ಮತ್ತು ಲೋಕಪಾಲಕರನ್ನು ಪ್ರತ್ಯೇಕಪ್ರತ್ಯೇಕವಾಗಿ ಪೂಜಿಸಬೇಕು. ಅನಂತರ ಹವಿಷ್ಯದಿಂದ ಹೋಮ ಮಾಡಿ ಪೂರ್ಣಾಹುತಿಯನ್ನೂ ಕೊಡಬೇಕು.

ಶಯ್ಯಾಂ ಸೋಪಸ್ಕರಾಂ ಧೇನುಂ ಪ್ರತಿಮಾಂ ಚ ದ್ವಿಜೋತ್ತಮ ।
ಪ್ರದದ್ಯಾದ್ಗುರವೇ ಭಕ್ತ್ಯಾ ದ್ವಿಜಾನನ್ಯಾಂಶ್ಚತುರ್ದಶ || ೩೧ ||

ಸಂಭೋಜ್ಯ ಮಿಷ್ಟಪಕ್ವಾನ್ನೈರ್ದಕ್ಷಿಣಾಭಿಃ ಪ್ರತೋಷಯೇತ್ ।
ಏವಂ ಯಃ ಕುರುತೇನಂತವ್ರತಂ ಪ್ರತ್ಯಕ್ಷಮಾದರಾತ್ || ೩೨ ||

ಸೋಪ್ಯನಂತಪ್ರಸಾದೇನ ಜಾಯತೇ ಭುಕ್ತಿಮುಕ್ತಿಭಾಕ್ ।
ಕದಲೀವ್ರತಮಪ್ಯತ್ರ ತದ್ವಿಧಾನಂ ಚ ಮೇ ಶೃಣು || ೩೩ ||

ನರೋ ವಾ ಯದಿ ವಾ ನಾರೀ ರಂಭಾಮುಪವನಸ್ಥಿತಾಂ ।
ಸ್ನಾತ್ವಾ ಸಂಪೂಜಯೇದ್ಗಂಧಪುಷ್ಪಧಾನ್ಯಾಂಕುರಾದಿಭಿಃ || ೩೪ ||

ದಧಿದೂರ್ವಾಕ್ಷತೈರ್ದೀಪೈರ್ವಸ್ತ್ರಪಕ್ವಾನ್ನಸಂಚಯೈಃ ।
ಏವಂ ಸಂಪೂಜ್ಯ ಮಂತ್ರೇಣ ತತಃ ಸಂಪ್ರಾರ್ಥಯೇದ್ವ್ರತೀ || ೩೫ ||

೩೧-೩೩. ದ್ವಿಜಶ್ರೇಷ್ಠನೇ! ಪರಿಕರಸಹಿತವಾದ ಹಾಸಿಗೆ, ಗೋವು ಮತ್ತು ಪ್ರತಿಮೆಗಳನ್ನು ಭಕ್ತಿಯಿಂದ ಗುರುಗಳಿಗೆ ದಾನಮಾಡಬೇಕು. ಇತರ ಹದಿನಾಲ್ಕು ಬ್ರಾಹ್ಮಣರಿಗೆ ಪಕ್ವಮ್ಮಷ್ಟಾನ್ನಗಳಿಂದ ಭೋಜನಮಾಡಿಸಿ, ದಕ್ಷಿಣೆ ಕೊಟ್ಟು ಅವರನ್ನು ಸಂತೋಷಪಡಿಸಬೇಕು.

ಈರೀತಿ ಸಾಕ್ಷಾತ್ತಾಗಿ ಭಕ್ತಿಯಿಂದ ಅನಂತವ್ರತವನ್ನು ಮಾಡಿದವನು ಅನಂತಪದ್ಮನಾಭನ ಅನುಗ್ರಹದಿಂದ ಭೋಗಮೋಕ್ಷಗಳನ್ನು ಪಡೆಯುವನು

ಈದಿನವೇ ಕದಳೀವ್ರತವೂ ವಿಹಿತವಾಗಿದೆ, ಅದರ ವಿಧಾನವನ್ನು ಹೇಳುವೆನು, ಕೇಳು.

೩೪-೩೫. ಪುರುಷ ಅಥವಾ ಸ್ತ್ರೀಯು ಸ್ನಾನಮಾಡಿ ತೋಟದಲ್ಲಿರುವ ಬಾಳೆಯಗಿಡದಲ್ಲಿ ರಂಭಾದೇವತೆಯನ್ನು ಗಂಧ, ಹೂವು, ಧಾನ್ಯ, ಅಂಕುರ, ಮುಂತಾದುವುಗಳಿಂದಲೂ ಮೊಸರು, ದೂರ್ವಾ, ಅಕ್ಷತೆ, ದೀಪ, ವಸ್ತ್ರ ಮತ್ತು ಪಕ್ವಾನ್ನಸಮೂಹ ಇವುಗಳಿಂದಲೂ ಪೂಜೆಮಾಡಬೇಕು. ಈರೀತಿ ಪೂಜಿಸಿ ವ್ರತಿಯು ಈ ಮಂತ್ರದಿಂದ ಪ್ರಾರ್ಥಿಸಬೇಕು.

ಅಪ್ಸರೋಮರಕನ್ಯಾಭಿರ್ನಾಗಕನ್ಯಾಭಿರರ್ಚಿತೇ ।
ಶರೀರಾರೋಗ್ಯಲಾವಣ್ಯಂ ದೇಹಿ ದೇವಿ ನಮೋಽಸ್ತು ತೇ ॥ ೩೬ ॥

ಇತಿ ಸಂಪ್ರಾರ್ಥ್ಯ ಕನ್ಯಾಸ್ತು ಚತಸ್ರೋ ವಾ ಸುವಾಸಿನೀಃ ।
ಸಂಭೋಜ್ಯಾಗರುಸಿಂದೂರಕಜ್ಜಲಾಲಕ್ತಚರ್ಚಿತಾಃ ॥ ೩೭ ॥

ನಮಸ್ಕೃತ್ಯ ನಿಜಂ ಗೇಹಂ ಸಮಾಪ್ಯ ನಿಯಮಂ ವ್ರಜೇತ್ ।
ಏವಂ ಕೃತೇ ವ್ರತೇ ವಿಪ್ರ ಲಬ್ಧ್ವಾ ಸೌಭಾಗ್ಯಮುತ್ತಮಂ ॥ ೩೮ ॥

ಇಹ ಲೋಕೇ ವಿಮಾನೇನ ಸ್ವರ್ಗಲೋಕೇ ವ್ರಜೇತ್ ಪರಂ ।
ಇಷಕೃಷ್ಣಚತುರ್ದಶ್ಯಾಂ ವಿಷಶಸ್ತ್ರಾಂಬುವಹ್ನಿಭಿಃ ॥ ೩೯ ॥

ಸರ್ಪಶ್ವಾಪದವಜ್ರಾದ್ಯೈರ್ಹತಾನಾಂ ಬ್ರಹ್ಮಘಾತಿನಾಂ ।
ಚತುರ್ದಶ್ಯಾಂ ಗಯಾಶ್ರಾದ್ಧಮೇಕೋದ್ದಿಷ್ಟವಿಧಾನತಃ ॥ ೪೦ ॥

---

೩೬. ಮಂತ್ರ:—' ಅಪ್ಸರಸ್ತ್ರೀಯರು ದೇವಕನ್ಯೆಯರು ಮತ್ತು ನಾಗ ಕನ್ಯೆಯರುಗಳಿಂದ ಪೂಜಿಸಲ್ಪಟ್ಟ ದೇವಿಯೇ! ನಿನಗೆ ನಮಸ್ಕಾರಮಾಡುವೆನು. ನನಗೆ ಶರೀರಾರೋಗ್ಯಲಾವಣ್ಯಗಳನ್ನು ದಯಪಾಲಿಸು.

೩೭-೪೪. ಹೀಗೆ ಪ್ರಾರ್ಥಿಸಿ, ನಾಲ್ಕು ಕನ್ಯೆಯರು ಮತ್ತು ಸುವಾಸಿನಿ ಯರಿಗೆ ಭೋಜನಮಾಡಿಸಿ ಅವರಿಗೆ ಅಗರು, ಸಿಂದೂರ, ಕಜ್ಜಲ, ಲಾಕ್ಷಾಗಳನ್ನು ಲೇಪಿಸಿ, ನಮಸ್ಕಾರಮಾಡಿ ವ್ರತವನ್ನು ಮುಗಿಸಿಕೊಂಡು ತನ್ನ ಮನೆಗೆ ಹೋಗಬೇಕು.

ಈರೀತಿಯಾಗಿ ವ್ರತವನ್ನಾಚರಿಸಿದರೆ ಈ ಲೋಕದಲ್ಲಿ ಉತ್ತಮಸೌಭಾಗ್ಯ ವನ್ನು ಹೊಂದಿ ಅನಂತರ ವಿಮಾನದಿಂದ ಸ್ವರ್ಗಲೋಕಕ್ಕೆ ಹೋಗಿ ಸುಖಪಡುವನು.

ಆಶ್ವಯುಜ ಕೃಷ್ಣ ಚತುರ್ದಶಿಯ ದಿನದಲ್ಲಿ ವಿಷ, ಶಸ್ತ್ರ, ನೀರು, ಬೆಂಕಿ, ಸರ್ಪ ಮುಂತಾದ ಕ್ರೂರಜಂತುಗಳು, ವಜ್ರಾದ್ಯಾಯುಧಗಳು ಇವುಗಳಿಂದ

ಕರ್ತವ್ಯಂ ವಿಪ್ರವರ್ಗಂ ಚ ಭೋಜಯೇನ್ಮಿಷ್ಟಪಕ್ವಕೈಃ ।
ತರ್ಪಣಂ ಚ ಗವಾಂ ಗ್ರಾಸಂ ಬಲಿಂ ಚೈವ ಶ್ವಕಾಕಯೋಃ ॥ ೪೧ ॥

ಕೃತ್ವಾಚಮ್ಯ ಸ್ವಯಂ ಪಶ್ಚಾದ್ಭುಂಜೀಯಾದ್ಬಂಧುಭಿಃ ಸಹ ।
ಏವಂ ಯಃ ಕುರುತೇ ವಿಪ್ರ ಶ್ರಾದ್ಧಂ ಸಂಪನ್ನದಕ್ಷಿಣಂ ॥ ೪೨ ॥

ಸ ಉದ್ಧೃತ್ಯ ಪಿತೄನ್ ಗಚ್ಛೇದ್ದೇವಲೋಕಂ ಸನಾತನಂ ।
ಇಷಶುಕ್ಲಚತುರ್ದಶ್ಯಾಂ ಧರ್ಮರಾಜಂ ದ್ವಿಜೋತ್ತಮ ॥ ೪೩ ॥

ಗಂಧಾದ್ಯೈಃ ಸಮ್ಯಗಭ್ಯರ್ಚ್ಯ ಸೌವರ್ಣಂ ಭೋಜ್ಯ ಬಾಡವಂ ।
ದದ್ಯಾತ್ತಸ್ಮೈ ಧರ್ಮರಾಜಸ್ತ್ರಾಯತೇ ಭುವಿ ನಾರದ ॥ ೪೪ ॥

---

ಸತ್ತವರಿಗೂ, ಬ್ರಹ್ಮಹತ್ಯೆಯನ್ನು ಮಾಡಿದವರಿಗೂ ಏಕೋದ್ದಿಷ್ಟವಿಧಾನದಿಂದ ಗಯಾಶ್ರಾದ್ಧವನ್ನು ಮಾಡಬೇಕು. ಪಕ್ವ ಮೃಷ್ಟಾನ್ನಗಳಿಂದ ಬ್ರಾಹ್ಮಣ ವರ್ಗಕ್ಕೆ ಭೋಜನಮಾಡಿಸಬೇಕು ಬಳಿಕ ತರ್ಪಣ, ಗೋಗ್ರಾಸ, ನಾಯಿ ಕಾಗೆಗಳಿಗೆ ಬಲಿಗಳನ್ನು ಕೊಟ್ಟು ಆಚಮನಮಾಡಿ ಬಂಧುಗಳೊಡನೆ ತಾನು ಭೋಜನಮಾಡಬೇಕು.

ಈರೀತಿಯಾಗಿ ದಕ್ಷಿಣೆದಾನ ಸಹಿತವಾದ ಶ್ರಾದ್ಧವನ್ನು ಮಾಡುವವನು ಪಿತೃಗಳನ್ನುದ್ಧರಿಸಿ ಸನಾತನವಾದ ದೇವಲೋಕಕ್ಕೆ ಹೋಗಿ ಸುಖಪಡುವನು.

ಆಶ್ವಯುಜ ಶುಕ್ಲ ಚತುರ್ದಶಿಯ ದಿನದಲ್ಲಿ ಸುವರ್ಣದ ಧರ್ಮರಾಜ ವಿಗ್ರಹವನ್ನು ಗಂಧಾದಿಗಳಿಂದ ಚೆನ್ನಾಗಿ ಪೂಜಿಸಿ ಬ್ರಾಹ್ಮಣನಿಗೆ ಭೋಜನ ಮಾಡಿಸಿ ಅದನ್ನು ಅವನಿಗೆ ದಾನಮಾಡಬೇಕು. ಧರ್ಮರಾಜನು ಈ ವ್ರತ ಮಾಡಿದವನನ್ನು ರಕ್ಷಿಸುವನು.

ಏವಂ ಯಃ ಕುರುತೇ ಧರ್ಮಂ ಪ್ರತಿಮಾದಾನಮುತ್ತಮಂ |
ಸ ಭುಕ್ತ್ವೇಹ ವರಾನ್ಭೋಗಾನ್ದಿವಂ ಧರ್ಮಾಜ್ಞಯಾ ವ್ರಜೇತ್ || ೪೫ ||

ಊರ್ಜಕೃಷ್ಣಚತುರ್ದಶ್ಯಾಂ ತೈಲಾಭ್ಯಂಗಂ ವಿಧೂದಯೇ |
ಕೃತ್ವಾ ಸ್ನಾತ್ವಾರ್ಚಯೇದ್ಧರ್ಮಂ ನರಕಾದಭಯಂ ಲಭೇತ್ || ೪೬ ||

ಪ್ರದೋಷೇ ತೈಲದೀಪಾಂಸ್ತು ದೀಪಯೇದ್ಯಮತುಷ್ಟಯೇ |
ಗೃಹಾದ್ಬಾಹ್ಯಪ್ರದೇಶೇ ತು ಗೃಹೇ ವಾಪಿ ಸಮಾಹಿತಃ || ೪೭ ||

ವತ್ಸರೇ ಹೇವಿಲಂಬ್ಯಾಖ್ಯೇ ಮಾಸಿ ಶ್ರೀಮತಿ ಕಾರ್ತಿಕೇ |
ಶುಕ್ಲಪಕ್ಷೇ ಚತುರ್ದಶ್ಯಾಮರುಣಾಭ್ಯುದಯಂ ಪ್ರತಿ || ೪೮ ||

ಸ್ನಾತ್ವಾ ವಿಶ್ವೇಶ್ವರೋ ದೇವೋ ದೇವೈಃ ಸಹ ಮುನೀಶ್ವರ |
ಮಣಿಕರ್ಣಿಕತೀರ್ಥೇ ವಾ ತ್ರಿಪುಂಡ್ರಂ ಭಸ್ಮನಾ ದಧತ್ || ೪೯ ||

---

೪೫. ಈರೀತಿಯಾಗಿ ಪ್ರತಿಮಾದಾನರೂಪ ಧರ್ಮವನ್ನು ಮಾಡುವವನು ಧರ್ಮರಾಜನ ಅಪ್ಪಣೆಯಿಂದ ಇಲ್ಲಿ ಉತ್ಕೃಷ್ಟ ಭೋಗಗಳನ್ನನುಭವಿಸಿ ನಂತರ ಸ್ವರ್ಗಲೋಕಕ್ಕೆ ಹೋಗಿ ಸುಖಪಡುವನು

೪೬. ಕಾರ್ತಿಕ ಕೃಷ್ಣ ತ್ರಯೋದಶಿಯ ದಿನದಲ್ಲಿ ಚಂದ್ರೋದಯ ಸಮಯದಲ್ಲಿ ತೈಲಾಭ್ಯಂಗವನ್ನು ಮಾಡಿಕೊಂಡು ಸ್ನಾನಮಾಡಿ ಧರ್ಮರಾಜನನ್ನು ಪೂಜಿಸಬೇಕು. ಅದರಿಂದ ನರಕಭಯವು ತಪ್ಪುವುದು.

೪೭. ಆದಿನ ಪ್ರದೋಷಕಾಲದಲ್ಲಿ ಯಮಪ್ರೀತ್ಯರ್ಥವಾಗಿ ಮನೆಯ ಹೊರಗೆ ಅಥವಾ ಒಳಗಾದರೂ ಸಮಾಧಾನಚಿತ್ತದಿಂದ ತೈಲದೀಪಗಳನ್ನು ಹಚ್ಚಬೇಕು.

೪೮-೫೨. ಹೇವಿಳಂಬಿ ವರ್ಷದ ಶ್ರೀಮತ್ಕಾರ್ತಿಕ ಶುಕ್ಲಪಕ್ಷದ ಚತುರ್ದಶಿಯ ದಿನ ಅರುಣೋದಯಕಾಲದಲ್ಲಿ ವಿಶ್ವೇಶ್ವರದೇವನು ದೇವತೆಗಳ ಸಹಿತ

ಸ್ನಾತ್ವಾತ್ಮಾನಂ ಸ್ವಯಮಭ್ಯರ್ಚ್ಯ ಚಕ್ರೇ ಪಾಶುಪತವ್ರತಂ ।
ತತಸ್ತತ್ರ ಮಹಾಪೂಜಾಂ ಲಿಂಗೇ ಗಂಧಾದಿಭಿಶ್ಚರೇತ್ ॥ ೫೦ ॥

ದ್ರೋಣಪುಷ್ಪೈರ್ಬಿಲ್ವದಲೈರರ್ಕಪುಷ್ಪೈಶ್ಚ ಕೇತಕೈಃ ।
ಪುಷ್ಪೈಃ ಫಲೈರ್ಮಿಷ್ಟಪಕ್ವೈರ್ನೈವೇದ್ಯೈರ್ವಿವಿಧೈರಪಿ ॥ ೫೧ ॥

ಏವಂ ಕೃತ್ವೈಕಭಕ್ತಂ ತು ವ್ರತಂ ವಿಶ್ವೇಶತೋಷಣಂ ।
ಲಭತೇ ವಾಂಛಿತಾನ್ಕಾಮಾನಿಹಾಮುತ್ರ ಚ ನಾರದ ॥ ೫೨ ॥

ಬ್ರಹ್ಮಕೂರ್ಚವ್ರತಂ ಚಾತ್ರ ಕರ್ತವ್ಯಮೃದ್ಧಿಮಿಚ್ಛತಾ ।
ಸೋಪವಾಸಃ ಪಂಚಗವ್ಯಂ ಪಿಬೇದ್ರಾತ್ರೌ ಜಿತೇಂದ್ರಿಯಃ ॥ ೫೩ ॥

ಕಪಿಲಾಯಾಸ್ತು ಗೋಮೂತ್ರಂ ಕೃಷ್ಣಾಯಾ ಗೋಮಯಂ ತಥಾ ।
ಶ್ವೇತಾಯಾಃ ಕ್ಷೀರಮುದಿತಂ ರಕ್ತಾಯಾಶ್ಚ ತಥಾ ದಧಿ ॥ ೫೪ ॥

---

ವಾಗಿ ಮಣಿಕರ್ಣಿಕಾತೀರ್ಥದಲ್ಲಿ ಸ್ನಾನಮಾಡಿ, ಭಸ್ಮದಿಂದ ತ್ರಿಪುಂಡ್ರವನ್ನು ಧರಿಸಿ ತನ್ನನ್ನು ತಾನೇ ಪೂಜಿಸಿ ಪಾಶುಪತವ್ರತವನ್ನು ಮಾಡಿದನು. ಆದ ಕಾರಣ ಆದಿನ ಲಿಂಗಕ್ಕೆ ಗಂಧಾದಿಗಳಿಂದ ಮಹಾಪೂಜೆಯನ್ನು ಮಾಡಬೇಕು. ದ್ರೋಣಪುಷ್ಪ, ಬಿಲ್ವಪತ್ರ, ಎಕ್ಕೆಹೂವು, ಕೇತಕಹೂವುಗಳನ್ನು ಪೂಜಿಸಿ, ನಾನಾವಿಧವಾದ ಮೃಷ್ಟಾನ್ನಗಳನ್ನು ನೈವೇದ್ಯಮಾಡಬೇಕು.

ಆದಿನ ಒಪ್ಪತ್ತೂಟಮಾಡಿ ವಿಶ್ವೇಶ್ವರ ಪ್ರೀತಿಕರವಾದ ಈ ವ್ರತವನ್ನು ಮಾಡುವವನು ಇಹಪರಗಳಲ್ಲಿ ಬಯಸಿದ ಅಭೀಷ್ಟಗಳೆಲ್ಲವನ್ನೂ ಹೊಂದುವನು.

೫೩-೫೬. ಈ ದಿನದಲ್ಲಿಯೇ ಶ್ರೇಯೋಭಿಲಾಷೆಯುಳ್ಳವನು ಬ್ರಹ್ಮಕೂರ್ಚ ವ್ರತವನ್ನಾಚರಿಸಬೇಕು.

ಅದರ ವಿಧಾನ:— ಉಪವಾಸದಿಂದ ರಾತ್ರಿಯಲ್ಲಿ ಪಂಚಗವ್ಯಪ್ರಾಶನಮಾಡಿ ಜಿತೇಂದ್ರಿಯನಾಗಿರಬೇಕು. ಕಪಿಲಗೋವಿನಮೂತ್ರ, ಕರಿಯಗೋವಿನಸಗಣಿ,

ಗೃಹೀತ್ವಾ ಕರ್ಬುರಾಯಾಶ್ಚ ಘೃತಮೇಕತ್ರ ಮೇಲಯೇತ್ ।
ಕುಶಾಂಬುನಾ ತತಃ ಪ್ರಾತಃ ಸ್ನಾತ್ವಾ ಸಂತರ್ಪ್ಯ ದೇವತಾಃ ॥ ೫೫ ॥

ಬ್ರಾಹ್ಮಣಾಂಸ್ತೋಷಯಿತ್ವಾ ಚ ಭುಂಜೀಯಾದ್ವಾಗ್ಯತಃ ಸ್ವಯಂ ।
ಬ್ರಹ್ಮಕೂರ್ಚವ್ರತಂ ಹ್ಯೇತತ್ಸರ್ವಪಾತಕನಾಶನಂ ॥ ೫೬ ॥

ಯಚ್ಚ ಬಾಲ್ಯೇ ಕೃತಂ ಪಾಪಂ ಕೌಮಾರೇ ವಾರ್ಧಕೇಽಪಿ ಯತ್ ।
ಬ್ರಹ್ಮಕೂರ್ಚೋಪವಾಸೇನ ತತ್ ಕ್ಷಣಾದೇವ ನಶ್ಯತಿ ॥ ೫೭ ॥

ಪಾಷಾಣವ್ರತಮತ್ರೈವ ಪ್ರೋಕ್ತಂ ತಚ್ಛೃಣು ನಾರದ ।
ಸೋಪವಾಸೋ ದಿವಾ ನಕ್ತಂ ಪಾಷಾಣಾಕಾರ ಪಿಷ್ಟಕಂ ॥ ೫೮ ॥

ಪ್ರಾರ್ಚ್ಯ ಗಂಧಾದಿಭಿರ್ಗೌರೀಂ ಘೃತಪಕ್ವಮುಪಾಹರೇತ್ ।
ವ್ರತಮೇತಚ್ಚರಿತ್ವಾ ತು ಯಥೋಕ್ತಂ ದ್ವಿಜಸತ್ತಮ ॥ ೫೯ ॥

---

ಶುಕ್ಲಗೋವಿನಹಾಲು, ಕೆಂಪುಗೋವಿನಮೊಸರು, ಶಬಲಗೋವಿನತುಪ್ಪ ಈ ಐದನ್ನೂ ಒಟ್ಟಿಗೆಸೇರಿಸಿದುದು ಪಂಚಗವ್ಯವೆನಿಸುವುದು ಬೆಳಗ್ಗೆ ಎದ್ದು ಸ್ನಾನ ಮಾಡಿ ಕುಶೋದಕದಿಂದ ದೇವತೆಗಳ ತರ್ಪಣಮಾಡಿ, ಭೋಜನಾದಿಗಳಿಂದ ಬ್ರಾಹ್ಮಣರನ್ನು ಸಂತೋಷಪಡಿಸಿ, ಅನಂತರ ನಿಯಮದಿಂದ ತಾನು ಭೋಜನ ಮಾಡಬೇಕು ಇದೇ ಸಕಲ ಪಾಪಗಳನ್ನೂ ನಾಶಪಡಿಸುವಂತಹ ಬ್ರಹ್ಮ ಕೂರ್ಚವ್ರತವು.

೫೭. ಬಾಲ್ಯ, ಕೌಮಾರ, ವಾರ್ಧಕಾವಸ್ಥೆಗಳಲ್ಲಿ ಮಾಡಿದ ಪಾಪ ಗಳೆಲ್ಲವೂ ಬ್ರಹ್ಮಕೂರ್ಚೋಪವಾಸದಿಂದ ತಕ್ಷಣದಲ್ಲಿ ನಾಶವಾಗುವುವು.

೫೮-೬೦. ಈ ದಿನದಲ್ಲಿ ಪಾಷಾಣವ್ರತವೂ ವಿಹಿತವಾಗಿದೆ. ನಾರದನೇ! ನಿನಗೆ ಅದನ್ನು ಹೇಳುವೆನು, ಕೇಳು.

ಐಶ್ವರ್ಯಸೌಖ್ಯಸೌಭಾಗ್ಯರೂಪಾಣಿ ಪ್ರಾಪ್ನುಯಾನ್ನರಃ |
ಮಾರ್ಗಶುಕ್ಲಚತುರ್ದಶ್ಯಾಮೇಕಭಕ್ತಃ ಪುರೋದಿತಂ || ೬೦ ||

ನಿರಾಹಾರೋ ವೃಷಂ ಸ್ವರ್ಣಂ ಪ್ರಾರ್ಚ್ಯ ದದ್ಯಾದ್ದ್ವಿಜಾತಯೇ |
ಪರೇಹ್ನಿ ಪ್ರಾತರುತ್ಥಾಯ ಸ್ನಾತ್ವಾ ಸೋಮಮಹೇಶ್ವರಂ || ೬೧ ||

ಪೂಜಯೇತ್ಕಮಲೈಃ ಪುಷ್ಪೈರ್ಗಂಧಮಾಲ್ಯಾನುಲೇಪನೈಃ |
ದ್ವಿಜಾನ್ಸಂಭೋಜ್ಯ ಮಿಷ್ಟಾನ್ನೈಸ್ತೋಷಯೇದ್ದಕ್ಷಿಣಾದಿಭಿಃ || ೬೨ ||

ಏತಚ್ಛಿವವ್ರತಂ ವಿಪ್ರ ಭುಕ್ತಿಮುಕ್ತಿಪ್ರದಾಯಕಂ |
ಕರ್ತ್ರೂಣಾಮುಪದೇಷ್ಟ್ರೂಣಾಂ ಸಾಹ್ಯಾನಾಮನುಮೋದಿನಾಂ || ೬೩ ||

---

ಹಗಲು ರಾತ್ರಿ ಉಪವಾಸಮಾಡಿ ಗಂಧಾದಿಗಳಿಂದ ಗೌರಿಯನ್ನು ಪೂಜಿಸಿ, ಪಾಷಾಣಾಕಾರವಾದ ಹಿಟ್ಟನ್ನು ಘೃತಪಕ್ವಮಾಡಿ ಉಪಹಾರಮಾಡಬೇಕು.

ದ್ವಿಜವರ್ಯನೇ! ಈ ವ್ರತವನ್ನಾಚರಿಸಿದ ಮನುಷ್ಯನು ಐಶ್ವರ್ಯ, ಸೌಖ್ಯ, ಸೌಭಾಗ್ಯ, ಸೌಂದರ್ಯಗಳನ್ನು ಹೊಂದುವನು.

ಮಾರ್ಗಶೀರ್ಷ ಶುಕ್ಲ ಚತುರ್ದಶಿಯಲ್ಲಿ ಏಕಭುಕ್ತವು ಉಕ್ತವಾಗಿದೆ.

೬೧-೬೨ ಆದಿನದಲ್ಲಿ ನಿರಾಹಾರನಾಗಿ ಬಂಗಾರದ ಬಸವನನ್ನು ಪೂಜಿಸಿ ಬ್ರಾಹ್ಮಣನಿಗೆ ಅದನ್ನು ದಾನಮಾಡಬೇಕು. ಮಾರನೆಯದಿನ ಬೆಳಗ್ಗೆ ಎದ್ದು ಸ್ನಾನಮಾಡಿ ಸೋಮಮಹೇಶ್ವರನನ್ನು ಕಮಲಪುಷ್ಪ, ಗಂಧ, ಮಾಲಿಕೆ ಮತ್ತು ಅನುಲೇಪನೆಗಳಿಂದ ಪೂಜಿಸಬೇಕು. ಅನಂತರ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನಮಾಡಿಸಿ ದಕ್ಷಿಣೆಕೊಟ್ಟು, ಅವರನ್ನು ಸಂತೋಷಪಡಿಸಬೇಕು.

೬೩. ಈ ವ್ರತವನ್ನು ಆಚರಿಸುವವರು, ಉಪದೇಶಿಸುವವರು, ಇದಕ್ಕೆ ಸಹಾಯಕರು ಮತ್ತು ಅನುಮೋದಕರು ಇವರೆಲ್ಲರಿಗೂ ಈ ವ್ರತವು ಭೋಗಮೋಕ್ಷದಾಯಕವು. ಇದಕ್ಕೆ ಶಿವವ್ರತವೆಂದು ಹೆಸರು.

ಪೌಷಶುಕ್ಲಚತುರ್ದಶ್ಯಾಂ ವಿರೂಪಾಕ್ಷವ್ರತಂ ಸ್ಮೃತಂ |
ಕಪರ್ದೀಶ್ವರಸಾನ್ನಿಧ್ಯಂ ಪ್ರಾಪ್ಸ್ಯಾಮೀತಿ ವಿಚಿಂತ್ಯ ಚ || ೬೪ ||

ಸ್ನಾತ್ವಾಗಾಧಜಲೇ ವಿಪ್ರ ವಿರೂಪಾಕ್ಷಂ ಶಿವಂ ಯಜೇತ್ |
ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ || ೬೫ ||

ತತ್ಸ್ಥಂ ದ್ವಿಜಾತಯೇ ದತ್ವಾ ಮೋದತೇ ದಿವಿ ದೇವವತ್ |
ಮಾಘಕೃಷ್ಣಚತುರ್ದಶ್ಯಾಂ ಯಮತರ್ಪಣಮೀರಿತಂ || ೬೬ ||

ಅನರ್ಕಾಭ್ಯುದಿತೇ ಕಾಲೇ ಸ್ನಾತ್ವಾ ಸಂತರ್ಪಯೇದ್ಯಮಂ |
ದ್ವಿಸಪ್ತನಾಮಭಿಃ ಪ್ರೋಕ್ತೈಃ ಸರ್ವಪಾಪವಿಮುಕ್ತಯೇ || ೬೭ ||

ತಿಲದರ್ಭಾಂಬುಭಿಃ ಕಾರ್ಯಂ ತರ್ಪಣಂ ದ್ವಿಜಭೋಜನಂ |
ಕೃಶರಾನ್ನಂ ಸ್ವಯಂ ಚಾಪಿ ತದೇವಾಶ್ನೀತ ವಾಗ್ಯತಃ || ೬೮ ||

---

೬೪-೬೭. ಪುಷ್ಯ ಶುಕ್ಲ ಚತುರ್ದಶಿಯ ದಿನದಲ್ಲಿ ವಿರೂಪಾಕ್ಷವ್ರತವು ವಿಹಿತವಾಗಿದೆ. ಕಪರ್ದೀಶ್ವರ ಸಾನ್ನಿಧ್ಯವನ್ನು ಹೊಂದಬೇಕೆಂದು ಚಿಂತಿಸಿ, ಆಳವಾದನೀರಿನಲ್ಲಿ ಅವಗಾಹನಸ್ನಾನಮಾಡಿ, ವಿರೂಪಾಕ್ಷನಾಮಕನಾದ ಶಿವನನ್ನು ಗಂಧ, ಮಾಲಿಕೆ, ನಮಸ್ಕಾರ, ಧೂಪ, ದೀಪ, ಅನ್ನ ಮುಂತಾದ ಸಂಪತ್ತುಗಳಿಂದ ಪೂಜಿಸಿ, ಆ ಮೂರ್ತಿಯನ್ನು ಬ್ರಾಹ್ಮಣನಿಗೆ ಕೊಡುವವನು ಸ್ವರ್ಗಲೋಕದಲ್ಲಿ ದೇವತೆಯಂತೆ ಸಂತೋಷಪಡುವನು.

ಮಾಘ ಕೃಷ್ಣ ಚತುರ್ದಶಿಯ ದಿನದಲ್ಲಿ ಯಮತರ್ಪಣವು ವಿಹಿತವಾಗಿದೆ. ಸೂರ್ಯೋದಯಕ್ಕಿಂತ ಮುಂಚಿತವಾಗಿ ಸ್ನಾನಮಾಡಿ, ಹಿಂದೆ ಹೇಳಿರುವ ಹದಿನಾಲ್ಕು ಯಮನಾಮಗಳಿಂದ ಸಕಲ ಪಾಪಪರಿಹಾರಾರ್ಥವಾಗಿ ಯಮನಿಗೆ ತರ್ಪಣಕೊಡಬೇಕು.

೬೮. ಎಳ್ಳು, ದರ್ಭೆ, ನೀರುಗಳಿಂದ ತರ್ಪಣವನ್ನು ಮಾಡಬೇಕು. ಬಳಿಕ ಬ್ರಾಹ್ಮಣರಿಗೆ ಕೃಶರಾನ್ನಭೋಜನಮಾಡಿಸಿ ತಾನೂ ಅದನ್ನೇ ನಿಯಮದಿಂದ ತಿನ್ನಬೇಕು.

ಅಂತ್ಯಕೃಷ್ಣಚತುರ್ದಶ್ಯಾಂ ಶಿವರಾತ್ರಿವ್ರತಂ ದ್ವಿಜ ।
ನಿರ್ಜಲಂ ಸಮುಪೋಷ್ಯಾತ್ರ ದಿವಾ ನಕ್ತಂ ಪ್ರಪೂಜಯೇತ್ ॥ ೬೯ ॥

ಸ್ವಯಂಭುವಾದಿಕಂ ಲಿಂಗಂ ಪಾರ್ಥಿವಂ ವಾ ಸಮಾಹಿತಃ ।
ಗಂಧಾದ್ಯೈರುಪಚಾರೈಶ್ಚ ಸಾಂಬುಬಿಲ್ವದಲಾದಿಭಿಃ ॥ ೭೦ ॥

ಧೂಪೈರ್ದೀಪೈಶ್ಚ ನೈವೇದ್ಯೈಃ ಸ್ತೋತ್ರಪಾಠೈರ್ಜಪಾದಿಭಿಃ ।
ತತಃ ಪರೇಹ್ನಿ ಸಂಪೂಜ್ಯ ಪುನರೇವೋಪಚಾರಕೈಃ ॥ ೭೧ ॥

ಸಂಭೋಜ್ಯ ವಿಪ್ರಾನ್ಮಿಷ್ಟಾನ್ನೈರ್ವಿಸೃಜೇಲ್ಲಬ್ಧದಕ್ಷಿಣಾನ್ ।
ಏವಂ ಕೃತ್ವಾ ವ್ರತಂ ಮರ್ತ್ಯೋ ಮಹಾದೇವಪ್ರಸಾದತಃ ॥ ೭೨ ॥

ಅಮರ್ತ್ಯಭೋಗಾನ್ ಲಭತೇ ದೇವತ್ವೈಃ ಸುಸಭಾಜಿತಃ ।
ಅಂತ್ಯಶುಕ್ಲಚತುರ್ದಶ್ಯಾಂ ದುರ್ಗಾಂ ಸಂಪೂಜ್ಯಭಕ್ತಿತಃ ॥ ೭೩ ॥

---

೬೯-೭೬. ದ್ವಿಜನೇ ! ಫಾಲ್ಗುಣಕೃಷ್ಣಚತುರ್ದಶಿಯ ದಿನದಲ್ಲಿ ಶಿವರಾತ್ರಿ ವ್ರತವು ವಿಹಿತವಾಗಿದೆ. ಆದಿನ ಹಗಲು ರಾತ್ರಿ ಉಪವಾಸಮಾಡಿ, ಸ್ವಯಂಭೂ ಲಿಂಗ ಅಥವಾ ಪಾರ್ಥಿವಲಿಂಗವನ್ನು ಗಂಧಾದ್ಯುಪಚಾರಗಳು, ಜಲ, ಬಿಲ್ವಪತ್ರೆ ಮುಂತಾದುವುಗಳಿಂದ ಸಮಾಹಿತನಾಗಿ ಪೂಜಿಸಿ ಧೂಪದೀಪನೈವೇದ್ಯಗಳನ್ನರ್ಪಿಸಿ, ಸ್ತೋತ್ರಪಾಠ, ಜಪಾದಿಗಳಿಂದ ಆ ದಿನವನ್ನು ಕಳೆದು ಮಾರನೆಯದಿನ ಷೋಡಶೋಪಚಾರಗಳಿಂದ ಪುನಃ ಪೂಜೆಮಾಡಿ, ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನಮಾಡಿಸಿ, ದಕ್ಷಿಣೆಕೊಟ್ಟು ವಿಸರ್ಜನೆಮಾಡಬೇಕು.

ಈ ರೀತಿಯಾಗಿ ವ್ರತವನ್ನಾಚರಿಸಿದ ಮನುಷ್ಯನು ಮಹಾದೇವನ ಅನುಗ್ರಹದಿಂದ ದೇವತೆಗಳಿಂದ ಪೂಜಿತನಾಗಿ ಅಮಾನುಷ ಭೋಗಗಳನ್ನನುಭವಿಸುವನು.

ಗಂಧಾದ್ಯೈರುಪಚಾರೈಸ್ತು ವಿಪ್ರಾನ್ಸಂಭೋಜಯೇತ್ತತಃ ।
ಏವಂ ಕೃತ್ವಾ ವ್ರತಂ ವಿಪ್ರ ದುರ್ಗಾಯಾಶ್ಚೈಕಭೋಜನಃ ॥ ೭೪ ॥

ಲಭತೇ ವಾಂಛಿತಾನ್ಕಾಮಾನಿಹಾಮುತ್ರ ಚ ನಾರದ ।
ಚೈತ್ರಕೃಷ್ಣಚತುರ್ದಶ್ಯಾಮುಪವಾಸಂ ವಿಧಾಯ ಚ ॥ ೭೫ ॥

ಕೇದಾರೋದಕಪಾನೇನ ವಾಜಿಮೇಧಫಲಂ ಲಭೇತ್ ।
ಉದ್ಯಾಪನೇ ತು ಸರ್ವೇಷಾಂ ಸಾಮಾನ್ಯೋ ವಿಧಿರುಚ್ಯತೇ ॥ ೭೬ ॥

ಕುಂಭಾಶ್ಚತುರ್ದಶೈವಾತ್ರ ಸಪೂಗಾಕ್ಷತಮೋದಕಾಃ ।
ಸದಕ್ಷಿಣಾಂಶುಕಾಸ್ತಾಮ್ರಾ ಮೃನ್ಮಯಾಶ್ಚಾವ್ರಣಾ ನವಾಃ ॥ ೭೭ ॥

---

ಫಾಲ್ಗುಣಶುಕ್ಲಚತುರ್ದಶಿಯ ದಿನದಲ್ಲಿ ಭಕ್ತಿಪೂರ್ವಕವಾಗಿ ಗಂಧ ಮುಂತಾದ ಉಪಚಾರಗಳಿಂದ ದುರ್ಗಾದೇವಿಯನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

ಈರೀತಿಯಾಗಿ ಒಪ್ಪತ್ತೂಟಮಾಡಿ ದುರ್ಗಾವ್ರತವನ್ನಾಚರಿಸಿದವನು ಇಹಪರಗಳಲ್ಲಿ ಅಭೀಷ್ಟಗಳನ್ನು ಹೊಂದುವನು.

ಚೈತ್ರಕೃಷ್ಣಚತುರ್ದಶಿಯ ದಿನದಲ್ಲಿ ಉಪವಾಸಮಾಡಿ ಕೇದಾರೋದಕ ಪಾನಮಾಡಿದರೆ ಅಶ್ವಮೇಧಯಜ್ಞದ ಫಲವು ಬರುವುದು.

ಸಕಲವ್ರತಗಳಿಗೂ ಸಾಮಾನ್ಯವಾದ ಉದ್ಯಾಪನಾವಿಧಾನವನ್ನು ಹೇಳು ವೆನು.

೭೭. ಈ ಉದ್ಯಾಪನೆಗಳಲ್ಲಿ ಹದಿನಾಲ್ಕು ಕಲಶಗಳನ್ನು ಅಡಿಕೆ ಅಕ್ಷತೆ, ಮೋದಕ, ದಕ್ಷಿಣೆ, ವಸ್ತ್ರಸಹಿತವಾಗಿ ಸ್ಥಾಪಿಸಬೇಕು. ಆ ಕಲಶಗಳು ತಾಮ್ರ ಅಥವಾ ಮಣ್ಣಿನಿಂದ ಹೊಸದಾಗಿ ಮಾಡಿದುವುಗಳಾಗಿರಬೇಕು. ಮತ್ತು ವಡ ಕಾಗಿರಬಾರದು.

**ತಾವಂತೋ ವಂಶದಂಡಾಶ್ಚ ಪವಿತ್ರಾಣ್ಯಾಸನಾನಿ ಚ ।**
**ಪಾತ್ರಾಣಿ ಯಜ್ಞಸೂತ್ರಾಣಿ ತಾವಂತ್ಯೇವ ಹಿ ಕಲ್ಪಯೇತ್　　॥ ೭೮ ॥**

**ಶೇಷಂ ಪ್ರಾಗುಕ್ತವತ್ಕುರ್ಯಾದ್ವಿತ್ತಶಾಠ್ಯವಿವರ್ಜಿತಃ　　॥ ೭೯ ॥**

**ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸ ಚತುರ್ದಶೀವ್ರತ ನಿರೂಪಣಂ ನಾಮ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ**

---

೭೮. ಕಲಶಗಳಷ್ಟು ಬಿದಿರುದಂಡಗಳು, ಪವಿತ್ರವಾದ ಆಸನಗಳು, ಪಾತ್ರೆಗಳು, ಯಜ್ಞೋಪವೀತಗಳು ಇವೆಲ್ಲವನ್ನೂ ಹದಿನಾಲ್ಕರಂತೆ ಇಡಬೇಕು.

೭೯. ಉಳಿದುದನ್ನು ಹಿಂದೆ ಹೇಳಿರುವಂತೆ ಲೋಭವಾಡದೇ ತನ್ನ ವಿಭವಾನುಸಾರವಾಗಿ ನಡೆಯಿಸಬೇಕು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳ ಚತುರ್ದಶೀ ವ್ರತವಿಧಾನಕಥನವೆಂಬ ನೂರಿಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.



## ಚತುಶ್ಚತ್ವಾರಿಂಶತ್ಯಧಿಕಶತತಮೋಽಧ್ಯಾಯಃ

### ಸನಾತನ ಉವಾಚ

ಅಥ ನಾರದ ವಕ್ಷ್ಯಾಮಿ ಶೃಣು ಪೂರ್ಣಾವ್ರತಾನಿ ತೇ ।
ಯಾನಿ ಕೃತ್ವಾ ನರೋ ನಾರೀ ಪ್ರಾಪ್ನುಯಾತ್ಸುಖಸಂತತಿಂ ॥ ೧ ॥

ಚೈತ್ರಪೂರ್ಣಾ ತು ವಿಪ್ರೇಂದ್ರ ಮನ್ವಾದಿಃ ಸಮುದಾಹೃತಾ ।
ಅಸ್ಯಾಂ ಸಾನ್ನೋದಕಂ ಕುಂಭಂ ಪ್ರದದ್ಯಾತ್ಸೋಮತುಷ್ಟಯೇ ॥ ೨ ॥

ವೈಶಾಖ್ಯಾಮಪಿ ಪೂರ್ಣಾಯಾಂ ದಾನಂ ಸರ್ವಸ್ಯ ಸರ್ವದಂ ।
ಯದ್ಯದ್ದ್ರವ್ಯಂ ದದೇದ್ವಿಪ್ರೇ ತತ್ತದಾಪ್ನೋತಿ ನಿಶ್ಚಿತಂ ॥ ೩ ॥

---

## ನೂರಿಪ್ಪತ್ತುನಾಲ್ಕನೆಯ ಅಧ್ಯಾಯವು

೧. ಸನಾತನನು ಹೇಳಿದನು :—ನಾರದನೇ ! ಪುರುಷ ಅಥವಾ ಸ್ತ್ರೀಯು ಯಾವ ವ್ರತಗಳನ್ನು ಮಾಡಿ ಸುಖಪರಂಪರೆಗಳನ್ನು ಪಡೆಯುವರೋ ಅಂತಹ ಪೂರ್ಣಿಮಾವ್ರತಗಳನ್ನು ಈಗ ನಿನಗೆ ಹೇಳುವೆನು, ಕೇಳು.

೨. ಬ್ರಾಹ್ಮಣಶ್ರೇಷ್ಠನೇ ! ಚೈತ್ರಮಾಸದ ಪೂರ್ಣಿಮೆಯು ಮನ್ವಾದಿಯೆಂದು ಉಕ್ತವಾಗಿದೆ. ಈ ದಿನದಲ್ಲಿ ಚಂದ್ರತೃಪ್ತಿಗಾಗಿ ಅನ್ನೋದಕಸಹಿತವಾದ ಕುಂಭವನ್ನು ದಾನಮಾಡಬೇಕು.

೩. ವೈಶಾಖಮಾಸದ ಪೂರ್ಣಿಮೆಯಲ್ಲಿ ಎಲ್ಲಾ ವಸ್ತುಗಳ ದಾನವೂ ಆಯಾಯಾ ಫಲಗಳನ್ನು ಕೊಡುತ್ತದೆ. ಬ್ರಾಹ್ಮಣನಿಗೆ ಯಾವ ಯಾವ ವಸ್ತುವನ್ನು ದಾನಮಾಡುವನೋ ಅವನು ಅಂತಹ ವಸ್ತುಗಳನ್ನೇ ಹೊಂದುವನು, ಖಂಡಿತ.

ಧರ್ಮರಾಜವ್ರತಂ ಚಾತ್ರ ಕಥಿತಂ ತನ್ನಿಶಾಮಯ |
ಘೃತಾನ್ನಮುದಕುಂಭಂ ಚ ವೈಶಾಖ್ಯಾಂ ವೈ ದ್ವಿಜೋತ್ತಮೇ || ೪ ||

ದದ್ಯಾದ್ಗೋದಾನಫಲದಂ ಧರ್ಮರಾಜಸ್ಯ ತುಷ್ಟಯೇ |
ಅತ್ರ ಕೃಷ್ಣಾಜಿನಂ ದದ್ಯಾತ್ಸಖುರಂ ಚ ಸಶೃಂಗಕಂ || ೫ ||

ತಿಲೈಃ ಸಹ ಸಮಾಚ್ಛಾದ್ಯ ವಸ್ತ್ರೈರ್ಹೇಮ್ನಾ ದ್ವಿಜಾತಯೇ |
ಯಸ್ತು ಕೃಷ್ಣಾಜಿನಂ ದದ್ಯಾತ್ಸತ್ಕೃತ್ಯ ವಿಧಿಪೂರ್ವಕಂ || ೬ ||

ಸರ್ವಶಾಸ್ತ್ರವಿದೇ ಸಪ್ತದ್ವೀಪಭೂಮಿಪ್ರದಃ ಸ ವೈ |
ಮೋದತೇ ವಿಷ್ಣುಲೋಕೇ ಹಿ ಯಾವಚ್ಚಂದ್ರಾರ್ಕತಾರಕಂ || ೭ ||

ಕುಂಭಾನ್ಸ್ವಚ್ಛಜಲೈಃ ಪೂರ್ಣಾನ್ಹಿರಣ್ಯೇನ ಸಮನ್ವಿತಾನ್ |
ಯಃ ಪ್ರದದ್ಯಾದ್ದ್ವಿಜಾಗ್ರ್ಯೇಭ್ಯಃ ಸ ನ ಶೋಚತಿ ಕರ್ಹಿಚಿತ್ || ೮ ||

---

೪-೫ ಈ ದಿನದಲ್ಲಿ ಧರ್ಮರಾಜವ್ರತವು ವಿಹಿತವಾಗಿದೆ. ಅದರ ವಿಧಾನವನ್ನು ಕೇಳು. ವೈಶಾಖಶುಕ್ಲ ಪೂರ್ಣಿಮೆಯಲ್ಲಿ ಧರ್ಮರಾಜನ ತೃಪ್ತ್ಯರ್ಥವಾಗಿ ದ್ವಿಜೋತ್ತಮನಿಗೆ ಘೃತಾನ್ನ ಮತ್ತು ಉದಕುಂಭಗಳನ್ನು ದಾನಮಾಡಿದರೆ ದಾನಮಾಡಿದ ಫಲವು ಲಭಿಸುವುದು ಈ ದಿನದಲ್ಲಿ ಗೊರಸು ಮತ್ತು ಕೊಂಬುಸಹಿತವಾದ ಕೃಷ್ಣಾಜಿನವನ್ನು ದಾನಮಾಡಬೇಕು.

೬-೭. ಕೃಷ್ಣಾಜಿನವನ್ನು ವಸ್ತ್ರಗಳಿಂದ ಮುಚ್ಚಿ ಅದನ್ನು ಎಳ್ಳು ಮತ್ತು ಬಂಗಾರಸಹಿತವಾಗಿ ಸಕಲಶಾಸ್ತ್ರಜ್ಞನಾದ ಬ್ರಾಹ್ಮಣನಿಗೆ ಸತ್ಕಾರಪೂರ್ವಕವಾಗಿ ವಿಧಾನೋಕ್ತಪ್ರಕಾರ ದಾನಮಾಡುವವನು ಸಪ್ತದ್ವೀಪದಷ್ಟು ಭೂಮಿಯನ್ನು ದಾನಮಾಡಿದುದರ ಫಲವನ್ನು ಹೊಂದುವನು. ಅವನು ಚಂದ್ರಸೂರ್ಯನಕ್ಷತ್ರಗಳಿರುವವರೆಗೂ ವಿಷ್ಣುಲೋಕದಲ್ಲಿ ನೆಲೆಸಿ ಸುಖಪಡುವನು.

೮. ಆದಿನ ನಿರ್ಮಲನೀರನ್ನು ತುಂಬಿ ಕುಂಭಗಳನ್ನು ಹಿರಣ್ಯಸಹಿತವಾಗಿ ಶ್ರೇಷ್ಠದ್ವಿಜರಿಗೆ ದಾನಮಾಡುವವನು ಯಾವಾಗಲೂ ದುಃಖಭಾಗಿಯಾಗುವುದಿಲ್ಲ.

ಅಥ ಜ್ಯೈಷ್ಠಸ್ಯ ಪೂರ್ಣಾಯಾಂ ವಟಸಾವಿತ್ರಿಕಂ ವ್ರತಂ ।
ಸೋಪವಾಸಾ ವಟಂ ಸಿಂಚೇತ್ಸಲಿಲೈರಮೃತೋಪಮೈಃ ॥ ೯ ॥

ಸೂತ್ರೇಣ ವೇಷ್ಟಯೇಚ್ಚೈವ ಶತಾಷ್ಟಪ್ರದಕ್ಷಿಣಂ ।
ತತಃ ಸಂಪ್ರಾರ್ಥಯೇದ್ದೇವೀಂ ಸಾವಿತ್ರೀಂ ಸುಪತಿವ್ರತಾಂ ॥ ೧೦ ॥

ಜಗತ್ಪೂಜ್ಯೇ ಜಗನ್ಮಾತಃ ಸಾವಿತ್ರಿ ಪತಿದೈವತೇ ।
ಪತ್ಯಾ ಸಹಾವಿಯೋಗಂ ಮೇ ವಟಸ್ಥೇ ಕುರು ತೇ ನಮಃ ॥ ೧೧ ॥

ಇತಿ ಸಂಪ್ರಾರ್ಥ್ಯ ಯಾ ನಾರೀ ಭೋಜಯಿತ್ವಾ ಪರೇಹನಿ ।
ಸುವಾಸಿನೀಃ ಸ್ವಯಂ ಭುಂಜ್ಯಾತ್ಸಾ ಸ್ಯಾತ್ಸೌಭಾಗ್ಯಭಾಗಿನೀ ॥ ೧೨ ॥

---

೯-೧೦. ಜ್ಯೇಷ್ಠಮಾಸದ ಪೂರ್ಣಿಮಾ ದಿನದಲ್ಲಿ ವಟಸಾವಿತ್ರೀವ್ರತವು ವಿಹಿತವಾಗಿದೆ. ಅದರ ವಿಧಾನ:—ನಾರಿಯು ಉಪವಾಸದಿಂದ ಅಮೃತಸದೃಶವಾದ ನೀರಿನಿಂದ ಆಲದಮರಕ್ಕೆ ಸೇಚನೆಮಾಡಬೇಕು. ಆ ವಟವನ್ನು ದಾರದಿಂದ ಸುತ್ತಬೇಕು. ಬಳಿಕ ನೂರೆಂಟು ಪ್ರದಕ್ಷಿಣೆಮಾಡಿ ಪತಿವ್ರತಾಶಿರೋಮಣಿಯಾದ ಸಾವಿತ್ರೀದೇವಿಯನ್ನು ಪ್ರಾರ್ಥಿಸಬೇಕು.

೧೧-೧೨. 'ಈ ವಟವೃಕ್ಷದಲ್ಲಿ ಸನ್ನಿಹಿತಳಾಗಿರುವ ಲೋಕಪೂಜ್ಯಳಾದ, ಪತಿಯನ್ನೇ ಪರದೈವವೆಂದು ತಿಳಿದಿರುವ, ಜಗನ್ಮಾತೆಯಾದ ಸಾವಿತ್ರೀದೇವಿಯೇ ! ನನಗೆ ಪತಿಯ ವಿಯೋಗವಾಗದಂತೆ ಅನುಗ್ರಹಿಸು. ನಿನಗೆ ನಮಸ್ಕಾರಮಾಡುವೆನು' ಎಂದು ಪ್ರಾರ್ಥಿಸಿ, ಯಾವ ಹೆಂಗಸು ಮಾರನೆಯ ದಿನದಲ್ಲಿ ಮುತ್ತೈದೆಯರಿಗೆ ಭೋಜನಮಾಡಿಸಿ ಅನಂತರ ತಾನು ಭೋಜನಮಾಡುವಳೋ ಆ ನಾರಿಯು ಸೌಭಾಗ್ಯಶಾಲಿನಿಯಾಗುವಳು.

ಆಷಾಢಸ್ಯ ತು ಪೂರ್ಣಾಯಾಂ ಗೋಪಯೋವ್ರತಮುಚ್ಯತೇ ।
ಚತುರ್ಭುಜಂ ಮಹಾಕಾಯಂ ಜಾಂಬೂನದಸಮಪ್ರಭಂ ॥ ೧೩ ॥

ಶಂಖಚಕ್ರಗದಾಪದ್ಮರಮಾಗರುಡಶೋಭಿತಂ ।
ಸೇವಿತಂ ಮುನಿಭಿರ್ದೇವೈರ್ಯಕ್ಷಗಂಧರ್ವಕಿನ್ನರೈಃ ॥ ೧೪ ॥

ಏವಂ ವಿಧಂ ಹರಿಂ ತತ್ರ ಸ್ನಾತ್ವಾ ಪೂಜಾಂ ಸಮಾಚರೇತ್ ।
ಪೌರುಷೇಣೈವ ಸೂಕ್ತೇನ ಗಂಧಾದ್ಯೈರುಪಚಾರಕೈಃ ॥ ೧೫ ॥

ಆಚಾರ್ಯಂ ವಸ್ತ್ರಭೂಷಾದ್ಯೈಸ್ತೋಷಯೇತ್ಸ್ನಿಗ್ಧಮಾನಸಃ ।
ಭೋಜಯೇನ್ಮಿಷ್ಟಪಕ್ವಾನ್ನೈರ್ದ್ವಿಜಾನನ್ಯಾಂಶ್ಚ ಶಕ್ತಿತಃ ॥ ೧೬ ॥

ಏವಂ ಕೃತ್ವಾ ವ್ರತಂ ವಿಪ್ರ ಪ್ರಸಾದಾತ್ಕಮಲಾಪತೇಃ ।
ಐಹಿಕಾಮುಷ್ಮಿಕಾನ್ಕಾಮಾನ್ ಲಭತೇ ನಾತ್ರ ಸಂಶಯಃ ॥ ೧೭ ॥

---

೧೩-೧೫. ಆಷಾಢಪೂರ್ಣಿಮೆಯದಿನದಲ್ಲಿ ಗೋಪಯೋವ್ರತವು ವಿಹಿತವಾಗಿದೆ. ಆದಿನ ಸ್ನಾನಮಾಡಿ ಚತುರ್ಭುಜನು, ಮಹಾಶರೀರನು, ಬಂಗಾರದಂತೆ ಹೊಳೆಯುತ್ತಿರುವವನು, ಶಂಖ, ಚಕ್ರ, ಗದಾ, ಪದ್ಮ, ರಮಾ, ಗರುಡ, ಇವರಿಂದಲಂಕೃತನು, ಮುನಿಗಳು, ದೇವ, ಯಕ್ಷ, ಗಂಧರ್ವ, ಕಿನ್ನರರಿಂದ ಸೇವಿಸಲ್ಪಡುತ್ತಿರುವವನೂ ಆಗಿರುವ ಹರಿಗೆ ಪುರುಷಸೂಕ್ತದಿಂದ ಅಭಿಷೇಕಮಾಡಿ ಗಂಧಾದ್ಯುಪಚಾರಗಳಿಂದ ಪೂಜೆಯನ್ನು ಮಾಡಬೇಕು.

೧೬. ಆಚಾರ್ಯರನ್ನು ಭಕ್ತಿಪೂರ್ವಕವಾಗಿ ವಸ್ತ್ರಾಭರಣಗಳಿಂದ ಸಂತೋಷಪಡಿಸಿ, ಅವರಿಗೂ ಇತರ ಬ್ರಾಹ್ಮಣರಿಗೂ ಸಹ ತನ್ನ ಶಕ್ತ್ಯನುಸಾರವಾಗಿ ಭೋಜನಮಾಡಿಸಬೇಕು.

೧೭. ಈರೀತಿಯಾಗಿ ವ್ರತವನ್ನಾಚರಿಸಿದವನು ಲಕ್ಷ್ಮೀಪತಿಯ ಅನುಗ್ರಹದಿಂದ ಐಹಿಕಾಮುಷ್ಮಿಕಾಭೀಷ್ಟಗಳನ್ನು ಹೊಂದುವನು, ಸಂದೇಹವಿಲ್ಲ.

**ಕೋಕಿಲಾವ್ರತಮಪ್ಯತ್ರ ಪ್ರೋಕ್ತಂ ತದ್ವಿಧಿರುಚ್ಯತೇ ।**
**ಪೂರ್ಣಿಮಾಯಾಂ ಸಮಾರಭ್ಯ ವ್ರತಂ ಸ್ನಾಯಾದ್ಬಹಿರ್ಜಲೇ ॥ ೧೮ ॥**

**ಪೂರ್ಣಾಂತಂ ಶ್ರಾವಣೇ ಮಾಸಿ ಗೌರೀರೂಪಾಂ ಚ ಕೋಕಿಲಾಂ ।**
**ಸ್ವರ್ಣಪಕ್ಷಾಂ ರತ್ನನೇತ್ರಾಂ ಪ್ರವಾಲಮುಖಪಂಕಜಾಂ ॥ ೧೯ ॥**

**ಕಸ್ತೂರೀವರ್ಣಸಂಯುಕ್ತಾಮುತ್ಪನ್ನಾಂ ನಂದನೇ ವನೇ ।**
**ಚೂತಚಂಪಕವೃಕ್ಷಸ್ಥಾಂ ಕಲಗೀತನಿನಾದಿನೀಂ ॥ ೨೦ ॥**

**ಚಿಂತಯೇತ್ಪಾರ್ವತೀಂ ದೇವೀಂ ಕೋಕಿಲಾರೂಪಧಾರಿಣೀಂ ।**
**ಗಂಧಾದ್ಯೈಃ ಪ್ರತ್ಯಹಂ ಪ್ರಾರ್ಚೇಲ್ಲಿಖಿತಾಂ ವರ್ಣಕೈಃ ಪಟೇ ॥ ೨೧ ॥**

**ತತೋ ವ್ರತಾಂತೇ ಹೈಮೀಂ ವಾ ತಿಲಪಿಷ್ಟಮಯೀಂ ದ್ವಿಜ ।**
**ದದ್ಯಾದ್ವಿಪ್ರಾಯ ಮಂತ್ರೇಣ ಭಕ್ತ್ಯಾ ಸಸ್ವರ್ಣದಕ್ಷಿಣಾಂ ॥ ೨೨ ॥**

---

೧೮-೨೧. ಈ ದಿನದಲ್ಲಿ ಕೋಕಿಲಾವ್ರತವೂ ಸಹ ಉಕ್ತವಾಗಿದೆ. ಅದರ ವಿಧಾನವನ್ನು ಹೇಳುವೆನು :— ಈ ಪೂರ್ಣಿಮೆಯಿಂದ ಶ್ರಾವಣಮಾಸದ ಪೂರ್ಣಿಮೆಯುವರೆಗೆ ನದೀ ಮುಂತಾದ ಬಾಹ್ಯಜಲದಲ್ಲಿ ಸ್ನಾನಮಾಡಬೇಕು. ಬಳಿಕ ಬಂಗಾರದಂತೆ ಹೊಳೆಯುವ ರೆಕ್ಕೆ, ರತ್ನದಂತಿರುವ ನೇತ್ರ, ಹವಳದೋಪಾದಿಯಲ್ಲಿರುವ ಮುಖಕಮಲ, ಕಸ್ತೂರಿಯಬಣ್ಣ ಇವುಗಳುಳ್ಳ, ನಂದನವನದಲ್ಲಿ ಹುಟ್ಟಿದ ಮಾವು ಮತ್ತು ಸಂಪಿಗೆಯ ವೃಕ್ಷದಲ್ಲಿರುವ, ಅವ್ಯಕ್ತಮಧುರಧ್ವನಿಯಿಂದ ಗಾನಮಾಡುತ್ತಿರುವ ಕೋಗಿಲೆಯರೂಪವನ್ನು ಧರಿಸಿದ ಗೌರೀರೂಪಿಣಿಯಾದ ಪಾರ್ವತೀದೇವಿಯನ್ನು ಧ್ಯಾನಿಸಬೇಕು. ಆ ದೇವಿಯ ಆಕೃತಿಯನ್ನು ವಸ್ತ್ರದಮೇಲೆ ವರ್ಣಕಗಳಿಂದ ಬರೆದು ಅದನ್ನು ಪ್ರತಿದಿನವೂ ಗಂಧಾದಿಗಳಿಂದ ಪೂಜಿಸಬೇಕು.

೨೨. ಅನಂತರ ವ್ರತವು ಮುಗಿದಮೇಲೆ ಬಂಗಾರ ಅಥವಾ ತಿಲಪಿಷ್ಟದಿಂದ ಮಾಡಿದ ಆ ಗೌರಿಯ ಪ್ರತಿಮೆಯನ್ನು ಬಂಗಾರದ ದಕ್ಷಿಣೆಸಹಿತವಾಗಿ ಭಕ್ತಿಯಿಂದ ಈ ಮಂತ್ರವನ್ನು ಹೇಳಿ ಬ್ರಾಹ್ಮಣನಿಗೆ ದಾನಮಾಡಬೇಕು.

ದೇವೀ ಚೈತ್ರರಥೋತ್ಪನ್ನೇ ಕೋಕಿಲೇ ಹರವಲ್ಲಭೇ |
ಸಂಪೂಜ್ಯ ದತ್ತಾ ವಿಪ್ರಾಯ ಸರ್ವಸೌಖ್ಯಕರೀ ಭವ || ೨೩ ||

ದ್ವಿಜಂ ಸುವಾಸಿನೀಸ್ತ್ರಿಂಶದೇಕಾಂ ವಾ ಭೋಜಯೇತ್ತತಃ |
ವಸ್ತ್ರಾದಿದಕ್ಷಿಣಾಂ ಶಕ್ತ್ಯಾ ದತ್ವಾ ನತ್ವಾ ವಿಸರ್ಜಯೇತ್ || ೨೪ ||

ಏವಂ ಯಾ ಕುರುತೇ ನಾರೀ ಕೋಕಿಲಾವ್ರತಮುತ್ತಮಂ |
ಸಾ ಲಭೇತ್ಸುಖಸೌಭಾಗ್ಯಂ ಸಪ್ತಜನ್ಮಸು ನಾರದ || ೨೫ ||

ಅಥ ಶ್ರಾವಣಪೂರ್ಣಾಯಾಂ ವೇದೋಪಾಕರಣಂ ಸ್ಮೃತಂ |
ಯಜುರ್ಭಿಸ್ತತ್ರ ಕರ್ತವ್ಯಂ ದೇವರ್ಷಿಪಿತೃತರ್ಪಣಂ || ೨೬ ||

ಋಷೀಣಾಂ ಪೂಜನಂ ಚಾಪಿ ಸ್ವಶಾಖೋಕ್ತವಿಧಾನತಃ |
ಬಹ್ವೃಚೈಸ್ತು ಚತುರ್ದಶ್ಯಾಂ ಸಾಮಗೈರ್ಭಾದ್ರಗೇ ಕರೇ || ೨೭ ||

---

೨೩. ಮಂತ್ರ:— "ಚೈತ್ರರಥವೆಂಬ ಉದ್ಯಾನವನದಲ್ಲಿ ಹುಟ್ಟಿದ, ಈಶ್ವರಪ್ರಿಯಳಾದ ಕೋಕಿಲದೇವಿಯೇ! ನಿನ್ನನ್ನು ಪೂಜಿಸಿ ಬ್ರಾಹ್ಮಣನಿಗೆ ದಾನಮಾಡಿರುವೆನು, ನೀನು ನನಗೆ ಸಕಲಸೌಖ್ಯಗಳನ್ನೂ ದಯಪಾಲಿಸು."

೨೪. ಅನಂತರ ಬ್ರಾಹ್ಮಣ ಮತ್ತು ಮೂವತ್ತು ಇಲ್ಲವೇ ಒಬ್ಬ ಮುತ್ತೈದೆಗಾದರೂ ಭೋಜನಮಾಡಿಸಿ ತನ್ನ ಶಕ್ತ್ಯನುಸಾರವಾಗಿ ವಸ್ತ್ರ ದಕ್ಷಿಣೆ ಮುಂತಾದುವನ್ನು ಕೊಟ್ಟು ನಮಸ್ಕಾರಮಾಡಿ ವಿಸರ್ಜನೆ ಮಾಡಬೇಕು.

೨೫. ನಾರದನೇ! ಈರೀತಿಯಾಗಿ ಉತ್ತಮವಾದ ಕೋಕಿಲಾವ್ರತವನ್ನು ಮಾಡುವ ನಾರಿಯು ಏಳುಜನ್ಮಗಳತನಕ ಸುಖಸೌಭಾಗ್ಯಗಳನ್ನು ಹೊಂದುವಳು.

೨೬-೨೭. ಶ್ರಾವಣಮಾಸದ ಪೂರ್ಣಿಮೆಯಲ್ಲಿ ವೇದಸ್ವೀಕಾರವ್ರತ ಎಂದರೆ ಉಪಾಕರ್ಮವು ವಿಹಿತವಾಗಿದೆ. ಯಜುರ್ವೇದಿಗಳು ತಮ್ಮ ಶಾಖೋಕ್ತವಿಧಾನಾನುಸಾರವಾಗಿ ಋಷಿಪೂಜೆಯನ್ನುಮಾಡಿ ದೇವ, ಋಷಿ, ಪಿತೃತರ್ಪಣಗಳನ್ನು ಮಾಡಬೇಕು.

ರಕ್ಷಾವಿಧಾನೇ ಚ ತಥಾ ಕರ್ತವ್ಯಂ ವಿಧಿಪೂರ್ವಕಂ || ೨೮ ||

ಸಿದ್ಧಾರ್ಥಾಕ್ಷತರಾಜಿಕಾಶ್ಚ ವಿಧೃತಾ ರಕ್ತಾಂಶುಕಾಶೋಭಿತಾಃ
ಕೌಸುಂಭೇನ ಚ ತಂತುನಾಥ ಸಲಿಲೈಃ ಪ್ರಕ್ಷಾಲ್ಯ ಕಾಂಸ್ಯೇ ಧೃತಾಃ |
ಗಂಧಾದ್ಯೈರಭಿಪೂಜ್ಯ ದೇವನಿಕರಾನ್ಸಂಪ್ರಾರ್ಥ್ಯ ವಿಷ್ಣ್ವಾದಿಕಾನ್
ಬಧ್ನೀಯಾದ್ದ್ವಿಜಹಸ್ತತಃ ಪ್ರಮುದಿತೋ ನತ್ವಾ ಪ್ರಕೋಷ್ಠೇ ಸ್ವಕೇ ||

ತತಸ್ತು ದಕ್ಷಿಣಾಂ ದತ್ವಾ ದ್ವಿಜೇಭ್ಯೋ ಧ್ಯಾನಮಾಚರೇತ್ |
ವಿಸೃಜ್ಯ ಚ ಋಷೀನ್ಸಪ್ತ ಧಾರಯೇದ್ಬ್ರಹ್ಮಸೂತ್ರಕಂ || ೩೦ ||

ರಂಜಿತಂ ಕುಂಕುಮಾದ್ಯೈಶ್ಚ ನವೀನಂ ನಿರ್ಮಿತಂ ಸ್ವಯಂ |
ಶಕ್ತ್ಯಾ ಸಂಭೋಜ್ಯ ವಿಪ್ರಾಗ್ರ್ಯಾನೇಕಭುಕ್ತಂ ಸಮಾಚರೇತ್ || ೩೧ ||

---

ಋಗ್ವೇದಿಗಳು ಚತುರ್ದಶಿಯ ದಿನದಲ್ಲಿಯೂ, ಸಾಮವೇದಿಗಳು ಭಾದ್ರಪದಮಾಸದಲ್ಲಿಯೂ ಉಪಾಕರ್ಮವನ್ನಾಚರಿಸಬೇಕು. ಅಂತೆಯೇ ವಿಧಿಪೂರ್ವಕವಾಗಿ ರಕ್ಷಾವಿಧಾನವನ್ನೂ ಆಚರಿಸಬೇಕು.

೨೯. ರಕ್ತವಸ್ತ್ರದಿಂದಲಂಕೃತಗಳಾದ, ಸಿದ್ಧಾರ್ಥಾಕ್ಷತೆ, ರಾಜಸರ್ಷಪಗಳನ್ನು ತೆಗೆದುಕೊಂಡು ನೀರಿನಿಂದ ತೊಳೆದು ಕಂಚಿನಪಾತ್ರೆಯಲ್ಲಿಟ್ಟು ವಿಷ್ಣ್ವಾದಿದೇವಸಮೂಹಗಳನ್ನು ಪ್ರಾರ್ಥಿಸಿ ನಮಸ್ಕರಿಸಿ ಸಂತುಷ್ಟನಾಗಿ ಅದನ್ನು ಕುಸುಂಬೆಬಣ್ಣದ ತಂತುವಿನಿಂದ ತನ್ನ ಪ್ರಕೋಷ್ಠದಲ್ಲಿ ಬ್ರಾಹ್ಮಣಹಸ್ತದಿಂದ ಕಟ್ಟಿಸಿಕೊಳ್ಳಬೇಕು

೩೦-೩೧. ತರುವಾಯ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಧ್ಯಾನಮಾಡಬೇಕು. ಅನಂತರ ಸಪ್ತಋಷಿಗಳನ್ನು ವಿಸರ್ಜನೆಮಾಡಿ, ನೂತನವಾಗಿ ತಾನೇ ಮಾಡಿದ ಕುಂಕುಮಾದಿಗಳನ್ನು ಹಚ್ಚಿ ಕೆಂಪಗೆ ಮಾಡಿದ ಯಜ್ಞೋಪವೀತವನ್ನು ಧಾರಣೆಮಾಡಿಕೊಳ್ಳಬೇಕು. ಬಳಿಕ ಶ್ರೇಷ್ಠಬ್ರಾಹ್ಮಣರಿಗೆ ಯಥಾಶಕ್ತಿ ಭೋಜನಮಾಡಿಸಿ ತಾನು ಆದಿನ ಒಪ್ಪತ್ತೂಟಮಾಡಬೇಕು.

ಕೃತೇ ಹ್ಯಸ್ಮಿನ್ವ್ರತೇ ವಿಪ್ರ ವಾರ್ಷಿಕಂ ಕರ್ಮ ವೈದಿಕಂ ।
ವಿಸ್ಮೃತಂ ವಿಧಿಹೀನಂ ಚ ನ ಕೃತಂ ಸುಕೃತಂ ಭವೇತ್ ॥ ೩೨ ॥

ಪ್ರೌಷ್ಠಪದ್ಯಾಂ ಪೌರ್ಣಮಾಸ್ಯಾಮುಮಾಮಾಹೇಶ್ವರವ್ರತಂ ।
ಏಕಭಕ್ತಶ್ಚ ಯಸ್ತಾಂ ತು ಶಿವಂ ಸಂಪೂಜ್ಯ ಯತ್ನತಃ ॥ ೩೩ ॥

ಕೃತಾಂಜಲಿಃ ಪ್ರಾರ್ಥಯೇಚ್ಛ್ವಃ ಕರಿಷ್ಯೇ ಚ ವ್ರತಂ ಪ್ರಭೋ ।
ಏವಂ ವಿಜ್ಞಾಪ್ಯ ದೇವಂ ತು ಗೃಹ್ಣೀಯಾದ್ವ್ರತಮುತ್ತಮಂ ॥ ೩೪ ॥

ರಾತ್ರೌ ದೇವಾಂತಿಕೇ ಸುಪ್ತ್ವಾ ಉತ್ಥಾಯಾಪರಯಾಮಕೇ ।
ಕೃತಮೈತ್ರಾದಿನಿತ್ಯಸ್ತು ಭಸ್ಮರುದ್ರಾಕ್ಷಧೃಕ್ ತತಃ ॥ ೩೫ ॥

ಪೂಜಯೇಚ್ಛಂಕರಂ ಸಮ್ಯಗುಪಚಾರೈಃ ಪೃಥಗ್ವಿಧೈಃ ।
ಬಿಲ್ವಪತ್ರೈಃ ಸುಗಂಧಾಢ್ಯೈರ್ನೈವೇದ್ಯೈರ್ಧೂಪದೀಪಕೈಃ ॥ ೩೬ ॥

---

೩೨ ಈ ವ್ರತವನ್ನು ಮಾಡಿದರೆ ವರ್ಷದಲ್ಲಿ ಕರ್ತವ್ಯವಾದ ವೇದೋಕ್ತ ಕರ್ಮವನ್ನು ಮರೆತು ಮಾಡದೇ ಇದ್ದರೂ, ವಿಧಾನಹೀನವಾಗಿ ಮಾಡಿದ್ದರೂ ಅದೆಲ್ಲವೂ ಈ ವ್ರತಾಚರಣೆಯಿಂದ ಸಮೀಚೀನವಾಗಿ ಮಾಡಿದಂತಾಗುವುದು.

೩೩-೩೪. ಭಾದ್ರಪದಮಾಸದ ಪೂರ್ಣಿಮಾದಿನದಲ್ಲಿ ಉಮಾಮಹೇಶ್ವರ ವ್ರತವು ವಿಹಿತವಾಗಿದೆ ಒಪ್ಪತ್ತೂಟಮಾಡಿ ಪಾರ್ವತೀಪರಮೇಶ್ವರರನ್ನು ಯತ್ನಪೂರ್ವಕವಾಗಿ ಪೂಜಿಸಿ, ಕೈಮುಗಿದು "ಸ್ವಾಮಿಯೇ! ನಾಳೆ ವ್ರತವನ್ನು ಆಚರಿಸುವೆನು" ಎಂಬುದಾಗಿ ದೇವರಿಗೆ ವಿಜ್ಞಾಪಿಸಿ ಉತ್ತಮವ್ರತವನ್ನು ಕೈಗೊಳ್ಳಬೇಕು.

೩೫-೩೬. ಆರಾತ್ರಿ ದೇವರ ಸನ್ನಿಧಿಯಲ್ಲಿ ಮಲಗಿ ಬೆಳಗಿನಜಾವದಲ್ಲಿ ಎದ್ದು ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಭಸ್ಮರುದ್ರಾಕ್ಷಿಗಳನ್ನು ಧರಿಸಿ, ನಾನಾವಿಧವಾದ ಸಮೀಚೀನೋಪಚಾರಗಳಿಂದ, ಬಿಲ್ವಪತ್ರೆ, ಸುಗಂಧಯುಕ್ತ ಪುಷ್ಪ, ನೈವೇದ್ಯ, ಧೂಪ, ದೀಪಇವುಗಳಿಂದಲೂ ಶಂಕರನನ್ನು ಪೂಜಿಸಬೇಕು.

ತತಶ್ಚೋಪವಸೇದ್ವಿದ್ವಾನಾಪ್ರದೋಷಂ ವಿಧೂದಯೇ ।
ಪುನಃ ಸಂಪೂಜ್ಯ ತತ್ರೈವ ರಾತ್ರೌ ಜಾಗರಣಂ ಚರೇತ್ ॥ ೩೭ ॥

ಏವಂ ಪಂಚದಶಾಬ್ದಾಂತಂ ಕೃತ್ವಾ ವ್ರತಮತಂದ್ರಿತಃ ।
ವರ್ಷೇ ವರ್ಷೇ ತದುತ್ಸರ್ಗೇ ವಿಧದ್ಯಾದ್ವಿಧಿಪೂರ್ವಕಂ ॥ ೩೮ ॥

ಉಮಾಯಾಶ್ಚ ಮಹೇಶಸ್ಯ ಸೌವರ್ಣಂ ಪ್ರತಿಮಾದ್ವಯಂ ।
ಹೈಮಾ ರೌಪ್ಯಾ ಮೃನ್ಮಯಾಶ್ಚ ಘಟಾಃ ಪಂಚದಶೋತ್ತಮಾಃ ॥ ೩೯ ॥

ತತ್ರೈಕಸ್ಮಿನ್ ಘಟೇ ಸ್ಥಾಪ್ಯಂ ಸವಸ್ತ್ರಂ ಪ್ರತಿಮಾದ್ವಯಂ ।
ಪಂಚಾಮೃತೇನ ಸಂಸ್ನಾಪ್ಯ ಜಲೈಃ ಶುದ್ಧೈಸ್ತತೋರ್ಚಯೇತ್ ॥ ೪೦ ॥

---

೩೭. ಅನಂತರ ಪ್ರದೋಷಕಾಲದಲ್ಲಿ ಚಂದ್ರೋದಯವಾಗುವವರೆಗೆ ಉಪವಾಸವಿದ್ದು ಪುನಃ ಅಲ್ಲಿಯೇ ಪೂಜೆಮಾಡಿ ರಾತ್ರಿಯಲ್ಲಿ ಜಾಗರಣೆಮಾಡಬೇಕು.

೩೮ ಈ ರೀತಿಯಾಗಿ ಆಲಸ್ಯವಿಲ್ಲದೆ ಹದಿನೈದು ವರ್ಷಗಳು ಪ್ರತಿವರ್ಷದಲ್ಲಿಯೂ ಈ ವ್ರತವನ್ನು ಮಾಡಬೇಕು. ಕೊನೆಯವರ್ಷದಲ್ಲಿ ವಿಧಾನೋಕ್ತ ಪ್ರಕಾರ ಉದ್ಯಾಪನೆಮಾಡಬೇಕು.

೩೯-೪೩. ಅದರ ವಿಧಾನ:—ಪಾರ್ವತಿಯು ಮತ್ತು ಪರಮೇಶ್ವರನ ಪ್ರತಿಮೆಗಳನ್ನು ಬಂಗಾರದಿಂದ ಮಾಡಿಸಿ ಬಂಗಾರ, ಬೆಳ್ಳಿ ಅಥವಾ ಮಣ್ಣಿನಿಂದ ಹದಿನೈದು ಕಲಶಗಳನ್ನು ಮಾಡಿಸಿ ಅವುಗಳನ್ನು ಸ್ಥಾಪಿಸಿ, ಅವುಗಳ ಪೈಕಿ ಒಂದು ಕುಂಭದಲ್ಲಿ ಬಂಗಾರದ ಉಮಾಮಹೇಶ್ವರ ಪ್ರತಿಮೆಗಳೆರಡನ್ನೂ ಇರಿಸಿ ಅದಕ್ಕೆ ವಸ್ತ್ರವನ್ನು ಹೊದಿಸಿ, ಪಂಚಾಮೃತ ಮತ್ತು ಶುದ್ಧೋದಕಗಳಿಂದ ಸ್ನಾನಮಾಡಿಸಿ ಅನಂತರ ಷೋಡಶೋಪಚಾರ ಪೂಜೆಮಾಡಬೇಕು.

ಉಪಚಾರೈಃ ಷೋಡಶಭಿಸ್ತತಃ ಪಂಚದಶ ದ್ವಿಜಾನ್ |
ಭೋಜಯೇಚ್ಚೈವ ಮಿಷ್ಟಾನ್ನೈರ್ದದ್ಯಾತ್ತೇಭ್ಯಶ್ಚ ದಕ್ಷಿಣಾಂ || ೪೧ ||

ಕುಂಭಮೇಕೈಕಮೀಶಸ್ಯ ಮೂರ್ತ್ಯಾಢ್ಯಂ ಗುರವೇಽರ್ಪಯೇತ್ |
ಏವಂ ಕೃತ್ವಾ ವ್ರತಂ ಚೈವ ಉಮಾಮಾಹೇಶ್ವರಾಭಿಧಂ || ೪೨ ||

ಜಾಯತೇ ಭುವಿ ವಿಖ್ಯಾತೋ ನಿಧಾನಂ ಸರ್ವಸಂಪದಾಂ |
ಅಥಾಸ್ಮಿನ್ನೇವ ದಿವಸೇ ಶಕ್ರವ್ರತಮಪಿ ಸ್ಮೃತಂ || ೪೩ ||

ಪ್ರಾತಃ ಸ್ನಾತ್ವಾ ವಿಧಾನೇನ ಸಂಪೂಜ್ಯ ಸುರನಾಯಕಂ |
ಗಂಧಾದ್ಯೈರುಪಚಾರೈಸ್ತು ನೈವೇದ್ಯಾನಾಂ ಚ ರಾಶಿಭಿಃ || ೪೪ ||

ತತೋ ನಿಮಂತ್ರಿತಾನ್ವಿಪ್ರಾನ್ಸಂಭೋಜ್ಯ ವಿಧಿವದ್ದ್ವಿಜ |
ಸಮಾಗತಾಂಸ್ತಥೈವಾನ್ಯಾನ್ದೀನಾನಾಥಾಂಶ್ಚ ಭೋಜಯೇತ್ || ೪೫ ||

---

ಬಳಿಕ ಹದಿನೈದು ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನಮಾಡಿಸಿ, ಅವರಿಗೆ ದಕ್ಷಿಣೆಕೊಟ್ಟು, ಪ್ರತಿಮೆಗಳಿರುವ ಕಲಶವನ್ನು ಗುರುವಿಗೂ ಇತರ ಕಲಶಗಳನ್ನೂ ಒಂದೊಂದರಂತೆ ಉಳಿದ ಬ್ರಾಹ್ಮಣರಿಗೂ ದಾನಮಾಡಬೇಕು.

ಈರೀತಿಯಾಗಿ ಉಮಾಮಹೇಶ್ವರವ್ರತವನ್ನಾಚರಿಸಿದವನು ಭೂಲೋಕದಲ್ಲಿ ಪ್ರಸಿದ್ಧನಾಗಿ ಸಕಲಸಂಪತ್ತುಗಳಿಗೂ ನಿಧಿಯಾಗುವನು.

೪೪-೪೫. ಈದಿನವೇ ಶಕ್ರವ್ರತವೂ ವಿಹಿತವಾಗಿದೆ. ಅದರ ವಿಧಾನ:— ಪ್ರಾತಃಕಾಲದಲ್ಲಿ ಸ್ನಾನಮಾಡಿ, ದೇವೇಂದ್ರನನ್ನು ಗಂಧಾದ್ಯುಪಚಾರ ಮತ್ತು ನೈವೇದ್ಯರಾಶಿಗಳಿಂದ ವಿಧಾನಾನುಸಾರವಾಗಿ ಪೂಜಿಸಿ ಅನಂತರ ಆಹೂತರು ಆಹ್ವಾನವಿಲ್ಲದೆ ಬಂದವರು, ಬಡವರು ಮತ್ತು ಅನಾಥರೂ ಆದ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

ಏಶಚ್ಛಕ್ರವ್ರತಂ ವಿಪ್ರ ಕರ್ತವ್ಯಂ ಪ್ರತಿವಾರ್ಷಿಕಂ ।
ರಾಜ್ಞಾವಾ ಧನಿನಾನ್ಯೇನ ಧಾನ್ಯನಿಷ್ಪತ್ತಿಮಿಚ್ಛತಾ ॥ ೪೬ ॥

ಆಶ್ವಿನೇ ಮಾಸಿ ಪೂರ್ಣಾಯಾಂ ವ್ರತಂ ಕೋಜಾಗರಾಭಿಧಂ ।
ತೇನ ಸ್ನಾತ್ವಾ ವಿಧಾನೇನ ಸೋಪವಾಸೋ ಜಿತೇಂದ್ರಿಯಃ ॥ ೪೭ ॥

ಲಕ್ಷ್ಮೀಮಭ್ಯರ್ಚ್ಯ ಸೌವರ್ಣೀಂ ಘಟೇ ಸಂಸ್ಥಾಪ್ಯ ತಾಮ್ರಜೇ ।
ಮೃನ್ಮಯೇ ವಾ ಸವಸ್ತ್ರಾಂತಾಮುಪಚಾರೈಃ ಪೃಥಗ್ವಿಧೈಃ ॥ ೪೮ ॥

ತತಃ ಸಾಯಂತನೇ ಕಾಲೇಭ್ಯುದಿತೇ ತಾರಕಾಧಿಪೇ ।
ಹೈಮಾನ್ರೌಪ್ಯಾನ್ಮೃನ್ಮಯಾನ್ವಾ ಘೃತಪೂರ್ಣಾನ್ಪ್ರದೀಪಯೇತ್ ॥ ೪೯ ॥

---

೪೬. ಈ ಶಕ್ರವ್ರತವನ್ನು ರಾಜ ಅಥವಾ ಶ್ರೀಮಂತರಾದ ಇತರರು ಧಾನ್ಯ ಸಮೃದ್ಧಿಯಾಗಬೇಕೆಂಬ ಅಪೇಕ್ಷೆಯಿಂದ ಪ್ರತಿವರ್ಷವೂ ಆಚರಿಸಬೇಕು.

೪೭-೫೧. ಆಶ್ವಯುಜಮಾಸ ಪೂರ್ಣಿಮಾದಿನದಲ್ಲಿ ಕೋಜಾಗರ ಎಂಬ ವ್ರತವು ವಿಹಿತವಾಗಿದೆ. ಆದಿನ ವಿಧಿವತ್ತಾಗಿ ಸ್ನಾನಮಾಡಿ ಉಪವಾಸದಿಂದ ಜಿತೇಂದ್ರಿಯನಾಗಿ ಲಕ್ಷ್ಮೀದೇವಿಯ ಬಂಗಾರಪ್ರತಿಮೆಯನ್ನು ತಾಮ್ರ ಅಥವಾ ಮಣ್ಣಿನ ಕಲಶದಲ್ಲಿರಿಸಿ, ವಸ್ತ್ರವನ್ನು ಹೊದಿಸಿ, ನಾನಾವಿಧೋಪಚಾರಗಳಿಂದ ಪೂಜಿಸಿ, ಅನಂತರ ಸಾಯಂಕಾಲ ಚಂದ್ರೋದಯವಾದಮೇಲೆ ಬಂಗಾರ ಅಥವಾ ಬೆಳ್ಳಿ, ಇಲ್ಲವೇ ಮಣ್ಣಿನ ಹಣತೆಗಳಲ್ಲಿ ತುಪ್ಪವನ್ನು ತುಂಬಿ ಒಂದು ಲಕ್ಷ ಅಥವಾ ಅದರಲ್ಲಿ ಅರ್ಧ, ಇಲ್ಲವೇ ಹತ್ತುಸಾವಿರ, ಅಷ್ಟೂ ಇಲ್ಲದಿದ್ದಲ್ಲಿ ಒಂದುಸಾವಿರ, ಅದಕ್ಕೂ ಸಂಭವವಿಲ್ಲದಿದ್ದರೆ ನೂರಾದರೂ ದೀಪಗಳನ್ನು ಹಚ್ಚಬೇಕು.

ಲಕ್ಷಂ ತದರ್ಧಮಯುತಂ ಸಹಸ್ರಂ ಶತಮೇವ ವಾ ।
ಘೃತಶರ್ಕರಸಂಮಿಶ್ರಂ ವಿಪಾಚ್ಯ ಬಹು ಪಾಯಸಂ ॥ ೫೦ ॥

ಬಹುಪಾತ್ರೇಷು ಸಂಸ್ಥಾಪ್ಯ ಕೌಮುದ್ಯಾಂ ಶೀತದೀಧಿತೇಃ ।
ಯಾಮಮಾತ್ರೇ ಗತೇ ರಾತ್ರ್ಯಾಂ ಲಕ್ಷ್ಮ್ಯೈ ತದ್ವಿನಿವೇದಯೇತ್ ॥ ೫೧ ॥

ತತಃ ಸಂಭೋಜಯೇತ್ತೇನ ವಿಪ್ರಾನ್ಭಕ್ತ್ಯಾ ತತಶ್ಚ ತೈಃ ।
ಸಹೈವ ಜಾಗರಂ ಕುರ್ಯಾರ್ನೃತ್ಯಗೀತಸುಮಂಗಲೈಃ ॥ ೫೨ ॥

ತತೋಽರುಣೋದಯೇ ಸ್ನಾತ್ವಾ ತಾಂ ಮೂರ್ತಿಂ ಗುರವೇಽರ್ಪಯೇತ್ ।
ಅಸ್ಯಾಂ ರಾತ್ರೌ ಮಹಾಲಕ್ಷ್ಮೀರ್ವರದಾ ಸಾ ಕರಾಂಬುಜಾ ॥ ೫೩ ॥

ನಿಶೀಥೇ ಚರತೇ ಲೋಕೇ ಕೋ ಜಾಗರ್ತಿ ಧರಾತಲೇ ।
ತಸ್ಮೈ ವಿತ್ತಂ ಪ್ರಯಚ್ಛಾಮಿ ಜಾಗ್ರತೇ ಪೂಜಕಾಯ ಮೇ ॥ ೫೪ ॥

---

ತುಪ್ಪ ಸಕ್ಕರೆಗಳಿಂದ ಮಿಶ್ರವಾದ ಪಾಯಸವನ್ನು ಹೆಚ್ಚಾಗಿಮಾಡಿ, ಅನೇಕ ಪಾತ್ರೆಗಳಲ್ಲಿ ಹಾಕಿ ಬೆಳದಿಂಗಳಿನಲ್ಲಿ ಒಂದು ಯಾಮ ಪರ್ಯಂತ ವಾಗಿಟ್ಟಿದ್ದು, ರಾತ್ರಿಯಲ್ಲಿ ಲಕ್ಷ್ಮೀದೇವಿಗೆ ಅದನ್ನು ನಿವೇದನಮಾಡಬೇಕು.

೫೨. ಅನಂತರ ಆ ಪಾಯಸದಿಂದ ಬ್ರಾಹ್ಮಣರಿಗೆ ಭಕ್ತಿಪೂರ್ವಕವಾಗಿ ಭೋಜನಮಾಡಿಸಿ, ಅವರ ಸಹಿತವಾಗಿ ನರ್ತನ, ಗಾನ, ಮಂಗಳಪಠನೆಗಳಿಂದ ರಾತ್ರಿ ಜಾಗರಣೆಮಾಡಬೇಕು.

೫೩-೫೪. ಅನಂತರ ಅರುಣೋದಯಕಾಲದಲ್ಲಿ ಸ್ನಾನಮಾಡಿ ಆ ಮೂರ್ತಿಯನ್ನು ಗುರುಗಳಿಗೆ ಸಮರ್ಪಿಸಬೇಕು. ಈ ರಾತ್ರಿಯಲ್ಲಿ ವರಪ್ರದ ಳಾದ ಮಹಾಲಕ್ಷ್ಮೀದೇವಿಯು ಕೈಯಲ್ಲಿ ಕಮಲವನ್ನು ಧರಿಸಿ ಅರ್ಧರಾತ್ರಿಯ ಕಾಲದಲ್ಲಿ ಈ ಭೂಮಿಯಲ್ಲಿ ಯಾವನು ಎಚ್ಚರದಿಂದಿದ್ದು ನನ್ನನ್ನು ಪೂಜಿಸು ತ್ತಿರುವನೋ ಅಂತಹ ಜಾಗರಣೆಮಾಡಿ ಪೂಜಿಸಿದವನಿಗೆ ಐಶ್ವರ್ಯವನ್ನು ಕೊಡುವೆ ನೆಂದು ಸಂಚರಿಸುತ್ತಿರುವಳು.

ವರ್ಷೇ ವರ್ಷೇ ಕೃತಂ ಚೈತದ್ವ್ರತಂ ಲಕ್ಷ್ಮೀಪ್ರತೋಷಣಂ ।
ಸಮೃದ್ಧಿಮೈಹಿಕೀಂ ದದ್ಯಾದ್ದೇಹಾಂತೇ ಪಾರಲೌಕಿಕೀಂ ॥ ೫೫ ॥

ಕಾರ್ತಿಕ್ಯಾಂ ಪೂರ್ಣಿಮಾಯಾಂ ತು ಕುರ್ಯಾತ್ಕಾರ್ತಿಕದರ್ಶನಂ ।
ವಿಪ್ರತ್ವಲಬ್ಧಯೇ ಭೂಪಃ ಸರ್ವಶತ್ರುಜಯಾಯ ಚ ॥ ೫೬ ॥

ಅಸ್ಯೈವ ದೀಪದಾನೇನ ವಿಧೇಯಸ್ತ್ರಿಪುರೋತ್ಸವಃ ।
ನಿಶಾಮುಖೇ ದ್ವಿಜಶ್ರೇಷ್ಠ ಸರ್ವಜೀವಸುಖಾವಹಃ ॥ ೫೭ ॥

ಕೀಟಾಃ ಪತಂಗಾ ಮಶಕಾಶ್ಚ ವೃಕ್ಷಾ
ಜಲೇ ಸ್ಥಲೇ ಯೇ ವಿಚರಂತಿ ಜೀವಾಃ ।
ಇಷ್ಟ್ವಾ ಪ್ರದೀಪಾನ್ನಹಿ ತೇಽಪಿ ಜನ್ಮಿನಃ
ಪುನಶ್ಚ ಮುಕ್ತಿಂ ಹಿ ಲಭಂತ ಏವ ಚ ॥ ೫೮ ॥

---

೫೫. ಪ್ರತಿವರ್ಷದಲ್ಲಿಯೂ ಲಕ್ಷ್ಮೀಪ್ರೀತಿಕರವಾದ ಈ ವ್ರತವನ್ನು ಮಾಡುವವನಿಗೆ ದೇವಿಯು ಐಹಿಕ ಭೋಗಗಳನ್ನು ಕೊಟ್ಟು, ಮರಣಾನಂತರ ಪರಲೋಕದಲ್ಲಿ ಸದ್ಗತಿಯನ್ನೂ ಸಹ ಅನುಗ್ರಹಿಸುವಳು.

೫೬. ಕಾರ್ತಿಕಮಾಸದ ಪೂರ್ಣಿಮಾದಿನದಲ್ಲಿ ವಿಪ್ರತ್ವಲಾಭಕ್ಕಾಗಿಯೂ, ಸಕಲ ಶತ್ರುಗಳ ಜಯವನ್ನು ಪಡೆಯುವುದಕ್ಕಾಗಿಯೂ ರಾಜನು ಕಾರ್ತಿಕ ದರ್ಶನವನ್ನು ಮಾಡಬೇಕು

೫೭. ದ್ವಿಜಶ್ರೇಷ್ಠನೇ ! ಈ ದಿನದಲ್ಲಿಯೇ ಪ್ರದೋಷಕಾಲದಲ್ಲಿ ಸಕಲ ಪ್ರಾಣಿಗಳಿಗೂ ಸುಖಕರವಾದ ತ್ರಿಪುರೋತ್ಸವವನ್ನು ದೀಪದಾನಪುರಸ್ಸರವಾಗಿ ಆಚರಿಸಬೇಕು

೫೮. ಕೀಟ, ದೀಪದಹುಳು, ಮಶಕ ಮತ್ತು ಜಲಸ್ಥಲಚರಜಂತುಗಳೂ ಸಹ ಕಾರ್ತಿಕ ದೀಪದಿಂದ ಪುನರ್ಜನ್ಮವಿಲ್ಲದೇ ಮುಕ್ತಿಯನ್ನು ಹೊಂದುತ್ತವೆ.

ಅತ್ರ ಚಂದ್ರೋದಯೇ ವಿಪ್ರ ಸಂಪೂಜ್ಯಾಃ ಕೃತ್ತಿಕಾಶ್ಚ ಷಟ್ ॥ ೫೯ ॥

ಕಾರ್ತಿಕೇಯಸ್ತಥಾ ಖಡ್ಗೀ ವರುಣಾಶ್ಚ ಹುತಾಶನಃ ।
ಗಂಧಪುಷ್ಪೈಸ್ತಥಾ ಧೂಪದೀಪೈರ್ನೈವೇದ್ಯವಿಸ್ತರೈಃ ॥ ೬೦ ॥

ಪರಮಾನ್ನೈಃ ಫಲೈಃ ಶಾಕೈರ್ವಹ್ನಿಬ್ರಾಹ್ಮಣತರ್ಪಣೈಃ ।
ಏವಂ ದೇವಾನ್ಸಮಭ್ಯರ್ಚ್ಯ ದೀಪೋ ದೇಯೋ ಗೃಹಾದ್ಬಹಿಃ ॥ ೬೧ ॥

ದೀಪೋಪಾಂತೇ ತಥಾ ಗರ್ತಶ್ಚತುರಸ್ರೋ ಮನೋಹರಃ ।
ಚತುರ್ದಶಾಂಗುಲಃ ಕಾರ್ಯಃ ಸಿಚ್ಯಶ್ಚಂದನ ವಾರಿಣಾ ॥ ೬೨ ॥

ಗವಾಂ ಕ್ಷೀರೇಣ ಸಂಪೂರ್ಯ ಹೈಮಂ ತತ್ರ ವಿನಿಕ್ಷಿಪೇತ್ ।
ಮುಕ್ತಾನೇತ್ರಸಮಾಯುಕ್ತಂ ಮತ್ಸ್ಯಂ ಸರ್ವಾಂಗಶೋಭನಂ ॥ ೬೩ ॥

ಸದಾ ಮತ್ಸ್ಯಾಯ ಚ ನಮ ಇತಿ ಮಂತ್ರಂ ಸಮುಚ್ಚರನ್ ।
ಗಂಧಾದ್ಯೈಸ್ತತ್ರ ಸಂಪೂಜ್ಯ ದ್ವಿಜಾಯ ಪ್ರತಿಪಾದಯೇತ್ ॥ ೬೪ ॥

---

೫೯-೬೧. ಈ ದಿನ ಚಂದ್ರೋದಯಕಾಲದಲ್ಲಿ ಕಾರ್ತಿಕೇಯ, ಖಡ್ಗೀ, ವರುಣಗಳು ಮೂರು, ಹುತಾಶನ ಎಂಬ ಆರು ಕೃತ್ತಿಕೆಗಳನ್ನು ಗಂಧ, ಪುಷ್ಪ, ಧೂಪ, ದೀಪ, ಅಧಿಕ ನೈವೇದ್ಯ, ಪರಮಾನ್ನ, ಫಲ, ಶಾಕ, ವಹ್ನಿಬ್ರಾಹ್ಮಣ ತರ್ಪಣ ಇವುಗಳಿಂದ ಪೂಜಿಸಬೇಕು. ಈರೀತಿ ದೇವತೆಗಳನ್ನು ಪೂಜಿಸಿ ಮನೆಯ ಹೊರಗೆ ದೀಪವನ್ನು ಹಚ್ಚಬೇಕು.

೬೨-೬೩. ದೀಪದ ಹತ್ತಿರ ಹದಿನಾಲ್ಕು ಅಂಗುಲ ಪರಿಮಾಣವುಳ್ಳ, ಚದರವಾದ, ಮನೋಹರವಾದ ಹಳ್ಳವನ್ನು ತೋಡಬೇಕು. ಅದರಲ್ಲಿ ಗಂಧೋದಕ, ಗೋಕ್ಷೀರಗಳನ್ನು ತುಂಬಿ ಮುತ್ತಿನ ಕಣ್ಣಿನಿಂದ ಯುಕ್ತವಾದ, ಸರ್ವಾಂಗ ಸುಂದರವಾದ ಬಂಗಾರದ ಮೀನನ್ನು ಇಡಬೇಕು.

೬೪. 'ಮತ್ಸ್ಯಾಯನಮಃ' ಎಂಬ ಮಂತ್ರವನ್ನು ಹೇಳುತ್ತ ಗಂಧಾದಿಗಳಿಂದ ಅಲ್ಲಿ ಪೂಜೆಮಾಡಿ ಬ್ರಾಹ್ಮಣನಿಗೆ ಅದನ್ನು ಕೊಡಬೇಕು.

ಕ್ಷೀರಸಾಗರದಾನಂ ತೇ ಮಯೋಕ್ತಂ ದ್ವಿಜಸತ್ತಮ |
ದಾನಸ್ಯಾಸ್ಯ ಪ್ರಭಾವೇಣ ಮೋದತೇ ಹರಿಸನ್ನಿಧೌ || ೬೫ ||

ಅತ್ರ ಕೃತ್ವಾ ವೃಷೋತ್ಸರ್ಗಂ ವ್ರತಂ ನಕ್ತಂ ಚ ನಾರದ |
ರುದ್ರಲೋಕಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ || ೬೬ ||

ಮಾರ್ಗಶೀರ್ಷ್ಯಾಂ ಪೂರ್ಣಿಮಾಯಾಂ ಸ್ವರ್ಣಾಢ್ಯಂ ಲವಣಾಢಕಂ |
ದೇಯಂ ವಿಪ್ರಾಯ ಶಾಂತಾಯ ಸರ್ವಕಾಮಸಮೃದ್ಧಯೇ || ೬೭ ||

ಇದಂ ಜಗತ್ಪುರಾ ಲಕ್ಷ್ಮ್ಯಾ ತ್ಯಕ್ತಮಾಸೀತ್ತತೋ ಹರಿಃ |
ಪುರಂದರಶ್ಚ ಸೋಮಶ್ಚ ತಥಾ ತಿಷ್ಯೋ ಬೃಹಸ್ಪತಿಃ || ೬೮ ||

ಪುಂಚೈತೇ ಪುಷ್ಯಯುಕ್ತಾಯಾಂ ಪೌರ್ಣಮಾಸ್ಯಾಂ ಜಗದ್ಬಲಾತ್ |
ಅಲಂಕೃತಂ ಪುನಶ್ಚಕ್ರುಃ ಸೌಭಾಗ್ಯೋತ್ಸವಕೇಲಿಭಿಃ || ೬೯ ||

---

೬೫. ದ್ವಿಜಶ್ರೇಷ್ಠನೇ! ನಿನಗೆ ಕ್ಷೀರಸಾಗರ ದಾನ ವಿಧಾನವನ್ನು ಹೇಳಿರುವೆನು. ಈ ದಾನಮಾಡುವವನು ಇದರ ಪ್ರಭಾವದಿಂದ ಹರಿಸನ್ನಿಧಿಯನ್ನು ಸೇರಿ ಸಂತೋಷಪಡುವನು.

೬೬. ಈ ದಿನದಲ್ಲಿ ವೃಷೋತ್ಸರ್ಗ ಮತ್ತು ನಕ್ತವ್ರತಗಳನ್ನು ಮಾಡಿದವನು ರುದ್ರಲೋಕವನ್ನು ಹೊಂದುವನು. ಈ ವಿಷಯದಲ್ಲಿ ಸಂಶಯಪಡಬಾರದು.

೬೭. ಮಾರ್ಗಶೀರ್ಷ ಪೂರ್ಣಿಮೆಯ ದಿನದಲ್ಲಿ ಒಂದುಬಳ್ಳ ಉಪ್ಪನ್ನು ಸುವರ್ಣ ಸಹಿತವಾಗಿ ಸಕಲಾಭೀಷ್ಟಸಮೃದ್ಧಿಯನ್ನು ಹೊಂದಲು ಶಾಂತ ಬ್ರಾಹ್ಮಣನಿಗೆ ದಾನಮಾಡಬೇಕು.

೬೮-೬೯. ಪೂರ್ವದಲ್ಲಿ ಈ ಜಗತ್ತು ಲಕ್ಷ್ಮಿಯಿಂದ ಬಿಡಲ್ಪಟ್ಟಿತ್ತು. ಅನಂತರ ಹರಿ, ಇಂದ್ರ, ಚಂದ್ರ, ಪುಷ್ಯ, ಬೃಹಸ್ಪತಿ ಈ ಐವರು ಪುಷ್ಯಯುಕ್ತ ಪೂರ್ಣಿಮೆಯದಿನ ಬಲಾತ್ಕಾರವಾಗಿ ಈ ಜಗತ್ತನ್ನು ಸೌಭಾಗ್ಯೋತ್ಸವ ವಿಹಾರಗಳಿಂದ ಅಲಂಕೃತವನ್ನಾಗಿ ಮಾಡಿದರು.

ತಸ್ಮಾನ್ನರಃ ಪುಷ್ಯಯೋಗೇ ಸರ್ವಸೌಭಾಗ್ಯವೃದ್ಧಯೇ ।
ಗೌರಸರ್ಷಪಕಲ್ಕೇನ ಸಮಾಲಭ್ಯ ಸ್ವಕಾಂ ತನುಂ　　　　॥ ೭೦ ॥

ಸ್ನಾಯಾತ್ಸರ್ವೌಷಧಿಜಲೈರ್ಧಾರಯೇಚ್ಚ ನವಾಂಶುಕೇ ।
ದೃಷ್ಟ್ವಾ ಚ ಮಂಗಲಂ ದ್ರವ್ಯಂ ಸ್ಪೃಷ್ಟ್ವಾ ನತ್ವಾ ತತೋಽರ್ಚಯೇತ್ ॥

ಹರಿಶಕ್ರೇಂದುಪುಷ್ಯಜ್ಞಾನ್ ಗಂಧಾದ್ಯೈರುಪಚಾರಕೈಃ ।
ವಿಧಾಯ ಹೋಮಂ ವಿಪ್ರಾಂಶ್ಚ ತರ್ಪಯೇತ್ಪಾಯಸಾಶನೈಃ　　　　॥ ೭೨ ॥

ಏತತ್ಕೃತ್ವಾ ವ್ರತಂ ವಿಪ್ರ ರಮಾಪ್ರೀತಿವಿವರ್ಧನಂ ।
ಅಲಕ್ಷ್ಮೀನಾಶನಂ ಚೈವ ಮೋದತೇಹಪರತ್ರ ಚ　　　　॥ ೭೩ ॥

ಪೂರ್ಣಮಾಸ್ಯಾಂ ತತೋ ಮಾಘ್ಯಾಂ ತಿಲಕಾರ್ಪಾಸಕಂಬಲಂ ।
ರತ್ನಾನಿ ಕಂಚುಕೋಷ್ಣೀಷಪಾದತ್ರಾಣಾನಿ ವಾ ಧನಂ　　　　॥ ೭೪ ॥

೭೦-೭೨. ಆದಕಾರಣ ಮನುಷ್ಯನು ಪುಷ್ಯನಕ್ಷತ್ರಯೋಗವುಂಟಾದಾಗ ಸಕಲಸೌಭಾಗ್ಯವೃದ್ಧ್ಯರ್ಥವಾಗಿ ಬಿಳಿಯ ಸಾಸುವೆಯ ಕಲ್ಕದಿಂದ ತನ್ನ ಶರೀರವನ್ನು ಲೇಪಿಸಿ, ಸರ್ವೌಷಧಿ ಜಲಗಳಿಂದ ಸ್ನಾನಮಾಡಬೇಕು. ಬಳಿಕ ಹೊಸ ಬಟ್ಟೆಗಳನ್ನು ಧರಿಸಿ ಸಂತೋಷದಿಂದ ಮಂಗಳದ್ರವ್ಯವನ್ನು ಸ್ಪರ್ಶಮಾಡಿ, ಹರಿ, ಇಂದ್ರ, ಚಂದ್ರ, ಪುಷ್ಯ, ಬೃಹಸ್ಪತಿಗಳನ್ನು ನಮಸ್ಕರಿಸಿ ಗಂಧಾದ್ಯುಪಚಾರಗಳಿಂದ ಪೂಜಿಸಬೇಕು. ಅನಂತರ ಹೋಮಮಾಡಿ ಪಾಯಸಭೋಜನಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು.

೭೩. ಲಕ್ಷ್ಮೀಪ್ರೀತಿವರ್ಧಕ ಮತ್ತು ದಾರಿದ್ರ್ಯನಾಶಕವಾದ ಈ ವ್ರತವನ್ನು ಮಾಡಿದವನು ಇಹಪರಗಳಲ್ಲಿ ಸುಖಭಾಗಿಯಾಗುವನು.

೭೪-೭೬. ಮಾಘ ಶುಕ್ಲ ಪೂರ್ಣಿಮೆಯದಿನದಲ್ಲಿ ಎಳ್ಳು, ಹತ್ತಿ, ಕಂಬಳಿ, ರತ್ನ, ಅಂಗಿ, ರುಮಾಲು, ಪಾದುಕೆಗಳನ್ನು ಅಥವಾ ಹಣವನ್ನು

ದತ್ವಾ ಪ್ರಮೋದತೇ ಸ್ವರ್ಗೇ ದಾನವಿತ್ತಾನುಸಾರತಃ ।
ಯಸ್ತ್ವತ್ರ ಶಂಕರಂ ದೇವಂ ಪೂಜಯೇದ್ವಿಧಿಪೂರ್ವಕಂ ॥ ೭೫ ॥

ಸೋಽಶ್ವಮೇಧಫಲಂ ಪ್ರಾಪ್ಯ ವಿಷ್ಣುಲೋಕೇ ಮಹೀಯತೇ ।
ಫಾಲ್ಗುನೇ ಪೂರ್ಣಿಮಾಯಾಂ ತು ಹೋಲಿಕಾಪೂಜನಂ ಮತಂ ॥ ೭೬ ॥

ಸಂಚಯಂ ಸರ್ವಕಾಷ್ಠಾನಾಮುಪಲಾನಾಂ ಚ ಕಾರಯೇತ್ ।
ತತ್ರಾಗ್ನಿಂ ವಿಧಿವದ್ಧುತ್ವಾ ರಕ್ಷೋಘ್ನೈರ್ಮಂತ್ರವಿಸ್ತರೈಃ ॥ ೭೭ ॥

ಅಸ್ಮಕಂಟಾಮಯತ್ರಸ್ತೈಃ ಕೃತಾ ತ್ವಂ ಹೋಲಿಕಾನಿಶಂ ।
ಅತಸ್ತ್ವಾಂ ಪೂಜಯಿಷ್ಯಾಮಿ ಭೂತೇ ಭೂತಿಪ್ರದಾ ಭವ ॥ ೭೮ ॥

ಇತಿ ಮಂತ್ರೇಣ ಸಂದೀಪ್ಯ ಕಾಷ್ಠಾದಿಕ್ಷೇಪಣೈಸ್ತತಃ ।
ಪರಿಕ್ರಮ್ಯೋತ್ಸವಃ ಕಾರ್ಯೋ ಗೀತವಾದಿತ್ರನಿಃಸ್ವನೈಃ ॥ ೭೯ ॥

---

ದಾನಮಾಡಿದವನು ದಾನವಿತ್ತಾನುಗುಣವಾಗಿ ಸ್ವರ್ಗದಲ್ಲಿ ಸುಖಪಡುವನು. ಈ ದಿನದಲ್ಲಿ ವಿಧಾನಪೂರ್ವಕವಾಗಿ ಶಂಕರದೇವನನ್ನು ಪೂಜಿಸುವವನು ಅಶ್ವಮೇಧ ಫಲವನ್ನು ಹೊಂದಿ ವಿಷ್ಣುಲೋಕದಲ್ಲಿ ಸತ್ಕರಿಸಲ್ಪಡುವನು.

೭೭-೭೯. ಫಾಲ್ಗುಣ ಪೂರ್ಣಿಮೆಯದಿನದಲ್ಲಿ ಹೋಳಿಕಾಪೂಜೆಯು ವಿಹಿತವಾಗಿದೆ. ಸಕಲವಿಧವಾದ ಕಟ್ಟಿಗೆ ಮುಂತಾದುವುಗಳನ್ನು ಒಂದೆಡೆಯಲ್ಲಿ ಸೇರಿಸಬೇಕು. ಅಲ್ಲಿ ವಿಧಾನೋಕ್ತಪ್ರಕಾರವಾಗಿ ಬೆಂಕಿಯನ್ನು ಹೊತ್ತಿಸಿ ರಾಕ್ಷಸ ವಿನಾಶಕ ಮಂತ್ರಗಳಿಂದ ‘ ಹೊಳಿಕಾದೇವತೆಯೇ! ನೀನು ಅಸ್ಮಕೂಟಾಮಯತ್ರಸ್ತರಿಂದ ರಚಿಸಲ್ಪಟ್ಟಿರುವೆ. ಆದಕಾರಣ ನಿನ್ನನ್ನು ಪೂಜಿಸುವೆನು. ಐಶ್ವರ್ಯದೇವತೆಯೇ! ನೀನು ನನಗೆ ಸಂಪತ್ತನ್ನನುಗ್ರಹಿಸು ’ ಎಂಬ ಮಂತ್ರವನ್ನು ಹೇಳಿ ಅದನ್ನು ಉರಿಸಿ ಕಟ್ಟಿಗೆ ಮುಂತಾದುವನ್ನು ಹಾಕಿ ಅನಂತರ ಪ್ರದಕ್ಷಿಣೆಮಾಡಿ, ಗೀತವಾದ್ಯ, ಧ್ವನಿಗಳಿಂದ ಉತ್ಸವವನ್ನು ಮಾಡಬೇಕು.

ಹೋಲಿಕಾ ರಾಕ್ಷಸೀ ಚೇಯಂ ಪ್ರಹ್ಲಾದಭಯದಾಯಿನೀ ।
ತತಸ್ತಾಂ ಪ್ರದಹಂತ್ಯೇವಂ ಕಾಷ್ಠಾದ್ಯೈರ್ಗೀತಮಂಗಲೈಃ ॥ ೪೦ ॥

ಸಂವತ್ಸರಸ್ಯ ದಾಹೋಯಂ ಕಾಮದಾಹೋ ಮತಾಂತರೇ ।
ಇತಿ ಜಾನೀಹಿ ವಿಪ್ರೇಂದ್ರ ಲೋಕೇ ಸ್ಥಿತಿರನೇಕಧಾ ॥ ೪೧ ॥

ಪಕ್ಷಾಂತೇ ದ್ವೇ ಪೃಥಗ್ದೈವೇ ತತೋಽಮಾವ್ರತಮುಚ್ಯತೇ ।
ಪೃಥಕ್ ಶೃಣುಷ್ವ ಮೇ ವಿಪ್ರ ಪಿತೄಣಾಮತಿವಲ್ಲಭಂ ॥ ೪೨ ॥

ಚೈತ್ರವೈಶಾಖಯೋಸ್ತತ್ರ ದರ್ಶೇ ಪಿತೃಸಮರ್ಚನಂ ।
ಪಾರ್ವಣೇನ ವಿಧಾನೇನ ಶ್ರಾದ್ಧಂ ವಿತ್ತಾನುಸಾರತಃ ॥ ೪೩ ॥

೪೦. ಈ ಹೋಳಿಕೆಯು ಪ್ರಹ್ಲಾದನಿಗೆ ಭಯವನ್ನುಂಟುಮಾಡಿದ ರಾಕ್ಷಸಿಯು. ಆದಕಾರಣ ಆದನ್ನು ಕಾಷ್ಠಾದಿಗಳಿಂದಲೂ, ಮಂಗಳಗೀತೆಗಳಿಂದಲೂ ಸುಡುವರು

೪೧. ಇದು ಸಂವತ್ಸರದಾಹವೆನಿಸುವುದು. ಇದನ್ನು ಕಾಮದೇಹವೆನ್ನುವುದೂ ಒಂದು ಮತವೆಂದು ತಿಳಿ. ಲೋಕಸ್ಥಿತಿಯು ಅನೇಕ ವಿಧವಾಗಿದೆ.

೪೨. ಪ್ರತಿಪಕ್ಷದ ಕೊನೆಯಲ್ಲಿಯೂ ಒಂದೊಂದರಂತೆ ಎರಡು ಪಕ್ಷಗಳಲ್ಲಿಯೂ ಎರಡು ದೈವತಿಥಿಗಳಿರುವುವು. ಅದರಲ್ಲಿ ಅಮಾವಾಸ್ಯೆಯ ವ್ರತವನ್ನು ಹೇಳುವೆನು, ಕೇಳು. ಅದು ಪಿತೃಗಳಿಗೆ ಅತ್ಯಂತಪ್ರಿಯವಾದುದು.

೪೩. ಚೈತ್ರ ವೈಶಾಖ ಅಮಾವಾಸ್ಯೆಗಳಲ್ಲಿ ತನ್ನ ವಿಭವಾನುಸಾರವಾಗಿ ಪಾರ್ವಣವಿಧಾನದಿಂದ ಶ್ರಾದ್ಧಮಾಡಿ ಪಿತೃಗಳ ಅರ್ಚನೆಯನ್ನು ಮಾಡಬೇಕು.

ದ್ವಿಜಾನಾಂ ಭೋಜನಂ ದಾನಂ ಗವಾದೀನಾಂ ವಿಶೇಷತಃ ।
ಸರ್ವಮಾಸೇಷ್ವಮಾಯಾಂ ವೈ ಬಹುಪುಣ್ಯಪ್ರದಂ ಯತಃ ॥ ೮೪ ॥

ಜ್ಯೇಷ್ಠಾಮಾಯಾಂ ವ್ರತಂ ಪ್ರೋಕ್ತಂ ಸಾವಿತ್ರ್ಯಾಃ ಕಸ್ಯ ನಾರದ ।
ವಿಧಾನಂ ಜ್ಯೇಷ್ಠಪೂರ್ಣಾವದಿಹಾಪಿ ಪರಿಕೀರ್ತಿತಂ ॥ ೮೫ ॥

ಶುಚೌ ನಭಸಿ ಭಾದ್ರೇ ಚ ಮಾಸೇ ಪೂರ್ಣಾಂತಿಕೇ ದ್ವಿಜ ।
ಪಿತೃಶ್ರಾದ್ಧಂ ದಾನಹೋಮಸುರಾರ್ಚಾನಂತ್ಯಮಶ್ನುತೇ ॥ ೮೬ ॥

ಭಾದ್ರದರ್ಶೇ ಪರಾಹ್ಣೇ ತು ತಿಲಕ್ಷೇತ್ರಸಮುದ್ಭವಾನ್ ।
ವಿರಿಂಚಿಮನುನಾಮಂತ್ರ್ಯ ಹುಂ ಫಟ್ ಛಿನ್ನಾನ್ಕುಶಾನ್ ದ್ವಿಜ ॥ ೮೭ ॥

---

೮೪. ಎಲ್ಲಾ ಅಮಾವಾಸ್ಯೆಯ ದಿನಗಳಲ್ಲಿಯೂ ಬ್ರಾಹ್ಮಣ ಭೋಜನ, ವಿಶೇಷವಾಗಿ ಗೋದಾನ ಇವುಗಳನ್ನು ಮಾಡುವುದು ಬಹುಪುಣ್ಯದಾಯಕವು. ಆದುದರಿಂದ ಆದಿವಸ ವಿಶೇಷವಾಗಿ ಭೋಜನಾದಿಗಳನ್ನು ಮಾಡಿಸಬೇಕು.

೮೫. ಜ್ಯೇಷ್ಠಮಾಸದ 'ಅಮಾವಾಸ್ಯೆಯ ದಿನದಲ್ಲಿ ಸಾವಿತ್ರೀ ವ್ರತವು ವಿಹಿತವಾಗಿದೆ. ಅದರ ವಿಧಾನವನ್ನು ಜ್ಯೇಷ್ಠ ಪೂರ್ಣಿಮೆಯವ್ರತವಿಧಾನದಂತೆ ತಿಳಿಯಬೇಕು.

೮೬ ಆಷಾಢ, ಶ್ರಾವಣ, ಭಾದ್ರಪದಮಾಸಗಳ ಅಮಾವಾಸ್ಯೆಗಳಲ್ಲಿ ಆಚರಿಸಿದ ಪಿತೃಶ್ರಾದ್ಧ, ದಾನ, ಹೋಮ ಮತ್ತು ಸುರಾರ್ಚನೆಗಳು ಅನಂತ ಫಲದಾಯಕಗಳಾಗುವುವು.

೮೭-೯೩. ಭಾದ್ರಪದಮಾಸದ ಅಮಾವಾಸ್ಯೆಯದಿನದಲ್ಲಿ ಅಪರಾಹ್ಣಕಾಲದಲ್ಲಿ 'ಹುಂ ಫಟ್' ಅಂತವಾದ ವಿರಂಚಿಮಂತ್ರದಿಂದ ಅಭಿಮಂತ್ರಿಸಿ ಕೊಯಿದ ದರ್ಭೆಗಳನ್ನು ಯಾವಾಗಲೂ ಎಲ್ಲಾಕಾರ್ಯಗಳಿಗೂ ವಿನಿಯೋಗ ಮಾಡಬೇಕು.

ಸರ್ವದಾ ಸರ್ವಕಾರ್ಯೇಷು ಯೋ ಜಯೇದೇಕದಾ ಪರಾನ್ ।
ಇಷಾಮಾಯಾಂ ವಿಶೇಷೇಣ ಪಿತ್ರ್ಯಾಣಾಂ ಶ್ರಾದ್ಧತರ್ಪಣಂ ॥ ೮೮ ॥

ವಿಧೇಯಂ ಜಾಹ್ನವೀತೋಯೇ ಮುಕ್ತಿದಂ ಚ ಗಯಾಸ್ಥಲೇ ।
ಊರ್ಜಾಮಾಯಾಂ ದೀಪದಾನಂ ದೇವಾಗಾರಗೃಹೇಷು ಚ ॥ ೮೯ ॥

ನದ್ಯಾರಾಮತಟಾಕೇಷು ಚೈತ್ಯಗೋಷ್ಠಾಪಣೇಷು ಚ ।
ಸಮರ್ಚನಂ ತಥಾ ಲಕ್ಷ್ಮ್ಯಾಃ ಸ್ವರ್ಣರೌಪ್ಯೇ ಕೃತಾಕೃತೇ ॥ ೯೦ ॥

ದ್ಯೂತಂ ಚ ವರ್ಷಫಲದಂ ಜಯೇ ಚಾಪಿ ಪರಾಜಯೇ ।
ಗವಾಂ ಪೂಜಾತ್ರ ವಿಹಿತಾ ಶೃಂಗಾದ್ಯಂಗಾನುರಂಜನೈಃ ॥ ೯೧ ॥

---

ಆಶ್ವಯುಜಮಾಸದ ಅಮಾವಾಸ್ಯೆಯಲ್ಲಿ ಗಂಗಾನದಿಯ ಸನ್ನಿಧಾನ ಅಥವಾ ಗಯಾಕ್ಷೇತ್ರಗಳಲ್ಲಿ ವಿಶೇಷವಾಗಿ ಪಿತೃಶ್ರಾದ್ಧ, ತರ್ಪಣಗಳ ನ್ನಾಚರಿಸಬೇಕು

ಕಾರ್ತಿಕಮಾಸದ ಅಮಾವಾಸ್ಯೆಯಲ್ಲಿ ದೇವಾಲಯ ಮತ್ತು ಗೃಹಗಳಲ್ಲಿ ಮತ್ತು ನದೀ, ಆರಾಮ, ಕೆರೆ, ಗುರುಸಮಾಧಿ, ಗೋವಿನ ಕೊಟ್ಟಿಗೆ, ಅಂಗಡಿ ಇವುಗಳಲ್ಲಿಯೂ ದೀಪಗಳನ್ನು ಹಚ್ಚಬೇಕು. ಅಂತಯೇ ಸವರ್ಣರಜತಗಳಲ್ಲಿ ಲಕ್ಷ್ಮಿಯನ್ನು ಆವಾಹನೆಮಾಡಿ ಪೂಜೆಯನ್ನು ಮಾಡಬೇಕು. ಆದಿವಸ ಜೂಜಾಟಗಳು ಜಯಿಸಲಿ ಅಥವಾ ಸೋಲಲಿ ವರ್ಷಫಲಪ್ರದಗಳಾಗುವುವು.

ಈ ದಿನದಲ್ಲಿ ಗೋವಿನ ಕೊಂಬುಗಳಿಗೆ ಬಣ್ಣಬಳೆದು ಅವುಗಳಿಗೆ ಹುಲ್ಲು, ಅನ್ನ ಮುಂತಾದುವುಗಳನ್ನು ಕೊಟ್ಟು ಪ್ರದಕ್ಷಿಣೆನಮಸ್ಕಾರಗಳನ್ನು ಮಾಡಿ ಪೂಜೆಯನ್ನು ಮಾಡಬೇಕೆಂದು ವಿಹಿತವಾಗಿದೆ.

ಯವಸಾನ್ನಾದಿದಾನೈಶ್ಚ ನಮಸ್ಕಾರಪ್ರದಕ್ಷಿಣೈಃ ।
ಮಾರ್ಗೇಽಪಿ ಪಿತೃಪೂಜಾ ಸ್ಯಾಚ್ಛ್ರಾದ್ಧೈರ್ಬ್ರಾಹ್ಮಣಭೋಜನೈಃ ॥ ೯೩ ॥

ಬ್ರಹ್ಮಚರ್ಯಾದಿನಿಯಮೈರ್ಜಪಹೋಮಾರ್ಚನಾದಿಭಿಃ ।
ಪೌಷೇ ಮಾಘೇ ಚ ವಿಪ್ರೇಂದ್ರ ಪಿತೃಶ್ರಾದ್ಧಂ ಫಲಾಧಿಕಂ ॥ ೯೪ ॥

ಅಮಾಯಾಂ ಕರ್ಣಪಾತಾರ್ಕಯುಕ್ತಾಯಾಂ ತು ಗಯಾಧಿಕಂ ।
ಫಾಲ್ಗುನೇ ಕೇವಲಂ ಶ್ರಾದ್ಧಂ ದ್ವಿಜಾನಾಂ ಭೋಜನಂ ತಥಾ ॥ ೯೫ ॥

ದಾನಾದಿ ಸರ್ವಫಲದಂ ದರ್ಶೇ ಸೋಮೇಧಿಕಂ ಫಲಂ ।
ಇತ್ಥಂ ಸಂಕ್ಷೇಪತಃ ಪ್ರೋಕ್ತಂ ತಿಥಿಕೃತ್ಯಂ ಮುನೇ ತವ ॥ ೯೬ ॥

---

ಮಾರ್ಗಶೀರ್ಷಮಾಸದ ಅಮಾವಾಸ್ಯೆಯಲ್ಲಿ ಶ್ರಾದ್ಧ, ಬ್ರಾಹ್ಮಣಭೋಜನ, ಬ್ರಹ್ಮಚರ್ಯಾದಿನಿಯಮ, ಜಪ, ಹೋಮ, ಪೂಜೆ ಮುಂತಾದುವುಗಳಿಂದ ಪಿತೃಪೂಜೆಯು ಕರ್ತವ್ಯವು.

ಪುಷ್ಯ ಮಾಘಮಾಸಗಳ ಅಮಾವಾಸ್ಯೆಗಳಲ್ಲಿ ಪಿತೃಶ್ರಾದ್ಧವು ಅಧಿಕ ಫಲದಾಯಕವು.

೯೫-೯೬. ಅಮಾವಾಸ್ಯೆಯು ಕರಣ, ವ್ಯತೀಪಾತ, ಭಾನುವಾರಗಳಿಂದ ಯುಕ್ತವಾದರೆ ಆದಿನ ಮಾಡಿದ ಶ್ರಾದ್ಧವು ಗಯಾಶ್ರಾದ್ಧಕ್ಕಿಂತಲೂ ಹೆಚ್ಚು ಫಲಕೊಡುವುದು.

ಫಾಲ್ಗುಣಮಾಸದ ಅಮಾವಾಸ್ಯೆಯಲ್ಲಿ ಮಾಡಿದ ಕೇವಲಶ್ರಾದ್ಧ,

**ಸರ್ವತ್ರಾಪಿ ವಿಶೇಷೋಽಸ್ತಿ ಸ ಪುರಾಣಾಂತರೇ ಸ್ಥಿತಃ ॥ ೯೬ ॥**

**ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಚತುರ್ಥಪಾದೇ ದ್ವಾದಶಮಾಸಸ್ಥಿತ ಪೂರ್ಣಮಾಸ್ಯಮಾವಾಸ್ಯಾ ವ್ರತಕಥನಂ ನಾಮ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ**

---

ಬ್ರಾಹ್ಮಣಭೋಜನ, ದಾನಾದಿಗಳು ಸಕಲ ಫಲಪ್ರದಗಳು. ಸೋಮವಾರ ಯುಕ್ತವಾದ ಅಮಾವಾಸ್ಯೆಯು ಅಧಿಕಫಲದಾಯಕವು.

ನಾರದಮುನಿಯೇ! ಈರೀತಿಯಾಗಿ ನಿನಗೆ ತಿಥಿ ಕೃತ್ಯವನ್ನು ಸಂಕ್ಷೇಪವಾಗಿ ಹೇಳಿರುವೆನು. ಸಕಲ ತಿಥಿಗಳಲ್ಲಿಯೂ ವಿಶೇಷವಿದೆ. ಅದು ಇತರ ಪುರಾಣಗಳಲ್ಲಿ ಉಕ್ತವಾಗಿದೆ.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವ ಭಾಗದ ನಾಲ್ಕನೆಯ ಪಾದದಲ್ಲಿ ಹನ್ನೆರಡು ತಿಂಗಳ ಪೂರ್ಣಿಮೆ ಮತ್ತು ಅಮಾವಾಸ್ಯೆಗಳ ವ್ರತವಿಧಾನನಿರೂಪಣೆಯೆಂಬ ನೂರಿಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

---

## ಪಂಚವಿಂಶತ್ಯಧಿಕಶತತಮೋಽಧ್ಯಾಯಃ

### ಸೂತ ಉವಾಚ

ಇತ್ಯೇವಮುಕ್ತ್ವಾ ಮುನಿನಾ ಹಿ ಪೃಷ್ಟಾಃ
ತೇ ವೈ ಕುಮಾರಾಃ ಕಿಲ ನಾರದೇನ ।
ಸಂಪೂಜಿತಾಃ ಶಾಸ್ತ್ರವಿದಾಂ ವರಿಷ್ಠಾಃ
ಕೃತಾಹ್ನಿಕಾ ಜಗ್ಮುರುಮೇಶಲೋಕಂ ॥ ೧ ॥

ತತ್ರೇಶಮಗ್ನ್ಯರ್ಕನಿಭೈರ್ಮುನೀಂದ್ರೈಃ
ಶ್ರೀವಾಮದೇವಾದಿಭಿರರ್ಚಿತಾಂಘ್ರಿಂ ।
ಸುರಾಸುರೇಂದ್ರೈರಭಿವಂದ್ಯಮುಗ್ರಂ
ನತ್ವಾಜ್ಞಯಾ ತಸ್ಯ ನಿಷೇದುರುರ್ವ್ಯಾಂ ॥ ೨ ॥

---

### ನೂರಿಪ್ಪತ್ತೈದನೆಯ ಅಧ್ಯಾಯವು.

೧. ಸೂತನು ಹೇಳಿದನು :— ನಾರದಮುನಿಯಿಂದ ಪೂಜಿಸಲ್ಪಟ್ಟ ಶಾಸ್ತ್ರಜ್ಞಾನಿವರೇಣ್ಯರಾದ ಆ ಬ್ರಹ್ಮಕುಮಾರರು ಈರೀತಿಯಾಗಿ ನಾರದನು ಕೇಳಿದುದನ್ನೆಲ್ಲಾ ಹೇಳಿ ತಮ್ಮ ಆಹ್ನಿಕವನ್ನು ಮುಗಿಸಿಕೊಂಡು ರುದ್ರದೇವರ ಲೋಕಕ್ಕೆ ತೆರಳಿದರು.

೨. ಅಲ್ಲಿ ಅಗ್ನಿ ಸೂರ್ಯಸದೃಶರಾದ ವಾಮದೇವ ಮುಂತಾದ ಮುನಿವರ್ಯರಿಂದ ಪೂಜಿಸಲ್ಪಟ್ಟ ಪಾದಗಳುಳ್ಳ, ದೇವಾಸುರಶ್ರೇಷ್ಠರಿಂದ ಸ್ತುತಿಮಾಡಿಸಿಕೊಳ್ಳಲ್ಪಡುತ್ತಿರುವ, ಭಯಂಕರನಾದ ಈಶ್ವರನನ್ನು ನಮಸ್ಕರಿಸಿ ಅವನ ಅಪ್ಪಣೆಯನ್ನು ಪಡೆದು ನೆಲದಮೇಲೆ ಕುಳಿತರು.

ಶ್ರುತ್ವಾಪಿ ತತ್ರಾಖಿಲಶಾಸ್ತ್ರಸಾರಂ
ಶಿವಾಗಮಂ ತೇ ಯಮಪಾಶಮೋಕ್ಷಣಂ ।
ಜಗ್ಮುಸ್ತತೋ ಜ್ಞಾನಘನಸ್ವರೂಪಾ
ನತ್ವಾ ಪುರಾರಿಂ ಸ್ವಪಿತುರ್ನಿಕಾಶಂ ॥ ೩ ॥

ತತ್ಪಾದಪದ್ಮೇ ಪ್ರಣತಿಂ ವಿಧಾಯ
ಪಿತ್ರಾಪಿ ಸತ್ಕೃತ್ಯ ಸಭಾಜಿತಾಸ್ತೇ ।
ಲಬ್ಧ್ವಾಶಿಷೋದ್ಯಾಪಿ ಚರಂತಿ ಶಶ್ವತ್
ಲೋಕೇಷು ತೀರ್ಥಾನಿ ಚ ತೀರ್ಥಭೂತಾಃ ॥ ೪ ॥

ಜಗ್ಮುಸ್ತತೋ ವೈ ಬದರೀವನಾಂತೇ
ಸುರೇಂದ್ರವರ್ಗೈರುಪಸೇವ್ಯಮಾನಂ ।
ದಧ್ಯುಶ್ಚಿರಂ ವಿಷ್ಣುಪದಾಬ್ಜಮವ್ಯಯಂ
ಧ್ಯಾಯಂತಿ ಯದ್ಯತಯೋ ವೀತರಾಗಾಃ ॥ ೫ ॥

೩. ಅಲ್ಲಿ ಸಮಸ್ತ ಶಾಸ್ತ್ರಸಾರಭೂತವು ಮತ್ತು ಯಮಪಾಶಮೋಚಕವೂ ಆದ ಶಿವಾಗಮವನ್ನು ಶ್ರವಣಮಾಡಿ, ಅನಂತರ ಜ್ಞಾನಘನಸ್ವರೂಪರಾದ ಆ ಕುಮಾರರು ಈಶ್ವರನಿಗೆ ನಮಸ್ಕಾರ ಮಾಡಿ ತಮ್ಮ ತಂದೆಯಾದ ಬ್ರಹ್ಮನ ಸಮೀಪಕ್ಕೆ ಹೊರಟರು.

೪. ಅಲ್ಲಿ ಬ್ರಹ್ಮನಪಾದಕಮಲಕ್ಕೆರಗಿ ತಂದೆಯಿಂದ ಸತ್ಕರಿಸಲ್ಪಟ್ಟು, ಮಾನಿತರಾದ ಆ ಕುಮಾರರು ತಂದೆಯಿಂದ ಆಶೀರ್ವಾದಪಡೆದು, ಈಗಲೂ ಸಹ ಲೋಕಗಳಲ್ಲಿ ತೀರ್ಥಭೂತರಾಗಿ ತೀರ್ಥಗಳನ್ನು ಸಂಚರಿಸುತ್ತಿರುವರು.

೫. ತರುವಾಯ ಅವರು ಅಲ್ಲಿಂದ ಬದರಿಕಾಶ್ರಮಕ್ಕೆ ಹೋದರು. ಆ ವನಾಂತ್ಯದಲ್ಲಿದ್ದ, ರಾಗಾದಿ ದೋಷರಹಿತರಾದ ಯತಿಗಳು ಧ್ಯಾನಿಸುತ್ತಿದ್ದ, ಶ್ರೇಷ್ಠದೇವಸಮೂಹಗಳಿಂದ ಸೇವಿಸಲ್ಪಡುತ್ತಿದ್ದ ನಾಶರಹಿತವಾದ ವಿಷ್ಣುಪಾದ ಕಮಲವನ್ನು ಬಹುಕಾಲದವರೆಗೂ ಧ್ಯಾನಿಸುತ್ತಿದ್ದರು.

ನಾರದೋಽಪಿ ತತೋ ವಿಪ್ರಾಃ ಕುಮಾರೇಭ್ಯಃ ಸಮೀಹಿತಂ ।
ಲಬ್ಧ್ವಾ ಜ್ಞಾನಂ ಸವಿಜ್ಞಾನಂ ಭೃಶಂ ಪ್ರೀತಮನಾ ಹ್ಯಭೂತ್ ॥ ೬ ॥

ಸ ತಸ್ಮಾತ್ಸ್ವರ್ಣದೀತೀರಾದಾಗತ್ಯ ಪಿತುರಂತಿಕೇ ।
ಪ್ರಣಮ್ಯ ಸತ್ಕೃತಃ ಪಿತ್ರಾ ಬ್ರಹ್ಮಣಾ ನಿಷಸಾದ ಚ ॥ ೭ ॥

ಕುಮಾರೇಭ್ಯಃ ಶ್ರುತಂ ಯಚ್ಚ ಜ್ಞಾನಂ ವಿಜ್ಞಾನಸಂಯುತಂ ।
ವರ್ಣಯಾಮಾಸ ತತ್ತ್ವೇನ ಸೋಽಪಿ ಶ್ರುತ್ವಾ ಮುಮೋದ ಚ ॥ ೮ ॥

ಅಥ ಪ್ರಣಮ್ಯ ಶಿರಸಾ ಲಬ್ಧಾಶೀರ್ಮುನಿಸತ್ತಮಃ ।
ಆಜಗಾಮ ಚ ಕೈಲಾಸಂ ಮುನಿಸಿದ್ಧನಿಷೇವಿತಂ ॥ ೯ ॥

---

೬. ತರುವಾಯ ನಾರದನೂ ಸಹ ಕುಮಾರರ ಉಪದೇಶದಿಂದ ತಾನು ಇಷ್ಟಪಟ್ಟ ವಿಜ್ಞಾನಸಹಿತಜ್ಞಾನವನ್ನು ಹೊಂದಿ ಅತ್ಯಂತ ಸಂತುಷ್ಟಚಿತ್ತನಾದನು.

೭. ಅವನು ಆ ಗಂಗಾನದಿಯ ತೀರದಿಂದ ತಂದೆಯ ಸಮೀಪಕ್ಕೆ ಬಂದು ನಮಸ್ಕರಿಸಿ ತಂದೆಯಾದ ಬ್ರಹ್ಮನಿಂದ ಸತ್ಕೃತನಾಗಿ ಕುಳಿತನು.

೮. ಅವನು ಕುಮಾರರಿಂದ ಉಪದೇಶಿಸಲ್ಪಟ್ಟ, ವಿಜ್ಞಾನಸಹಿತವಾದ ಜ್ಞಾನವನ್ನು ಯಥಾವತ್ತಾಗಿ ವರ್ಣಿಸಿದನು. ಬ್ರಹ್ಮನೂ ಸಹ ಅದನ್ನು ಕೇಳಿ ಸಂತೋಷಪಟ್ಟನು.

೯-೧೩. ತರುವಾಯ ಮುನಿಶ್ರೇಷ್ಠನು ತಲೆಬಾಗಿ ನಮಸ್ಕರಿಸಿ ತಂದೆಯಿಂದ ಆಶೀರ್ವಾದವನ್ನು ಪಡೆದು ಮುನಿ ಮತ್ತು ಸಿದ್ಧರಿಂದ ಸೇವಿಸಲ್ಪಡುತ್ತಿರುವ, ಬೇರೆಬೇರೆ ಋತುಗಳಲ್ಲಿ ಬೆಳೆಯುವ ಮಂದಾರ, ಪಾರಿಜಾತ, ಸಂಪಿಗೆ, ಅಶೋಕ, ವಂಜುಳ ಇನ್ನೂ ಇತರ ನಾನಾವಿಧಪುಷ್ಪಗಳು ಮತ್ತು ವೃಕ್ಷಗಳೂ

ನಾನಾಶ್ಚರ್ಯಮಯಂ ಶಶ್ವತ್ಸರ್ವರ್ತುಕುಸುಮದ್ರುಮೈಃ ।
ಮಂದಾರೈಃ ಪಾರಿಜಾತೈಶ್ಚ ಚಂಪಕಾಶೋಕವಂಜುಲೈಃ ॥ ೧೦ ॥

ಅನ್ಯೈಶ್ಚ ವಿವಿಧೈರ್ವೃಕ್ಷೈರ್ನಾನಾಪಕ್ಷಿಗಣಾವೃತೈಃ ।
ವಾತೋದ್ಧೂತಶಿಖೈಃ ಪಾಂಥಾನಾಹ್ವಯದ್ಭಿರಿವಾವೃತಂ ॥ ೧೧ ॥

ನಾನಾಮೃಗಗಣಾಕೀರ್ಣಂ ಸಿದ್ಧಕಿನ್ನರಸಂಕುಲಂ ।
ಸರೋಭಿಃ ಸ್ವಚ್ಛಸಲಿಲೈರ್ಲಸತ್ಕಾಂಚನಪಂಕಜೈಃ ॥ ೧೨ ॥

ಶೋಭಿತಂ ಸಾರಸೈರ್ಹಂಸೈಶ್ಚ ಕ್ರಾಹ್ವಾದ್ಯೈರ್ನಿನಾದಿತಂ ।
ಸ್ವರ್ಧುನೀಪಾತನಿರ್ಘೋಷ್ಟಂ ಕ್ರೀಡದ್ಭಿಶ್ಚಾಪ್ಸರೋಗಣೈಃ ॥ ೧೩ ॥

ಸಲಿಲೇಲಕನಂದಾಯಾಃ ಕುಚಕುಂಕುಮಪಿಂಗಲೇ ।
ಆಮೋದಮುದಿತೈರ್ನಾಗೈಃ ಸಲಿಲೈಃ ಪುಷ್ಕರೋದ್ಧೃತೈಃ ॥ ೧೪ ॥

---

ಸಹ ಏಕಕಾಲದಲ್ಲಿ ಸೇರಿ ಪ್ರಕಾಶಿಸುತ್ತಿರುವುದರಿಂದ ನಾನಾವಿಧವಾದ ಆಶ್ಚರ್ಯವನ್ನುಂಟುಮಾಡುತ್ತಿರುವ, ಬಹು ಪಕ್ಷಿ ಸಮೂಹಗಳಿಂದ ಆವರಿಸಲ್ಪಟ್ಟಿರುವ ಗಾಳಿಯಿಂದ ಅಲ್ಲಾಡುತ್ತಿರುವ ಅಗ್ರಭಾಗಗಳುಳ್ಳ ಪ್ರಯಾಣಿಕರನ್ನು ಕರೆಯುವಂತಿರುವ ನಾನಾವಿಧ ವೃಕ್ಷಗಳುಳ್ಳ, ನಾನಾವಿಧ ಮೃಗಸಮೂಹಗಳಿಂದ ವ್ಯಾಪ್ತವಾದ, ಸಿದ್ಧಕಿನ್ನರರು ವಾಸಿಸುತ್ತಿರುವ, ನಿರ್ಮಲೋದಕ ಮತ್ತು ಪ್ರಕಾಶಮಾನವಾದ ಬಂಗಾರದಂತೆ ಹೊಳೆಯುತ್ತಿರುವ ಕಮಲಗಳುಳ್ಳ ಸರೋವರಗಳಿಂದಲಂಕೃತವಾದ, ಸಾರಸಪಕ್ಷಿ, ಹಂಸ, ಚಕ್ರವಾಕ ಮುಂತಾದ ಪಕ್ಷಿಗಳ ಧ್ವನಿಯಿಂದ ಕೂಡಿರುವ, ಅಪ್ಸರಸ್ತ್ರೀಯರ ಜಲಕ್ರೀಡೆಯಿಂದುಂಟಾದ ಆಕಾಶಗಂಗೆಯ ಜಲಪಾತಧ್ವನಿಯಿಂದ ವ್ಯಾಪ್ತವಾದ ಕೈಲಾಸವನ್ನು ಕುರಿತು ಬಂದನು.

೧೪-೨೦. ಅಲ್ಲಿ ಕುಚಕುಂಕುಮದಿಂದ ಕೆಂಪಾಗಿರುವ ಅಲಕನಂದೆಯ ನೀರಿನಲ್ಲಿ ಆಮೋದದಿಂದ ಸಂತೋಷಿಸಿ ಪುಷ್ಕರದಿಂದ ನೀರನ್ನು ಎತ್ತಿ ಹೆಣ್ಣಾನೆ ಮತ್ತು ಅದರ ಮರಿಗಳಿಗೆ ಸ್ನಾನಮಾಡಿಸುತ್ತಿರುವ ಗಂಡಾನೆಗಳಿಂದ ಕೂಡಿದ,

ಸ್ನಾಪಯದ್ಭಿಃ ಕರೇಣೂಶ್ಚ ಕಲಭಾಂಶ್ಚ ಸಮಾಕುಲೇ ।
ಅಥ ಶ್ವೇತಾಭ್ರಸದೃಶೇ ಶೃಂಗೇ ತಸ್ಯ ಚ ಭೂಭೃತಃ ॥ ೧೫

ವಟಂ ಕಾಲಾಭ್ರಸದೃಶಂ ದದರ್ಶ ಶತಯೋಜನಂ ।
ತಸ್ಯಾಧಸ್ತಾತ್ಸಮಾಸೀನಂ ಯೋಗಿಮಂಡಲಮಧ್ಯಗಂ ॥ ೧೬ ॥

ಕಪರ್ದಿನಂ ವಿರೂಪಾಕ್ಷಂ ವ್ಯಾಘ್ರಚರ್ಮಾಂಬರಾವೃತಂ ।
ಭೂತಿಭೂಷಿತಸರ್ವಾಂಗಂ ನಾಗಭೂಷಣಭೂಷಿತಂ ॥ ೧೭ ॥

ರುದ್ರಾಕ್ಷಮಾಲಯಾ ಶಶ್ವಚ್ಛೋಭಿತಂ ಚಂದ್ರಶೇಖರಂ ।
ತಂ ದೃಷ್ಟ್ವಾ ನಾರದೋ ವಿಪ್ರ ಭಕ್ತಿನಮ್ರಾತ್ಮಕಂಧರಃ ॥ ೧೮ ॥

ನನಾಮ ಶಿರಸಾ ತಸ್ಯ ಪಾದಯೋರ್ಜಗದೀಶಿತುಃ ।
ತತಃ ಪ್ರಸನ್ನಮನಸಾ ಸ್ತುತ್ವಾ ವಾಗ್ಭಿರ್ವೃಷಧ್ವಜಂ ॥ ೧೯ ॥

---

ಬಿಳಿಯಮೇಘಕ್ಕೆ ಸಮಾನವಾದ ಆ ಪರ್ವತಶಿಖರದಲ್ಲಿ ನೂರುಗಾವುದ ವಿಸ್ತೀರ್ಣವುಳ್ಳ, ಕಾಲಮೇಘಸದೃಶವಾದ ವಟವೃಕ್ಷವನ್ನು ನೋಡಿದನು. ಅದರ ಕೆಳಗೆ ಕುಳಿತಿದ್ದ ಯೋಗಿಸಮೂಹಮಧ್ಯದಲ್ಲಿದ್ದ, ಜಟಾಧಾರಿಯೂ ವಿರೂಪಾಕ್ಷನೂ ಆದ, ಹುಲಿಯಚರ್ಮವನ್ನೇ ವಸ್ತ್ರವನ್ನಾಗಿ ಧರಿಸಿರುವ, ಮೈಗೆಲ್ಲಾ ವಿಭೂತಿಯನ್ನು ಹಚ್ಚಿಕೊಂಡಿರುವ, ನಾನಾಭರಣಗಳಿಂದಲಂಕೃತನಾದ, ರುದ್ರಾಕ್ಷಮಾಲೆಯಿಂದ ಶೋಭಿಸಲ್ಪಡುತ್ತಿರುವ ಚಂದ್ರಮೌಳೀಶ್ವರನನ್ನು ನಾರದನು ನೋಡಿದನು.

ಬಳಿಕ ಅವನು ಭಕ್ತಿಯಿಂದ ಭುಜವನ್ನು ಬಗ್ಗಿಸಿ ಆ ಜಗದೀಶ್ವರನ ಪಾದಗಳಲ್ಲಿ ತಲೆಬಾಗಿ ನಮಸ್ಕರಿಸಿದನು. ಅನಂತರ ಸಂತುಷ್ಟಹೃದಯದಿಂದ ಈಶ್ವರನನ್ನು ಸ್ತೋತ್ರಪಾಠಗಳಿಂದ ಶ್ಲಾಘಿಸಿ ಈಶ್ವರನ ಆಜ್ಞೆಯಿಂದ ಯೋಗಿ

ನಿಷಸಾದಾಜ್ಞಯಾ ಸ್ಥಾಣೋಃ ಸತ್ಕೃತೋ ಯೋಗಿಭಿಸ್ತದಾ ।
ಅಥಾಪೃಚ್ಛಚ್ಚ ಕುಶಲಂ ನಾರದಂ ಜಗತಾಂ ಗುರುಃ ॥ ೨೦ ॥

ಸ ಚ ಪ್ರಾಹ ಪ್ರಸಾದೇನ ಭವತಃ ಸರ್ವಮಸ್ತಿ ಮೇ ।
ಸರ್ವೇಷಾಂ ಯೋಗಿವರ್ಯಾಣಾಂ ಶೃಣ್ವತಾಂ ತತ್ರ ಬಾಡವಾಃ ॥ ೨೧ ॥

ಪಪ್ರಚ್ಛ ಶಾಂಭವಂ ಜ್ಞಾನಂ ಪಶುಪಾಶವಿಮೋಕ್ಷಣಂ ।
ಸ ಶಿವಃ ಸಾದರಂ ತಸ್ಯ ಭಕ್ತ್ಯಾ ಸಂತುಷ್ಟಮಾನಸಃ ॥ ೨೨ ॥

ಯೋಗಮಷ್ಟಾಂಗಸಂಯುಕ್ತಂ ಪ್ರಾಹ ಪ್ರಣತವತ್ಸಲಃ ।
ಸ ತಥಾ ಶಾಂಭವಂ ಜ್ಞಾನಂ ಶಂಕರಾಲ್ಲೋಕಶಂಕರಾತ್ ॥ ೨೩ ॥

ಸುಪ್ರಸನ್ನಮನಾ ನತ್ವಾ ಯಯೌ ನಾರಾಯಣಾಂತಿಕಂ ।
ತತ್ರಾಪಿ ನಾರದೋಽಭೀಕ್ಷ್ಣಂ ಗತಾಗತಪರಾಯಣಃ ॥ ೨೪ ॥

---

ಗಳಿಂದ ಸತ್ಕರಿಸಲ್ಪಟ್ಟು ಕುಳಿತನು. ಆಗ ಜಗದ್ಗುರುವಾದ ಈಶ್ವರನು ನಾರದನನ್ನು ಕುಶಲಪ್ರಶ್ನೆ ಮಾಡಿದನು.

೨೧-೨೬. "ನಾರದನು ಸ್ವಾಮಿಯೆ! ನಿನ್ನ ಅನುಗ್ರಹದಿಂದ ನನಗೆ ಸಕಲವೂ ಸಿದ್ಧವಾಗಿದೆ" ಎಂದು ಹೇಳಿದನು. ಬಳಿಕ ಅಲ್ಲಿ ಶ್ರವಣಮಾಡುತ್ತಿರುವ ಯೋಗಿವರ್ಯರ ಸಮ್ಮುಖದಲ್ಲಿ ನಾರದನು ಸಂಸಾರಪಾಶವನ್ನು ಬಿಡಿಸುವಂತಹ ಶಂಭುಜ್ಞಾನವನ್ನು ಪ್ರಶ್ನಿಸಿದನು.

ಭಕ್ತವತ್ಸಲನಾದ ಆ ಶಿವನು ಅವನ ಭಕ್ತಿಯಿಂದ ಸಂತುಷ್ಟಚಿತ್ತನಾಗಿ ವಿಶ್ವಾಸದಿಂದ ಅಷ್ಟಾಂಗಸಹಿತ ಯೋಗವನ್ನುಪದೇಶಿಸಿದನು.

ನಾರದನು ಲೋಕಸುಖಕರನಾದ ಶಂಕರನ ಉಪದೇಶದಿಂದ ಶಂಭುಜ್ಞಾನವನ್ನು ಹೊಂದಿ ಸಂತುಷ್ಟನಾಗಿ ಅವನಿಗೆ ನಮಸ್ಕಾರಮಾಡಿ ನಾರಾಯಣನ ಸಮೀಪಕ್ಕೆ ಬಂದನು.

ಸೇವಿತಂ ಯೋಗಿಭಿಃ ಸಿದ್ಧೈರ್ನಾರಾಯಣಮತೋಷಯೇತ್ ।
ಏತದ್ವಃ ಕೀರ್ತಿತಂ ವಿಪ್ರಾ ನಾರದೀಯಂ ಮಹನ್ಮಯಾ ॥ ೨೫ ॥

ಉಪಾಖ್ಯಾನಂ ವೇದಸಮಂ ಸರ್ವಶಾಸ್ತ್ರನಿದರ್ಶನಂ ।
ಚತುಷ್ಪಾದಸಮಾಯುಕ್ತಂ ಶೃಣ್ವತಾಂ ಜ್ಞಾನವರ್ಧನಂ ॥ ೨೬ ॥

ಯ ಏತತ್ಕೀರ್ತಯೇತದ್ವಿಪ್ರಾ ನಾರದೀಯಂ ಶಿವಾಲಯೇ ।
ಸಮಾಜೇ ದ್ವಿಜಮುಖ್ಯಾನಾಂ ತಥಾ ಕೇಶವಮಂದಿರೇ ॥ ೨೭ ॥

ಮಥುರಾಯಾಂ ಪ್ರಯಾಗೇ ಚ ಪುರುಷೋತ್ತಮಸನ್ನಿಧೌ ।
ಸೇತೌ ಕಾಂಚ್ಯಾಂ ಕುಶಸ್ಥಲ್ಯಾಂ ಗಂಗಾದ್ವಾರೇ ಕುಶಸ್ಥಲೇ ॥ ೨೮ ॥

ಪುಷ್ಕರೇಷು ನದೀತೀರೇ ಯತ್ರ ಕುತ್ರಾಪಿ ಭಕ್ತಿಮಾನ್ ।
ಸ ಲಭೇತ್ಸರ್ವಯಜ್ಞಾನಾಂ ತೀರ್ಥಾನಾಂ ಚ ಫಲಂ ಮಹತ್ ॥ ೨೯ ॥

---

ಗಮನಾಗಮನದಲ್ಲಿ ನಿರತನಾದ ನಾರದನು ಅಲ್ಲಿಯೂ ಸಹ ಯೋಗಿಗಳು ಮತ್ತು ಸಿದ್ಧರಿಂದ ಸೇವಿತನಾದ ನಾರಾಯಣನನ್ನು ಅತ್ಯಂತವಾಗಿ ಸಂತೋಷ ಪಡಿಸಿದನು.

ಶೌನಕಾದಿ ಬ್ರಾಹ್ಮಣರೇ ! ವೇದಕ್ಕೆ ಸಮಾನವು, ಸಕಲ ಶಾಸ್ತ್ರಾರ್ಥ ಪ್ರದರ್ಶಕವು, ನಾಲ್ಕುಪಾದಗಳಿಂದ ಯುಕ್ತವಾದುದು, ಶ್ರವಣಮಾಡುವವರಿಗೆ ಜ್ಞಾನವನ್ನು ವೃದ್ಧಿಗೊಳಿಸುವುದೂ ಆಗಿರುವ ಈ ನಾರದೀಯಬೃಹದುಪಾಖ್ಯಾನವನ್ನು ನಿಮಗೆ ಹೇಳಿರುವೆನು.

೨೭-೩೧. ಈ ನಾರಾದೀಯ ಪುರಾಣವನ್ನು ಶಿವಾಲಯ, ಬ್ರಾಹ್ಮಣರೇ ಮುಂತಾದವರ ಸಮಾಜ, ಕೇಶವಾಲಯ, ಮಥುರೆ, ಪ್ರಯಾಗ, ಪುರುಷೋತ್ತಮ ಸನ್ನಿಧಿ, ಸೇತು, ಕಾಂಚಿ, ಕುಶಸ್ಥಲೀ, ಗಂಗಾದ್ವಾರ, ಕುಶಸ್ಥಲ, ಪುಷ್ಕರ, ನದೀತೀರ ಇವುಗಳಲ್ಲಾವುದಾದರೊಂದು ಸ್ಥಾನದಲ್ಲಿ ಅಥವಾ ಎಲ್ಲಿಯಾದರೂ

ಗಾನಾನಾಂ ಚಾಪಿ ಸರ್ವೇಷಾಂ ತಪಸಾಂ ವಾಪ್ಯಶೇಷತಃ ।
ಉಪವಾಸಪರೋ ವಾಪಿ ಹವಿಷ್ಯಾಶೀ ಜಿತೇಂದ್ರಿಯಃ　　　　　　॥ ೩೦ ॥

ಶ್ರೋತಾ ಚೈವ ತಥಾ ವಕ್ತಾ ನಾರಾಯಣಪರಾಯಣಃ ।
ಶಿವಭಕ್ತಿರತೋ ವಾಪಿ ಶೃಣ್ವನ್ಸಿದ್ಧಿಮವಾಪ್ನುಯಾತ್　　　　　　॥ ೩೧ ॥

ಅಸ್ಮಿನ್ನಶೇಷಪುಣ್ಯಾನಾಂ ಸಿದ್ಧೀನಾಂ ಚ ಸಮುದ್ಭವಃ ।
ಕಥಿತಃ ಸರ್ವಪಾಪಘ್ನಃ ಪಠತಾಂ ಶೃಣ್ವತಾಂ ಸದಾ　　　　　　॥ ೩೨ ॥

ಕಲಿದೋಷಹರಂ ಪುಂಸಾಂ ಸರ್ವಸಂಪತ್ತಿವರ್ಧನಂ ।
ಸರ್ವೇಷಾಮೀಪ್ಸಿತಂ ಚೇದಂ ಸರ್ವಜ್ಞಾನಪ್ರಕಾಶಕಂ　　　　　　॥ ೩೩ ॥

---

ಪರಿಶುದ್ಧಪ್ರದೇಶದಲ್ಲಿ ಪಠನೆಮಾಡುವವನು ಸರ್ವಯಜ್ಞ, ಸಕಲತೀರ್ಥಗಳು, ಸಕಲದಾನತಪಸ್ಸುಗಳು ಇವುಗಳ ಮಹಾಫಲವನ್ನು ಪಡೆಯುವನು.

ಉಪವಾಸದಿಂದ ಅಥವಾ ಹವಿಷ್ಯವನ್ನೇ ತಿನ್ನುತ್ತಾ ಜಿತೇಂದ್ರಿಯನಾಗಿ ನಾರಾಯಣಭಕ್ತನು ಅಥವಾ ಶಿವಭಕ್ತನಾದ ಮನುಷ್ಯನು ಈ ಪುರಾಣಶ್ರವಣ ಪಠಣಗಳನ್ನು ಮಾಡಿದರೆ ಸಿದ್ಧಿಯನ್ನು ಹೊಂದುವನು.

೩೨-೩೪. ಇದರಲ್ಲಿ ಸಮಸ್ತ ಪಾಪಪರಿಹಾರಕವಾದ ಸಮಸ್ತ ಪುಣ್ಯಗಳ ಮತ್ತು ಸಿದ್ಧಿಗಳ ಉದ್ಭವಪ್ರಕಾರವು ಉಕ್ತವಾಗಿದೆ.

ಇದನ್ನು ಸರ್ವದಾ ಶ್ರವಣಪಠನಮಾಡುವ ಮನುಷ್ಯರಿಗೆ ಕಲಿದೋಷವು ಹೋಗಿ ಸಕಲ ಸಂಪತ್ತುಗಳೂ ಅಭಿವೃದ್ಧಿಯಾಗುವುವು.

ಶೈವಾನಾಂ ವೈಷ್ಣವಾನಾಂ ಚ ಶಾಕ್ತಾನಾಂ ಸೂರ್ಯಸೇವಿನಾಂ ।
ತಥೈವ ಗಾಣಪತ್ಯಾನಾಂ ವರ್ಣಾಶ್ರಮವತಾಂ ದ್ವಿಜಾಃ ॥ ೩೪ ॥

ತಪಸಾಂ ಚ ವ್ರತಾನಾಂ ಚ ಫಲಾನಾಂ ಸಂಪ್ರಕಾಶಕಂ ।
ಮಂತ್ರಾಣಾಂ ಚೈವ ಯಂತ್ರಾಣಾಂ ವೇದಾಂಗಾನಾಂ ವಿಭಾಗಶಃ ॥ ೩೫ ॥

ತಥಾಗಮಾನಾಂ ಸಾಂಖ್ಯಾನಾಂ ವೇದಾನಾಂ ಚೈವ ಸಂಗ್ರಹಂ ।
ಯ ಏತತ್ಪಠತೇ ಭಕ್ತ್ಯಾ ಶೃಣುಯಾದ್ವಾ ಸಮಾಹಿತಃ ॥ ೩೬ ॥

ಸ ಲಭೇದ್ವಾಂಛಿತಾನ್ಕಾಮಾನ್ದೇವಾದಿಷ್ವಪಿ ದುರ್ಲಭಾನ್ ।
ಶ್ರುತ್ವೇದಂ ನಾರದೀಯಂ ತು ಪುರಾಣಂ ವೇದಸಂಮಿತಂ ॥ ೩೭ ॥

ವಾಚಕಂ ಪೂಜಯೇದ್ಭಕ್ತ್ಯಾ ಧನರತ್ನಾಂಶುಕಾದಿಭಿಃ ।
ಭೂಮಿದಾನೈರ್ಗವಾಂ ದಾನೈ ರತ್ನದಾನೈಶ್ಚ ಸಂತತಂ ॥ ೩೮ ॥

---

ಈ ಪುರಾಣವು ಶೈವರು, ವೈಷ್ಣವರು, ಶಾಕ್ತರು, ಸೂರ್ಯಭಕ್ತರು, ಗಾಣಾಪತ್ಯರು ಮುಂತಾದ ವರ್ಣಾಶ್ರಮವುಳ್ಳ ಸರ್ವರಿಗೂ ಇಷ್ಟಾರ್ಥಪ್ರದ ಮತ್ತು ಸಕಲಜ್ಞಾನಪ್ರಕಾಶಕವೂ ಆಗಿದೆ.

೩೫-೪೨. ಈ ಪುರಾಣವು ತಪಸ್ಸು, ವ್ರತ, ಫಲ, ಮಂತ್ರ, ಯಂತ್ರ, ವೇದಾಂಗ ಇವುಗಳನ್ನು ಪ್ರತ್ಯೇಕವಾಗಿ ಪ್ರಕಾಶಪಡಿಸುತ್ತದೆ. ಮತ್ತು ಆಗಮ, ಸಾಂಖ್ಯ, ವೇದ ಇವುಗಳಿಗೆ ಸಂಗ್ರಹರೂಪವಾಗಿದೆ.

ಇಂತಹ ಪುರಾಣವನ್ನು ಭಕ್ತಿಯಿಂದ ಸಮಾಧಾನಮನಸ್ಕನಾಗಿ ಪಠನ ಶ್ರವಣಗಳನ್ನು ಮಾಡುವವನು ದೇವಾದಿಗಳಿಗೂ ಸಹ ದುರ್ಲಭವಾದ ಇಷ್ಟ ಕಾಮಗಳನ್ನು ಪಡೆಯುವನು.

ವೇದತುಲ್ಯವಾದ ಈ ನಾರದೀಯಪುರಾಣವನ್ನು ಶ್ರವಣಮಾಡಿದವನು ಧನ, ರತ್ನ, ವಸ್ತ್ರಮುಂತಾದುವು, ಭೂದಾನ, ಗೋದಾನ, ರತ್ನದಾನ, ಆನೆ

ಹಸ್ತ್ಯಶ್ವರಥದಾನೈಶ್ಚ ಪ್ರೀಣಯೇತ್ಸತತಂ ಗುರುಂ |
ಯಸ್ತು ವ್ಯಾಕುರುತೇ ವಿಪ್ರಾಃ ಪುರಾಣಂ ಧರ್ಮಸಂಗ್ರಹಂ || ೩೯ ||

ಚತುರ್ವರ್ಗಪ್ರದಂ ನೃಣಾಂ ಕೋನ್ಯಸ್ತತ್ಸದೃಶೋ ಗುರುಃ |
ಕಾಯೇನ ಮನಸಾ ವಾಚಾ ಧನಾದ್ಯೈರಪಿ ಸಂತತಂ || ೪೦ ||

ಪ್ರಿಯಂ ಸಮಾಚರೇತ್ತಸ್ಯ ಗುರೋರ್ಧರ್ಮೋಪದೇಶಿನಃ |
ಶ್ರುತ್ವಾ ಪುರಾಣಂ ವಿಧಿವದ್ಧೋಮಂ ಕೃತ್ವಾ ಸುರಾರ್ಚನಂ || ೪೧ ||

ಬ್ರಾಹ್ಮಣಾನ್ಭೋಜಯೇತ್ಪಶ್ಚಾಚ್ಛತಂ ಮಿಷ್ಟಾನ್ನಪಾಯಸೈಃ |
ದಕ್ಷಿಣಾಂ ಪ್ರದದೇಚ್ಛಕ್ತ್ಯಾ ಭಕ್ತ್ಯಾ ಪ್ರೀಯೇತ ಮಾಧವಃ || ೪೨ ||

---

ಕುದುರೆ ರಥಗಳ ದಾನ ಇವುಗಳಿಂದ ಪುರಾಣ ಹೇಳಿದ ಗುರುವನ್ನು ಯಾವಾಗಲೂ ಸಂತೋಷಪಡಿಸಬೇಕು.

ಬ್ರಾಹ್ಮಣರೇ! ಧರ್ಮಾದಿ ನಾಲ್ಕು ಪುರುಷಾರ್ಥಗಳನ್ನೂ ಕೊಡುವ, ಧರ್ಮಸಂಗ್ರಹ ರೂಪವಾದ ಪುರಾಣವನ್ನು ಹೇಳುವವನೇ ಗುರುವು. ಅವನಿಗೆ ಸಮನಾದ ಬೇರೆ ಗುರುವು ಯಾರೂ ಇಲ್ಲ. ಆದಕಾರಣ ಯಾವಾಗಲೂ ಶರೀರ, ವಾಕ್ಕು, ಮನಸ್ಸು ಮತ್ತು ಧನಗಳಿಂದ ಧರ್ಮೋಪದೇಶಕನಾದ ಆ ಗುರುವಿಗೆ ಪ್ರಿಯವಾದುದನ್ನೇ ಆಚರಿಸಬೇಕು.

ಈ ಪುರಾಣವನ್ನು ಕೇಳಿ ವಿಧ್ಯುಕ್ತಪ್ರಕಾರವಾಗಿ ಹೋಮಮಾಡಿ, ದೇವರಪೂಜೆಮಾಡಿ ಬಳಿಕ ಮೃಷ್ಟಾನ್ನಪಾಯಸಗಳಿಂದ ನೂರುಜನಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಕೊಡಬೇಕು. ಈರೀತಿ ಭಕ್ತಿಯಿಂದಾಚರಿಸಿದರೆ ಮಾಧವನು ಪ್ರಸನ್ನನಾಗುವನು.

ಯಥಾ ಶ್ರೇಷ್ಠಾ ನದೀ ಗಂಗಾ ಪುಷ್ಕರಂ ಚ ಸರೋ ಯಥಾ ।
ಕಾಶೀ ಪುರೀ ನಗೋ ಮೇರುರ್ದೇವೋ ನಾರಾಯಣೋ ಹರಿಃ ॥ ೪೩ ॥

ಕೃತಂ ಯುಗಂ ಸಾಮವೇದೋ ಧೇನುರ್ವಿಪ್ರೋನ್ನಮಂಬು ಚ ।
ಯೋಗೋ ಮೃಗೇಂದ್ರಃ ಪುರುಷೋಽಶ್ವತ್ಥಃ ಪ್ರಹ್ಲಾದ ಆನನಂ ॥ ೪೪ ॥

ಉಚ್ಚೈಃಶ್ರವಾ ವಸಂತಶ್ಚ ಜಪಃ ಶೇಷೋಽರ್ಯಮಾ ಧನುಃ ।
ಪಾವಕೋ ವಿಷ್ಣುರಿಂದ್ರಶ್ಚ ಕಪಿಲೋ ವಾಕ್ಪತಿಃ ಕವಿಃ ॥ ೪೫ ॥

ಅರ್ಜುನೋ ಹನುಮಾನ್ದರ್ಭಶ್ಚಿತ್ತಂ ಚಿತ್ರರಥೋಽಂಬುಜಂ ।
ಉರ್ವಶೀ ಕಾಂಚನಂ ಯದ್ವಚ್ಛ್ರೇಷ್ಠಾಶ್ಚೈತೇ ಸ್ವಜಾತಿಷು ॥ ೪೬ ॥

ತಥೈವ ನಾರದೀಯಂ ತು ಪುರಾಣೇಷು ಪ್ರಕೀರ್ತಿತಂ ।
ಶಾಂತಿರಸ್ತು ಶಿವಂ ಚಾಸ್ತು ಸರ್ವೇಷಾಂ ವೋ ದ್ವಿಜೋತ್ತಮಾಃ ॥ ೪೭ ॥

---

೪೩. ನದಿಗಳಲ್ಲಿ ಗಂಗೆಯು ಹೇಗೆ ಶ್ರೇಷ್ಠವೋ, ಸರೋವರಗಳಲ್ಲಿ ಪುಷ್ಕರವು ಹೇಗೆ ಉತ್ತಮವೋ, ಕ್ಷೇತ್ರಗಳಲ್ಲಿ ಕಾಶೀಪುರಿಯು ಹೇಗೆ ಉತ್ಕೃಷ್ಟವೋ, ಹೇಗೆ ಪರ್ವತಗಳಲ್ಲಿ ಮೇರುವು ವರಿಷ್ಠವೋ ಅದರಂತೆ ದೇವತೆಗಳಲ್ಲಿ ಲಕ್ಷ್ಮೀಪತಿಯಾದ ಹರಿಯು ಸರ್ವೋತ್ತಮನು.

೪೪-೪೭. ಕೃತಯುಗ, ಸಾಮವೇದ, ಗೋವು, ಬ್ರಾಹ್ಮಣ, ಅನ್ನ, ನೀರು, ಯೋಗ, ಸಿಂಹ, ಪುರುಷ, ಅಶ್ವತ್ಥ, ಪ್ರಹ್ಲಾದ, ಉಚ್ಚೈಃಶ್ರವಸ್ಸು, ವಸಂತಋತು, ಜಪ, ಶೇಷ, ಆದಿತ್ಯ, ಧನುಸ್ಸು, ಅಗ್ನಿ, ವಿಷ್ಣು, ಇಂದ್ರ, ಕಪಿಲ, ವಾಕ್ಪತಿ, ಶುಕ್ರ, ಅರ್ಜುನ, ಹನುಮಂತ, ದರ್ಭೆ, ಮನಸ್ಸು, ಚಿತ್ರರಥವೆಂಬ ಉದ್ಯಾನ, ಕಮಲ, ಉರ್ವಶೀ, ಸುವರ್ಣ ಇವುಗಳು ತಮ್ಮ ತಮ್ಮ ಜಾತಿಗಳಲ್ಲಿ ಹೇಗೆ ಶ್ರೇಷ್ಠವಾದುವೋ ಅದರಂತೆ ಪುರಾಣಗಳಲ್ಲಿ ನಾರದೀಯಪುರಾಣವು ಶ್ರೇಷ್ಠವಾದುದೆಂದು ಉಕ್ತವಾಗಿದೆ.

ಗಮಿಷ್ಯಾಮಿ ಗುರೋಃ ಪಾರ್ಶ್ವಂ ವ್ಯಾಸಸ್ಯಾಮಿತತೇಜಸಃ ।
ಇತ್ಯುಕ್ತ್ವಾಭ್ಯರ್ಚಿತಃ ಸೂತಃ ಶೌನಕಾದ್ಯೈರ್ಮಹಾತ್ಮಭಿಃ ॥ ೪೮ ॥

ಆಜ್ಞಪ್ತಶ್ಚ ಪುನಃ ಸರ್ವೈರ್ದರ್ಶನಾರ್ಥಂ ಗುರೋರ್ಯಯೌ ।
ತೇಽಪಿ ಸರ್ವೇ ದ್ವಿಜಶ್ರೇಷ್ಠಾಃ ಶೌನಕಾದ್ಯಾಃ ಸಮಾಹಿತಾಃ ॥
ಶ್ರುತಂ ಸಮ್ಯಗನುಷ್ಠಾಯ ತತ್ರ ತಸ್ಥುಶ್ಚ ಸತ್ರಿಣಃ ॥ ೪೯ ॥

ಕಲಿಕಲ್ಮಷವಿಷನಾಶನಂ ಹರಿಂ ಯೋ
ಜಪಪೂಜನವಿಧಿಭೇಷಜೋಽಪಸೇವೀ ।

ಶ್ರೇಷ್ಠರಾದ ಶೌನಕಾದಿ ಬ್ರಾಹ್ಮಣರುಗಳಿರಾ! ನಿಮ್ಮೆಲ್ಲರಿಗೂ ಶಾಂತಿ ಸುಖಗಳುಂಟಾಗಲಿ.

೪೮-೪೯. ನಾನು ನಮ್ಮ ಗುರುಗಳಾದ ಅಪರಿಮಿತ ತೇಜಸ್ವಿಗಳಾದ ವ್ಯಾಸರಬಳಿಗೆ ಹೋಗುವೆನು.

ಸೂತನು ಹೀಗೆ ಹೇಳಿ ಮಹಾತ್ಮರಾದ ಶೌನಕಾದಿ ಬ್ರಾಹ್ಮಣರಿಂದ ಪೂಜೆಮಾಡಿಸಿಕೊಳ್ಳಲ್ಪಟ್ಟು ಪುನಃ ಸರ್ವರ ಅನುಮತಿಯನ್ನೂ ಪಡೆದು ಗುರುಗಳ ದರ್ಶನಕ್ಕಾಗಿ ಪ್ರಯಾಣಮಾಡಿದನು.

ಆ ಶೌನಕಾದಿ ದ್ವಿಜಶ್ರೇಷ್ಠರೆಲ್ಲರೂ ಚಿತ್ತಸಮಾಧಾನವನ್ನು ಹೊಂದಿ ಶ್ರುತವಾದುದನ್ನು ಚೆನ್ನಾಗಿ ಅನುಷ್ಠಾನಮಾಡಿಕೊಂಡು ಅಲ್ಲಿಯೇ ಯಾಗಾದಿಗಳನ್ನು ಮಾಡಿಕೊಂಡಿದ್ದರು.

೫೦. ಕಲಿಗಾಲಪ್ರಯುಕ್ತವಾದ ಕಲ್ಮಷವೆಂಬ ವಿಷವನ್ನು ನಾಶಪಡಿಸುವಂತಹ ಹರಿಯನ್ನು ಯಾವನು ಜಪ, ಪೂಜೆಗಳ ವಿಧಾನವೆಂಬ ಔಷಧೋಪ

ಸ ತು ನಿರ್ವಿಷಮನಸಾ ಸಮೇತ್ಯ ಯೋಗಂ
ಲಭತೇ ಸತತಮಭೀಪ್ಸಿತಂ ಹಿ ಲೋಕಂ ॥ ೫೦ ॥

ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಚತುರ್ಥಪಾದೇ ಪುರಾಣಮಹಿಮಾವರ್ಣನೋ ನಾಮ
ಪಂಚವಿಂಶೋತ್ತರಶತತಮೋಽಧ್ಯಾಯಃ

ಇತಿ ಚತುರ್ಥಃ ಪಾದಃ

ಪೂರ್ವಭಾಗಃ ಸಮಾಪ್ತಃ

---

ಸೇವಿಯಾಗಿ ಭಜಿಸುವನೋ ಅಂತಹವನು ಮನಃಕಾಲುಷ್ಯವನ್ನು ಹೋಗಲಾಡಿಸಿಕೊಂಡು ಯೋಗಸಿದ್ಧಿಯನ್ನು ಹೊಂದಿ, ತಾನು ಅಪೇಕ್ಷಿಸಿದ ಲೋಕದಲ್ಲಿ ಸುಖವಾಗಿರುವನು.

ಇಂತು ಶ್ರೀನಾರದೀಯಪುರಾಣದೊಳು ಬೃಹದುಪಾಖ್ಯಾನವೆಂಬ ಪೂರ್ವಭಾಗದ
ನಾಲ್ಕನೆಯ ಪಾದದಲ್ಲಿ ಪುರಾಣಮಾಹಾತ್ಮ್ಯ ವರ್ಣನೆಯೆಂಬ
ನೂರಿಪ್ಪತ್ತೈದನೆಯ ಅಧ್ಯಾಯವು ಮುಗಿದುದು.

ಇಲ್ಲಿಗೆ ನಾಲ್ಕನೆಯ ಪಾದವು ಮುಗಿಯಿತು.

ಇಂತು ವಿದ್ವದ್ವರ ಶ್ರೀಗೋವಿಂದಕೃಷ್ಣಾಚಾರ್ಯತನಯ
ದೊಡ್ಡಬಳ್ಳಾಪುರ ವಾಸುದೇವಾಚಾರ್ಯ ರಚಿತವಾದ
ನಾರದೀಯಪುರಾಣದ ಕರ್ಣಾಟಕ ಭಾಷಾನು
ವಾದದೊಳು ಪೂರ್ವಭಾಗವು ಮುಗಿದುದು.

ಶ್ರೀಕೃಷ್ಣಾರ್ಪಣಮಸ್ತು

॥ ಮಂಗಳಂ ॥

